# ಹೊಸತು

## ಒಳಗೇನಿದೆ.....




ಚಿತ್ರಗಳು : ಶ್ರೀಹರಿ, ರಾಮಚಂದ್ರ ಕೊಪ್ಪಲು, ಕಮಲಂ ಅರಸು, ಸ್ಯಾಮ್

ಮುಖಚಿತ್ರ : ಸಂಜೆ ಸೊಬಗು (ವರ್ಣ ಪಾರದರ್ಶಿಕೆ - ಕೆ. ಪಿ. ಸ್ವಾಮಿ)

ಒಳಚಿತ್ರ : ಪಾಲ್ ಸ್ವೀಜಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಲಾ**ಲ ಕೃಷ್ಣ ಅದ್ವಾನಿಯವರು ರಥವೇರಿದರೆಂದರೆ ಮತದಾರರಾದ ಅರ್ಜುನರಿಗೆ ಧರ್ಮಬೋಧೆಯನ್ನು ಮಾಡುವ ಹುಮ್ಮಸ್ಸಿನಲ್ಲಿ ಸರಿ-ತಪ್ಪುಗಳ ಪರಿಗಣನೆಯನ್ನು ಮರೆತು ಬಿಡುತ್ತಾರೆ. ಇಂಥವರನ್ನು ನಮ್ಮ ಕೆಲವು ಮಾಧ್ಯಮಗಳು 'ರಾಜರ್ಷಿ' ಪದವಿಗೇರಿಸಿರುವುದು ವ್ಯಕ್ತಿಪೂಜೆಯ ಮೂರ್ಖತನದ ಸಾಕಾರರೂಪವಾಗಿದೆ. ಇತ್ತೀಚೆಗೆ ಅವರು ಪದೇ ಪದೇ ಉಸುರುತ್ತಿರುವ ಒಂದು ಮಾತನ್ನು ತಮ್ಮ ಸರ್ಕಾರದ ಹೆಗ್ಗಳಿಕೆಗಳ ಪಟ್ಟಿಯಲ್ಲಿ ಅದ್ವಾನಿಯವರು ಸೇರಿಸಿದ್ದಾರೆ. ಅವರ ಹೇಳಿಕೆ ಇದು : ಈಚೆಗೆ ಭಾರತ ಮತ್ತು ಪಾಕಿಸ್ತಾನ ದೇಶಗಳು ಮೈತ್ರಿಯುತ ವಾತಾವರಣದಲ್ಲಿ ಮಾತುಕತೆಗೆ ಮುಂದಾಗಿರುವುದರಿಂದ ನಮ್ಮ ದೇಶದಲ್ಲಿ ಹಿಂದು ಮತ್ತು ಮುಸಲ್ಮಾನರು ಪರಸ್ಪರ ಸ್ನೇಹ ಮತ್ತು ನಂಬಿಕೆಗಳಿಂದ ನಡೆದುಕೊಳ್ಳುತ್ತಿದ್ದಾರೆ.

ಇಲ್ಲಿ ಹಲವು ಪ್ರಶ್ನೆಗಳು ಏಳುತ್ತವೆ : ಈವರೆಗೆ ಅವರು ಹಾಗೆ ಎಂದೂ ನಡೆದು ಕೊಂಡಿರಲಿಲ್ಲವೆ ? ಪಾಕಿಸ್ತಾನದೊಡನೆ ಘರ್ಷಣೆ ಇದ್ದಾಗಲೆಲ್ಲ ನಮ್ಮಲ್ಲಿ ಮತೀಯ ಗಲಭೆಗಳಾದುವೆ? ಈ ಕೋಮುಗಳ ನಡುವೆ ಆಗಾಗ್ಗೆ ಸಾಮರಸ್ಯ ಕದಡಲು ಕಾರಣವೇನು ಮತ್ತು ಹಾಗೆ ಕದಡುವವರು ಯಾರು ? ಈ ಪ್ರಶ್ನೆಗಳೆಲ್ಲವನ್ನೂ ಬದಿಗೊತ್ತುವುದು ಸರಿಯಲ್ಲ. ಅದ್ವಾನಿಯವರಿಗೆ ಅವಕ್ಕೆಲ್ಲಾ ಸರಿಯಾದ ಉತ್ತರ ಗೊತ್ತಿರಬೇಕು; ಏಕೆಂದರೆ, ಅವರು ನಮ್ಮ ದೇಶದ ಗೃಹಮಂತ್ರಿ. ಅವರ ಸೂಚ್ಯಾರ್ಥ ಸ್ಪಷ್ಟವಾಗಿದೆ : ಮುಸಲ್ಮಾನರು ನಮ್ಮ ದೇಶದಲ್ಲಿದ್ದುಕೊಂಡು ಪಾಕಿಸ್ತಾನದತ್ತ ಸದಾ ನೋಡುತ್ತಿರುತ್ತಾರೆ ; ಅವರು ಸಮೀಕರಿಸಿಕೊಳ್ಳುವುದು ಆ ದೇಶದೊಡನೆ.

ಹಿಂದೆ ಕಟುವಾದ ಮಾತುಗಳಲ್ಲಿ ಮಾಡುತ್ತಿದ್ದ ಆಪಾದನೆಯನ್ನು ಅದ್ವಾನಿ ಈಗ ಬೇರೊಂದು ರೀತಿಯಲ್ಲಿ ಮಾಡುತ್ತಿದ್ದಾರೆ. ಅಪಾಯ ಇರುವುದೆಲ್ಲಿ ? ಮುಸಲ್ಮಾನರು ಸಹಜವಾಗಿಯೇ ಬೇರೊಂದು ರಾಷ್ಟ್ರದೊಡನೆ ಮೇಳೈಸಿಕೊಳ್ಳುತ್ತಾರೆ ಮತ್ತು ಅದನ್ನು ನಾವು (ಅಂದರೆ, ಅದ್ವಾನಿ ಪಕ್ಷ ಮತ್ತು ಸರ್ಕಾರ) ಸರಿಪಡಿಸುತ್ತಿದ್ದೇವೆ, ಎಂದು ಹೇಳುವುದರಲ್ಲಿ, ಒಂದು ಇಡೀ ಮತೀಯ ಗುಂಪನ್ನು ಸಂಶಯದಿಂದ ನೋಡುವುದನ್ನು ಜನರಿಗೆ ಕಲಿಸಿದರೆ ನಮ್ಮ ಭವಿಷ್ಯ ಏನಾಗಬಹುದು ? ಅದ್ವಾನಿ ಚುನಾವಣೆಯಲ್ಲಿ ಗೆಲ್ಲಬಹುದು, ಆದರೆ ಆಮೇಲೆ ರಕ್ತದ ಕೋಡಿ ಹರಿಸುವ ಮನೋಭೂಮಿಕೆಯನ್ನು ಈಗಲೇ ರಚಿಸಿಬಿಟ್ಟಿರುತ್ತಾರೆ.

ಇಷ್ಟಕ್ಕೂ ಪಾಕಿಸ್ತಾನದ ಜೊತೆ ಮಾತುಕತೆ ಸ್ವಯಂಪ್ರೇರಿತವಲ್ಲ. ಅಮೆರಿಕಾ ಕಿವಿ ಹಿಂಡಿ ಮಾಡಿಸುತ್ತಿರುವ ಕೆಲಸ ಇದು. ನಮಗೆ ಸ್ವಂತಿಕೆಯಿಂದ ಮಾಡುವ ಮಾತುಕತೆ ಬೇಕು. ಪವೆಲ್ ಇತ್ತೀಚೆಗೆ ಹೇಳಿದ್ದಾನೆ, ನ್ಯಾಟೋ ಹೊರಗಣ ಸಖ್ಯ ಪಾಕಿಸ್ತಾನ-ಅಮೆರಿಕಾದ್ದು, ಎಂದು. ಲಾಡೆನ್‌ನನ್ನು ಹಿಡಿದುಕೊಡುವವನು ಮುಖ್ಯವೋ, ಭಾರತ ಮುಖ್ಯವೋ ಎಂಬುದು ಪಾವೆಲ್‌ಗೆ ಗೊತ್ತು. ಅದನ್ನು ತಿಳಿದುಕೊಳ್ಳಲು ಅದ್ವಾನಿ ಬೌದ್ಧಿಕವಾಗಿ ಬೆಳೆಯುವ ಅಗತ್ಯವಿದೆ.

* * *

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್‌ಗಳಲ್ಲಿ ವಿದ್ಯಾರ್ಥಿ ಶುಲ್ಕ ಕಡಿಮೆ ಮಾಡಿರುವ ಕೇಂದ್ರ ಸರ್ಕಾರವು ನ್ಯಾಯಾಲಯದ ಮುಂದೆ ಒಂದು ಮುಚ್ಚಳಿಕೆಯನ್ನು ಬರೆದುಕೊಡಲು ನಿರಾಕರಿಸಿರುವುದು ಸುದ್ದಿಯಾಗಿದೆ. ತಾನು ಮಧ್ಯಪ್ರವೇಶ ಮಾಡಿ ಸಂಸ್ಥೆಗಳ ಕಾರ್ಯಾಚರಣೆಗೆ ಅಡ್ಡಿ ತರುವುದಿಲ್ಲವೆಂದು ಸರ್ಕಾರ ಹೇಳಿಕೆ ನೀಡಬೇಕಿತ್ತು. ಹಾಗೆ ನೋಡಿದರೆ, ಯಾವ ಸರ್ಕಾರ ತಾನೆ ಹಾಗೆ ಹೇಳಲು ಸಾಧ್ಯ ? ತನ್ನ ಕಾರ್ಯಾಚರಣೆಯ ವ್ಯಾಪ್ತಿಯನ್ನು ಕುಗ್ಗಿಸಿಕೊಂಡು ಕೇವಲ ಪ್ರೇಕ್ಷಕನಂತಿರುವುದು ಸರ್ಕಾರಕ್ಕೆ ಆಗುವುದಿಲ್ಲ. ಹಣವನ್ನು ಕೊಡಬೇಕು, ಆದರೆ ನಿಯಂತ್ರಣದಲ್ಲಿ ಪಾತ್ರವಿಲ್ಲ ಎಂಬುದು ಸರ್ಕಾರಕ್ಕೆ ಅನ್ವಯವಾಗುವಂತಿಲ್ಲ. ಜೋಶಿಯಂತಹ ಸಚಿವರು ಎಲ್ಲ ಸಂಸ್ಥೆಗಳಲ್ಲೂ ಮೂಗುತೂರಿಸಿರುವುದು ಆತಂಕ ಹುಟ್ಟಿಸಿದೆ. ಶುಲ್ಕ ಕಡಿಮೆ ಮಾಡಿ ನಾಳೆ ಅನುದಾನವನ್ನು ಕಡಿತಗೊಳಿಸಿದರೆ ಸಮಸ್ಯೆಯನ್ನೆದುರಿಸುವುದು ಹೇಗೆಂಬುದು ಅವರ ಆತಂಕ. ಈ ಸಂಸ್ಥೆಗಳು ದೇಶ-ವಿದೇಶಗಳ ಕಂಪನಿಗಳ ಕಾರುಬಾರು ನೋಡಿಕೊಳ್ಳುವವರನ್ನು ತಯಾರಿಸುತ್ತವೆ. ಅಲ್ಲಿ ಪ್ರವೇಶ ಪಡೆಯುವವರು ಮೇಲಿನ ವರ್ಗದವರು, ಶ್ರೀಮಂತರು. ಬೇರೆ ವರ್ಗಗಳವರ ಜೊತೆ ಬೆರೆಯುವುದು ಅವರಿಗೊಂದು ಕಳಂಕ ! ಅದು ವರ್ಗಸಂಕರವಾಗುತ್ತದೆ. ಜೋಶಿಯವರಿಗೆ ಆ ವರ್ಗಕ್ಕೆ ಅಸಮಾಧಾನ ತರುವ ಉದ್ದೇಶವಿಲ್ಲ. ಈ ಸಂಸ್ಥೆಗಳು 'ಭಾರತೀಯ' ಪಠ್ಯ ವಿಷಯಗಳನ್ನು ಅಳವಡಿಸಿಕೊಳ್ಳಬೇಕೆಂಬುದು ಅವರ ವ್ಯಾಮೋಹ. ಉದಾಹರಣೆಗೆ, ಭಗವದ್ಗೀತೆಯು ಕಾರ್ಪೊರೇಟ್ ಮ್ಯಾನೇಜ್‌ಮೆಂಟ್‌ಗೆ ಹೇಗೆ ಒತ್ತಾಸೆ ನೀಡುತ್ತದೆ ? ಇದನ್ನೆಲ್ಲಾ ಅಧ್ಯಯನ ವಿಷಯದಲ್ಲಿ ಸೇರಿಸಬೇಕೆಂದು ತಾಕೀತು ಬಂದೀತೆಂದು ಈ ಸಂಸ್ಥೆಗಳ ಆಡಳಿತ ಮಂಡಲಿಗಳಿಗೆ ಅನುಮಾನಗಳಿವೆ. ಲಕ್ಷಗಟ್ಟಲೆ ಶುಲ್ಕ ನೀಡುವ ಉಚ್ಚವರ್ಗದವರಿಗಾಗಿಯೇ ಸೃಷ್ಟಿಸಲಾಗಿರುವ ಈ ಸಂಸ್ಥೆಗಳಿಗೆ ಈಗಾಗಲೇ ಸಾರ್ವಜನಿಕರ ಹಣ ಕೋಟಿಗಟ್ಟಲೆ ನೀಡಲಾಗಿದೆ. ನ್ಯಾಯಾಲಯವು ತೀರ್ಪು ಕೊಡುವಾಗ ಇದನ್ನು ಗಮನಿಸುತ್ತದೆಂಬ ಭರವಸೆಯೇನೂ ಇಲ್ಲ.

ತಿಂಗಳ ಪತ್ರಿಕೆ
**ಹೊಸತು**
ನಮ್ಮದಿಯು ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಸಂಪುಟ-೫ ಸಂಚಿಕೆ - ೯ ಏಪ್ರಿಲ್ ೨೦೦೪



**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

## ಸಂಪಾದಕೀಯ

# ಪಾಲ್ ಸ್ವೀಜಿ

ತಮ್ಮ ೯೪ನೆಯ ವಯಸ್ಸಿನಲ್ಲಿ ಪಾಲ್ ಸ್ವೀಜಿ ಇದೇ ಫೆಬ್ರವರಿ ೨೮ರಂದು ತೀರಿಕೊಂಡರು. ಅರ್ಥಶಾಸ್ತ್ರದ ಉದ್ದಾಮ ಪಂಡಿತರಾಗಿದ್ದ ಪಾಲ್ ನ್ಯೂಯಾರ್ಕಿನಲ್ಲಿದ್ದುಕೊಂಡು ಕಳೆದ ೫೫ ವರ್ಷಗಳಿಂದ 'ಮಂತ್ಲಿ ರಿವ್ಯೂ' ಎಂಬ ವಿಖ್ಯಾತ ಮಾಸಿಕವನ್ನು ಹೊರತರುತ್ತಿದ್ದರು. ಮಾರ್ಕ್ಸ್‌ವಾದದ ಪ್ರಮೇಯಗಳನ್ನು ಸಮಕಾಲೀನ ವಿದ್ಯಮಾನಗಳ ಹಿನ್ನೆಲೆಯಲ್ಲಿ ಆಳವಾಗಿ ಪರಿಶೀಲಿಸುವ ಮತ್ತು ಹಿಗ್ಗಿಸುವ ನಿಟ್ಟಿನಲ್ಲಿ ಅತ್ಯಂತ ಪ್ರಜ್ಞಾವಂತ ಕ್ರಿಯಾಶೀಲರಾಗಿ ದುಡಿದ ಪಾಲ್ ಗಾಂಭೀರ್ಯ, ವಿನಯ ಮತ್ತು ಬದ್ಧತೆಗೆ ಹೆಸರಾಗಿದ್ದವರು. ಈ ನಗುಮುಖದ ಚೇತನ ಖಂಡಿತವಾದಿಯಾಗಿ ಅಮೆರಿಕಾದ ಸರ್ಕಾರ ಮತ್ತು ಅದರ ಸಮರ್ಥಕರಾದ ಬೌದ್ಧಿಕ ವಲಯದ ಮುಂದಾಳುಗಳಿಗೆ ಸದಾ ಒಂದು ಸವಾಲಾಗಿದ್ದರು. ದೊಡ್ಡ ಬಂಡವಾಳಗಾರರ ಪತ್ರಿಕೆಗಳ ಸಂಪಾದಕರಿಗೆ ಹಾಗೂ ರಾಜಕೀಯ-ಆರ್ಥಿಕ ವಿಶ್ಲೇಷಕರಿಗೆ ಇವರ ಮೊನಚು ಟೀಕಾಸ್ತ್ರದ ಪೆಟ್ಟು ಪ್ರಬಲವಾಗಿರುತ್ತಿತ್ತು. ಆದರೆ ತಮ್ಮ ದೇಶದಲ್ಲಿ ಹೋರಾಟಕ್ಕೆ ಅಗತ್ಯವಾದ ಸಂಘಟನೆಯನ್ನು ರೂಪಿಸುವಲ್ಲಿ ಯಶಸ್ಸು ಕಾಣದೆ ತಮ್ಮ ಸೈದ್ಧಾಂತಿಕ ಚರ್ಚೆಗಳನ್ನು ಬೇರೆ ರಾಷ್ಟ್ರಗಳ ದುಡಿಯುವ ವರ್ಗಕ್ಕೆ ಮಾರ್ಗದರ್ಶಿ ಸೂತ್ರಗಳ ರೂಪದಲ್ಲಿ ಬಿಟ್ಟುಹೋಗುವ ದುರಂತ ಸ್ವೀಜಿಯವರದಾಯಿತು. ತಮ್ಮ ಸರ್ಕಾರದ ಧೂರ್ತತೆಯನ್ನು ಬಯಲಿಗೆಳೆಯುವ ಅಮೆರಿಕಾದ ಚಿಂತಕರೆಲ್ಲಾ ಒಗ್ಗೂಡಿ ಏನಾದರೊಂದು ಕಾರ್ಯಾಚರಣೆಯಲ್ಲಿ ತೊಡಗಲು ಶ್ರಮಿಸಿದ್ದೇ ಕಡಿಮೆ. ಅವರ ಪೈಕಿ ಇದ್ದುದರಲ್ಲಿ ಸ್ವಲ್ಪಮಟ್ಟಿಗೆ ದುಡಿಯುವ ವರ್ಗದ ಜೊತೆ ಜೀವಂತ ಸಂಪರ್ಕವಿರಿಸಿಕೊಂಡಿದ್ದವರಲ್ಲಿ ಪಾಲ್ ಪ್ರಮುಖರು. ಕ್ಯೂಬಾದ ಜೊತೆ ಮೊದಲಿಂದಲೂ ಸಂಪರ್ಕವಿರಿಸಿಕೊಂಡಿದ್ದವರಲ್ಲಿ ಪಾಲ್ ಪ್ರಮುಖರು. ಕ್ಯೂಬಾದ ಕ್ರಾಂತಿಯ ಜೊತೆ ಸಮೀಕರಿಸಿಕೊಂಡ ಅವರು ಕ್ಯಾಸ್ಟ್ರೋ, ಚೆ ಗೆವಾರ, ಮುಂತಾದ ನಾಯಕರೊಡನೆ ಅಪೂರ್ವ ಮೈತ್ರಿಯನ್ನಿರಿಸಿಕೊಂಡವರು. ಸುಮಾರು ೨೫ ವರ್ಷಗಳ ಹಿಂದೆ ಇವರ ''ಸಮಾಜವಾದದ ಪರಿಚಯ'' ಎಂಬ ಪುಸ್ತಕವು ಕನ್ನಡದಲ್ಲಿ ಹೊರಬಂತು. ಆ ಪ್ರಕಾಶನಕ್ಕೆ ಸಮ್ಮತಿ ನೀಡಬೇಕೆಂದು ಕೇಳಿದಾಗ ಅವರ ಉತ್ತರ ಭಾಗಶಃ ಹೀಗಿತ್ತು : ''ನನಗೆ ಹೆಸರೇ ಗೊತ್ತಿಲ್ಲದ ನಿಮ್ಮ ಭಾಷೆಯಲ್ಲಿ ಅದನ್ನು ಪ್ರಕಟಿಸಲು ಖಂಡಿತ ನನ್ನ ಒಪ್ಪಿಗೆ ಇದೆ. ನಿಮ್ಮಿಂದ ನಾನೇನೂ ಹಣ ಬಯಸುವುದಿಲ್ಲ. ನಮ್ಮ ಲೆಕ್ಕದ ಪುಸ್ತಕದಲ್ಲಿ ದಾಖಲಾಗಬೇಕಾಗಿರುವುದರಿಂದ ದಯವಿಟ್ಟು ಎರಡು ಡಾಲರ್ ಕಳಿಸಿ. ತಾಂತ್ರಿಕ ಕಾರಣಗಳಿಂದ ಅದನ್ನು ಕಳಿಸಲಾಗದಿದ್ದರೆ ಚಿಂತೆ ಬೇಡ, ನಾವದನ್ನು ತುಂಬಿಕೊಳ್ಳುತ್ತೇವೆ.''

ಹಾರ್ವರ್ಡ್ ಮತ್ತು ಲಂಡನ್‌ಗಳಲ್ಲಿ ವ್ಯಾಸಂಗ ಮಾಡಿದ ಸ್ವೀಜಿ ಸಾಕಷ್ಟು ಶ್ರೀಮಂತ ಕುಟುಂಬದವರು. ನಂತರ ಹಾರ್ವರ್ಡ್, ಕಾರ್ನೆಲ್, ಸ್ಟಾನ್‌ಫರ್ಡ್ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ಅಧ್ಯಾಪಕರಾಗಿದ್ದು ಒಮ್ಮೆ ತಮ್ಮ 'ಕಮ್ಯುನಿಸ್ಟ್ ಹಿನ್ನೆಲೆ'ಯ ಕಾರಣದಿಂದಾಗಿ ಹಾರ್ವರ್ಡ್‌ನಿಂದ ಉಚ್ಚಾಟಿಸಲ್ಪಟ್ಟಿದ್ದರು. ''ದಿ ಥಿಯರಿ ಆಫ್ ಕ್ಯಾಪಿಟಲಿಸ್ಟ್ ಡೆವಲಪ್‌ಮೆಂಟ್'' ಎಂಬುದು ಅವರ ಅತಿಪ್ರಶಸ್ತವಾದ ಕೃತಿ. ಪಾಲ್ ಬರಾನ್ ಒಡಗೂಡಿ ಬರೆದ ''ಮನಾಪಲಿ ಕ್ಯಾಪಿಟಲ್'' ಇಂದಿಗೂ ಬಹಳ ಪ್ರಸ್ತುತವಾಗುವಂತಹ ಮಹದ್ಗ್ರಂಥ. ಮೆಕಾರ್ಥಿ ಎಂಬ ಸೆನೆಟ್ ಸದಸ್ಯ ಅಮೆರಿಕಾದಲ್ಲಿ ದಾಂಧಲೆ ನಡೆಸಿದ ೧೯೫೦ರ ದಶಕದಲ್ಲಿ ಇವರ ಮೇಲೆ ಆಪಾದನೆ ಹೊರಿಸಿ ವಿಚಾರಣೆಗೆ ಗುರಿಮಾಡಿದಾಗ ''ರಾಜಕೀಯ ಪ್ರಶ್ನೆಗಳಿಗೆ ಈ ಸಮಿತಿಯ ಮುಂದೆ ಉತ್ತರ ಕೊಡದಿರುವ ಹಕ್ಕು ನನ್ನದು'' ಎಂದು ಪ್ರತಿಪಾದಿಸಿದ ಪಾಲ್, ತಮ್ಮ ಜೊತೆಗಾರ ಲಿಯೋ ಹ್ಯೂಬರ್‌ಮನ್‌ರನ್ನೇಕೆ ಆಪಾದಿತರನ್ನಾಗಿ ಮಾಡಲಿಲ್ಲವೆಂಬುದು ತಮಗೆ ಇಂದಿಗೂ ಗೂಢವಾಗಿಯೇ ಉಳಿದಿದೆ ಎನ್ನುತ್ತಿದ್ದರು. ''ನನ್ನ ವಿದ್ಯಾಭ್ಯಾಸದಿಂದ ಪ್ರಪಂಚದ ಘಟನೆಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗಿರಲಿಲ್ಲ. ಮಾರ್ಕ್ಸ್‌ವಾದ ಆ ಸಾಮರ್ಥ್ಯವನ್ನು ನೀಡಿತು,'' ಎಂದು ಒಂದು ಸಂದರ್ಶನದಲ್ಲಿ ಹೇಳಿದ್ದ ಪಾಲ್ ಮುಂದುವರಿದು ತಮ್ಮ ದೇಶದ ಸಂದರ್ಭವನ್ನು ವಿಶ್ಲೇಷಿಸಿದ್ದುದು ಹೀಗೆ : ''ಬೇರೆ ದೇಶಗಳಿಗೆ ಹೋಲಿಸಿದರೆ ನಮ್ಮ ದೇಶದಲ್ಲಿ ಹೇಗೋ ಮೇಲೇರುತ್ತಾ ಹೋಗುವುದು ಸಾಧ್ಯವಿದೆ. ಅದರ ಒಂದು ಪರಿಣಾಮವೆಂದರೆ, ದುಡಿಯುವ ವರ್ಗವು ಕ್ರಮೇಣ ತನ್ನ ನಾಯಕರನ್ನು ಕಳೆದುಕೊಳ್ಳುತ್ತಿರುತ್ತದೆ. ನಮ್ಮ ದುಡಿಯುವ ವರ್ಗ ಸಹ ವಿಭಜಿತವಾದ್ದು; ಬಿಳಿ - ಕರಿ, ಈ ಜನಾಂಗ - ಆ ಜನಾಂಗ, ಮುಂತಾಗಿ. ಆಳುವ ವರ್ಗಕ್ಕೆ ಇದೊಂದು ವರಪ್ರದಾನ; ಏಕೆಂದರೆ, ಒಡೆದು ಆಳುವುದು ಅತಿಸುಲಭ. ಬೇರಾವ ದೇಶದಲ್ಲೂ ಆಳುವ ವರ್ಗಕ್ಕೆ ಇಷ್ಟೊಂದು ಸುಗಮವಾದ ಸಾಧನ ದೊರೆತಿಲ್ಲ.''

ಸೋವಿಯತ್ ಒಕ್ಕೂಟದ ಪತನ, ಜಾಗತೀಕರಣ, ಏಕಧ್ರುವದ ವಿಶ್ವ, ಮುಂತಾದ ಅವಘಡಗಳ ನಡುವೆಯೂ ''ಸಮಾಜವಾದದ ಭವಿಷ್ಯವೇನು'' ಎಂಬುದಕ್ಕಿಂತಲೂ ''ಬಂಡವಾಳಶಾಹಿಯ ಭವಿಷ್ಯವೇನು'' ಎಂಬ ಪ್ರಶ್ನೆಯೇ ನಾಳಿನ ಸ್ವರೂಪವನ್ನು ನಿರ್ಧರಿಸುವಂಥದು ಎಂದವರ ನಂಬಿಕೆಯಾಗಿತ್ತು. ''ಬಂಡವಾಳಶಾಹಿಯು ವಿಶ್ವದ ಮೂಲಭೂತ ಸಮಸ್ಯೆಗಳನ್ನು ಬಗೆಹರಿಸಿ ತನಗೆ ಎಂದೂ ಬಿಕ್ಕಟ್ಟು ಬಾರದಂತಹ ಜಾಗತಿಕ ಸಮಾಜವನ್ನು ನಿರ್ಮಿಸಲು ಸಮರ್ಥವಾದರೆ ಗೆಲುವು ಬಂಡವಾಳಶಾಹಿಗೆ. ಆದರೆ ಅದು ಹಾಗೆ ಮಾಡಲಾರದು. ಪ್ರಾಕೃತಿಕ ಸಂಪತ್ತಾದ ಗಾಳಿ, ನೀರು ಮತ್ತು ಭೂಮಿಯನ್ನು ಸಹ ಬಂಡವಾಳಶಾಹಿಯು ಮನುಕುಲಕ್ಕೆ ವಿರೋಧ ಬಾರದಂತೆ ಏಕತಾನತೆಯಿಂದ ಸಂಯೋಜಿಸಲು ಶಕ್ಯವಿಲ್ಲ. ಅದರ ದೋಚುವಿಕೆಗೆ ಪಾರವಿಲ್ಲ. ಆದ್ದರಿಂದ ನಾಗರಿಕತೆಯನ್ನು ಉಳಿಸಿಕೊಳ್ಳಲು ನಾವು ಬಂಡವಾಳಶಾಹಿಯನ್ನು ಹೊರದೂಡಲೇಬೇಕಾಗುತ್ತದೆ. ಸಮಾಜವಾದವು ಇದನ್ನು ಗಣನೆಗೆ ತೆಗೆದುಕೊಂಡು ವಿಚಕ್ಷಣೆಯಿಂದ ನೀತಿ ನಿರೂಪಿಸಿಕೊಳ್ಳದಿದ್ದರೆ ಅದರ ಭವಿಷ್ಯವೂ ಮಂಕಾದೀತು,'' ಎಂಬುದು ಅವರ ವಿಶ್ಲೇಷಣೆ.

ಉದಾರೀಕರಣ, ಖಾಸಗೀಕರಣ, ಜಾಗತೀಕರಣ, ಇವೆಲ್ಲಾ ಬಂಡವಾಳಶಾಹಿಯ ವಿಜಯವನ್ನು ಘೋಷಿಸುತ್ತವಾದರೂ, ಪ್ರತಿಕ್ರಾಂತಿಯ ಸೂತ್ರ ಕಡಿದುಬಿದ್ದು ಹೊಸ ವ್ಯವಸ್ಥೆಯತ್ತ ಪ್ರಪಂಚವು ಹೆಜ್ಜೆ ಹಾಕುತ್ತದೆಂದು ಭರವಸೆಯನ್ನಿಟ್ಟಿದ್ದ ಪಾಲ್, ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ನೀಡಿದ್ದ ಎಚ್ಚರಿಕೆ ಇದು : ''ಮೊದಲು ಸಾಧ್ಯವಾದಷ್ಟು ಸ್ವಾವಲಂಬನೆಯನ್ನು ಬೆಳೆಸಿಕೊಳ್ಳಬೇಕು. ಅದರಲ್ಲಿ ಗೆದ್ದರೆ ತಮ್ಮ ಜನತೆಯ ಹಿತ ಕಾಯುವಂತಹ ನೀತಿಗಳನ್ನು ರೂಪಿಸಿಕೊಳ್ಳಲು ಆ ದೇಶಗಳಿಗೆ ಸಾಧ್ಯವಾಗುತ್ತದೆ. ಆಗ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ವಿಶ್ವಬ್ಯಾಂಕ್, ವಿಶ್ವ ವ್ಯಾಪಾರ ಸಂಸ್ಥೆ ಇವೆಲ್ಲಾ ಒತ್ತಡ ಹೇರಲು ಆಗುವುದಿಲ್ಲ.'' ಕ್ಯೂಬಾದ ನೀತಿಯನ್ನು ಈ ಹಿನ್ನೆಲೆಯಲ್ಲಿ ಶ್ಲಾಘಿಸುತ್ತಾ ಅಮೆರಿಕಾದ ಕುತಂತ್ರಗಳನ್ನು ಸ್ವೀಜಿ ವಿಶ್ಲೇಷಿಸಿದ್ದು ಹೀಗೆ : ''ವಿಶ್ವದ ಪ್ರಮುಖ ಸಾಮ್ರಾಜ್ಯಶಾಹಿ ದೇಶ ಅಮೆರಿಕಾ. ವಿಶ್ವದ ಎಲ್ಲ ಭಾಗಗಳಲ್ಲೂ ಆದರ ನವ-ವಸಾಹತುಗಳಿವೆ, ಆಶ್ರಿತ ಆಧಿಪತ್ಯಗಳಿವೆ. ಅಲ್ಲೆಲ್ಲಾ ಆರ್ಥಿಕವಾಗಿ ಎಷ್ಟು ಶೋಷಣೆ ಸಾಧ್ಯ

ಎನ್ನುವುದೇ ಅಮೆರಿಕಾಕ್ಕೆ ಆದ್ಯತೆಯ ವಿಷಯ. ಹೀಗೆ ಶೋಷಣೆಗೆ ಗುರಿಯಾಗಬೇಕಾದ ದೇಶದಲ್ಲಿ ಆರ್ಥಿಕ ಸ್ಥಿರತೆ, ಸ್ಥಳೀಯ ಆಸ್ತಿವಂತ ವರ್ಗದ ಆಡಳಿತ, ಮತ್ತು ರಾಜಕೀಯ ಪಲ್ಲಟಗಳಿಲ್ಲದ ಸನ್ನಿವೇಶ ಇರಬೇಕಾದ್ದು ಅಮೆರಿಕಾಕ್ಕೆ ಅಗತ್ಯವಿದೆ. ಅಮೆರಿಕಾದಲ್ಲಿರುವಂತಹ ಔಪಚಾರಿಕ ಪ್ರಜಾಪ್ರಭುತ್ವವು ಇದನ್ನು ಪೂರೈಸಬಲ್ಲುದೆಂಬುದು ಅನುಭವದಿಂದ ಅಮೆರಿಕಾಕ್ಕೆ ತಿಳಿದಿದೆ. ಸಂವಿಧಾನ, ಒಂದಕ್ಕಿಂತಲೂ ಅಧಿಕವಾದ ರಾಜಕೀಯ ಪಕ್ಷಗಳು, ಚುನಾವಣೆಗಳು, ಇತ್ಯಾದಿ ಅದರ ಲಕ್ಷಣಗಳು. ಪ್ರಭುತ್ವವನ್ನು ಪ್ರಶ್ನಿಸಿ ಅಧಿಕಾರ ಸೂತ್ರವನ್ನು ತನ್ನದಾಗಿಸಿಕೊಳ್ಳುವ ಪ್ರಯತ್ನವಿಲ್ಲದಿದ್ದರೆ ನಾಗರಿಕ ಸ್ವಾತಂತ್ರ್ಯವನ್ನು ಮಾನ್ಯಮಾಡಬಹುದು. ಯಾರಾದರೂ ಅಂತಹ ಆಕಾಂಕ್ಷೆಯನ್ನಿರಿಸಿಕೊಂಡರೆ ಅವರನ್ನು ಕಾನೂನುಬಾಹಿರ ಹಿಂಸೆಯಿಂದಲಾದರೂ ಸರಿಯೇ, ಅಂತೂ ಬಗ್ಗುಬಡಿಯಬೇಕು. ಸ್ಥಳೀಯ ಮಿಲಿಟರಿ ಪಡೆಗಳು ಈ ಸಂಬಂಧಗಳನ್ನು ರಕ್ಷಿಸಬಲ್ಲವು. ಆದ್ದರಿಂದ ಅವಕ್ಕೆ ತರಬೇತಿ, ಶಸ್ತ್ರಾಸ್ತ್ರ ಸರಬರಾಜು, ಮುಂತಾದ ಜವಾಬ್ದಾರಿಯನ್ನು ಹೊರಲು ಅಮೆರಿಕಾ ಸಿದ್ಧ. ಅಮೆರಿಕಾ ಪರವಾದ ನಾಯಕರಿಗೆ ಆಂತರಿಕವಾಗಿ ಮತ್ತು ಹೊರಗಿನಿಂದ ಯಾವುದೇ ಆತಂಕವಿರದಂತೆ ನೋಡಿಕೊಳ್ಳಲು ಈ ಸೈನ್ಯಗಳು ಸಿದ್ಧವಿರಬೇಕು, ಅಷ್ಟೇ. ಕೆಲವು ಸಂದರ್ಭಗಳಲ್ಲಿ ಇತರ ದೇಶಗಳಿಗೆ ಪಾಠ ಕಲಿಸಲು ಅಮೆರಿಕಾ ಸದಾ ಸನ್ನದ್ಧವಾಗಿದೆಯೆಂದು ತೋರಿಸಿಕೊಡಲು ಅಧೀನ ರಾಷ್ಟ್ರಗಳನ್ನು ನಡೆಸಿಕೊಳ್ಳುವಲ್ಲಿ ಅಮೆರಿಕಾ ವಿಶಿಷ್ಟ ಮಾದರಿಗಳನ್ನು ಅಂತರ್ಗತ ಮಾಡಿಕೊಳ್ಳುತ್ತದೆ. 'ನಿನಗೂ ಇದೇ ಶಾಸ್ತಿ ಎಚ್ಚರಿಕೆ' ಎಂಬುದು ಅದರ ಸೂಚನೆ. ಸ್ಥೂಲವಾಗಿ ನಿರೂಪಣೆಗೊಂಡ ಈ ಅಮೆರಿಕಾದ ನೀತಿಗೆ ಪ್ರಾಯೋಗಿಕ ನಿದರ್ಶನಗಳು ಬೇಕಾದರೆ ಹೈಟಿ, ಎಲ್ ಸಾಲ್ವೆಡಾರ್, ಪನಾಮ, ಗ್ರೆನಡಾ, ನಿಕರಾಗ್ವ, ಚಿಲಿ, ಮುಂತಾದ ದೇಶಗಳನ್ನು ನೋಡಬಹುದು.''

ಇಷ್ಟು ಮುಕ್ತವಾಗಿ ವ್ಯಾಖ್ಯಾನಿಸುವುದು, ಎಲ್ಲ ದೇಶಗಳ ಜನತೆಯ ಪರವಾಗಿ ನಿಲ್ಲುವುದು ಸ್ವೀಜಿಯವರ ಉನ್ನತ ಗುಣ. ಮಾರ್ಕ್ಸ್‌ವಾದದ ಜೀವಂತ ಮಾದರಿಯಾಗಬೇಕಾದರೆ ಆ ಗುಣವನ್ನು ಅನಿವಾರ್ಯವಾಗಿ ಮೈಗೂಡಿಸಿಕೊಳ್ಳಬೇಕು. ಮೇಲೆ ಉದ್ಧರಿಸಿದ ಮಾತುಗಳನ್ನು ಹೇಳಿದ್ದುದು ಈಗ ಒಂದು ದಶಕದ ಹಿಂದೆ. ಆದರೆ ಇಂದಿಗೂ ಅವು ಅರ್ಥವತ್ತಾಗಿವೆ. ಭಾರತದ ಇಂದಿನ ಜಾಗತೀಕರಣ - ಚುನಾವಣೆ - ಶೌರಿಯ ಲೂಟಿಕೋರ ಪ್ರವೃತ್ತಿ - ಅಡ್ವಾನಿ ಆರ್ಭಟ ಮುಂತಾದವುಗಳ ಹಿನ್ನೆಲೆಯಲ್ಲಿ ನೋಡಿದರೆ ನಮ್ಮ ದೇಶದ ಸಾರ್ವಭೌಮತ್ವ ಮತ್ತು ಆರ್ಥಿಕ ಸ್ವಾತಂತ್ರ್ಯ ವಿಪತ್ತಿಗೆ ಸಿಲುಕುವ ಅಂಚಿನಲ್ಲಿರುವುದು ಸುಸ್ಪಷ್ಟ. ನಮ್ಮ ದೇಶದಲ್ಲೂ ಚುನಾವಣೆ ಘೋಷಿಸಿದ ನಂತರ ಕೇಂದ್ರದಲ್ಲಿರುವುದು ಉಸ್ತುವಾರಿ ಸರ್ಕಾರ. ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಭಾರತಕ್ಕೆ ಬಂದು ಈಗ ಚರ್ಚಿಸುವುದೇನಿದೆ ? ವಾಜಪೇಯಿ ಸರ್ಕಾರಕ್ಕೆ ಅಪರೋಕ್ಷ ಬೆಂಬಲ ಅಥವಾ ಪ್ರತ್ಯಕ್ಷ ಧನ ನೀಡಲು ಈತ ಬಂದಿದ್ದನೇನು ? ಭಾರತವನ್ನು ''ಅತಿ ಪ್ರಬಲ ರಾಷ್ಟ್ರ''ವನ್ನಾಗಿ ಮಾಡುವ ಉದ್ದೇಶ ತಮ್ಮದೆಂದು ಅಡ್ವಾನಿ ಹೇಳುತ್ತಿದ್ದಾರೆ. ಪ್ರಾಬಲ್ಯದ ಗುಂಗಿನಲ್ಲಿ ದೇಶದ ಅಬಲ-ಅಬಲೆಯರ ಬಗ್ಗೆ ಯೋಚಿಸಲು ಅವರ ಸರ್ಕಾರಕ್ಕೆ ಸಮಯವಿಲ್ಲ. ಕೆಲವರಿಗೆ ಮಾತ್ರ ಸುವರ್ಣಯುಗ ಇದ್ದರೆ ಸಾಕು, ಮಿಕ್ಕವರು ಹಳೆ ಶಿಲಾಯುಗದಲ್ಲಿ ಇರಲಿ, ಎಂಬ ವಾಜಪೇಯಿ - ಅಡ್ವಾನಿ ಧೋರಣೆ ಇಂದಿನ ಚುನಾವಣೆಯಲ್ಲಿ ಮಹತ್ವದ ಪ್ರಶ್ನೆಯಾಗಿ ದೇಶದ ಮುಂದಿದೆ. ಪಾಲ್ ಸ್ವೀಜಿಯಂಥವರ ತಿಳಿವಳಿಕೆ, ಕಾಳಜಿ, ಭವಿಷ್ಯದ ಬಗೆಗಿನ ಕಲ್ಪನೆ ಮತ್ತು ಮಾನವತೆಯಲ್ಲಿನ ಭರವಸೆ ನಮಗೆ ದಾರಿದೀಪವಾಗಬೇಕು, ಹೋರಾಟಗಳಿಗೆ ಅಣಿಗೊಳಿಸುವ ಆಯುಧವಾಗಬೇಕು. ಸ್ವೀಜಿಯಂತಹ ಮಹಾಜನ ನಮಗೆ ಆದರ್ಶವೋ ಅಥವಾ ನೀರಸ ಉಪದ್ರವೀ ಕುತ್ಸಿತ ಕುಬ್ಜ ಮಹಾಜನ ನಮಗೆ ಆದರ್ಶವೋ ಎಂಬುದನ್ನು ಮನವರಿಕೆ ಮಾಡಿಕೊಳ್ಳಲು ಪಾಲ್ ಸ್ವೀಜಿಯವರ ಅಗಲಿಕೆ ಒಂದು ಒಳ್ಳೆಯ ಸಂದರ್ಭ. ಸ್ವೀಜಿಯವರಿಗೆ 'ಹೊಸತು' ತನ್ನ ಗೌರವವನ್ನು ಸೂಚಿಸುತ್ತದೆ.

## ಪ್ಯಾಲಿಸ್ಟೈನ್ ಮೇಲಿನ ಆಕ್ರಮಣ

ವಿಶ್ವಸಂಸ್ಥೆಯು ಅಮೆರಿಕಾ ಸರ್ಕಾರದ ಒಂದು ಅಂಗಸಂಸ್ಥೆಯೆಂಬಂತೆ ನಡೆದುಕೊಳ್ಳುತ್ತಿರುವುದು ಕೋಫಿ ಅನ್ನಾನ್‌ರ ಸಂಪೂರ್ಣ ವೈಫಲ್ಯವನ್ನು ತೋರಿಸುತ್ತದೆ. ಇರಾಕ್‌ನಂತರ ಜಾರ್ಜಿಯ ಮತ್ತು ಹೈಟಿಗಳಲ್ಲಿ ಅಮೆರಿಕಾ ಮಧ್ಯಪ್ರವೇಶ ಮಾಡಿ ತನಗೆ ಬೇಕಾದ ಸರ್ಕಾರಗಳನ್ನು ಸ್ಥಾಪಿಸಿದೆ. ತನ್ನ ಸೈನ್ಯದ ತುಕಡಿಗಳನ್ನು ಹೈಟಿಗೆ ರವಾನಿಸಲು ಭದ್ರತಾ ಮಂಡಲಿಯ ಒಪ್ಪಿಗೆಯನ್ನು ಪಡೆಯಲು ಅಮೆರಿಕಾಕ್ಕೆ ಕೆಲವು ನಿಮಿಷಗಳು ಸಾಕಾಯಿತು. ಇಸ್ರೇಲ್ ಸೈನ್ಯವಂತೂ ಪ್ಯಾಲಿಸ್ಟೈನ್‌ನಲ್ಲಿ ಮನಬಂದಂತೆ ವರ್ತಿಸುತ್ತಿದೆ ಮತ್ತು ಎಲ್ಲ ಭಾಗಗಳಲ್ಲೂ ನೆಲೆನಿಂತಿದೆ. ನೂರಾರು ಜನರನ್ನು ಹತ್ಯೆ ಮಾಡಿರುವ ಈ ಸೈನ್ಯವು ಪ್ಯಾಲಿಸ್ಟೈನ್ ಪ್ರವೇಶಿಸಲು ಯಾರ ಅನುಮತಿಯನ್ನೂ ಪಡೆದಿಲ್ಲ, ಪಡೆಯಬೇಕಾಗಿಯೂ ಇಲ್ಲ. ಇಸ್ರೇಲ್ ಅಸ್ತಿತ್ವಕ್ಕೆ ಬಂದಾಗಿನಿಂದ ಅದು ಯಾವ ಅಂತರರಾಷ್ಟ್ರೀಯ ಕಾನೂನಿಗೂ ಬದ್ಧವಾಗಿಲ್ಲ; ಅಮೆರಿಕಾದ ಬೆಂಬಲದಿಂದಲೇ ಇದು ನಡೆಯುತ್ತಿರುವುದನ್ನು ನೋಡುತ್ತಾ ಪ್ರಪಂಚವು ನಿದ್ದೆಹೋಗಿದೆ. ಪ್ಯಾಲಿಸ್ಟೈನ್‌ನವರು ಆಗೊಂದು ಈಗೊಂದು ಬಾಂಬ್ ಸಿಡಿಸುವುದರಲ್ಲೇ ತೃಪ್ತರಾಗಬೇಕಾಗಿರುವ ಸನ್ನಿವೇಶಕ್ಕೆ ವಿಶ್ವಸಂಸ್ಥೆಯೇ ಜವಾಬ್ದಾರಿ ಹೊರಬೇಕಾಗಿದೆ.

೭ರಿಂದ ೧೬ನೇ ಶತಮಾನದವರೆಗೆ ಕಲೀಫನ ಅಧೀನದಲ್ಲಿದ್ದ ಈಜಿಪ್ಟ್ ೧೫೧೭ರಲ್ಲಿ ಟರ್ಕಿ ಸಾಮ್ರಾಜ್ಯದ ಭಾಗವಾಗಿ ೧೮೬೭ರಲ್ಲಿ ಸ್ವಾಯತ್ತತೆ ಪಡೆಯಿತು. ೧೮೭೫ರಲ್ಲಿ ಬ್ರಿಟನ್ನಿನ ಪ್ರಧಾನಿ ಡಿಸ್ರೇಲಿ ಸೂಯೆಜ್ ಕಾಲುವೆಯನ್ನು ತನ್ನದಾಗಿ ಮಾಡಿಕೊಂಡ. ೧೮೮೨ರಲ್ಲಿ ಅರಬ್ಬೀ ಪಾಶಾಗಳು ದಂಗೆಯೆದ್ದರು. ಅವರನ್ನು ಹತ್ತಿಕ್ಕಲು ಬ್ರಿಟನ್ನಿನ ಪ್ರಧಾನಿ ಗ್ಲಾಡ್‌ಸ್ಟನ್ ತನ್ನ ನೌಕಾಸೇನೆಯನ್ನು ಕಳಿಸಿ ಅಲೆಕ್ಸಾಂಡ್ರಿಯಾವನ್ನು ನುಚ್ಚುನೂರು ಮಾಡಿದ. ಹೀಗೆ ಆರಂಭವಾದ ಅತಿಕ್ರಮಣವು ೨೦ನೇ ಶತಮಾನದಲ್ಲಿ ''ಜಿಯೋನಿಸಂ''ಗೆ ಹಾದಿಮಾಡಿಕೊಟ್ಟಿತು. ವಿಶ್ವದ ಯಹೂದಿಗಳೆಲ್ಲಾ ತಮ್ಮ ''ಆಯ್ಕೆಯ ನಾಡಿನಲ್ಲಿ'' ನೆಲೆಸುವ ಅಧಿಕಾರವನ್ನು ಈ ಘೋಷಣೆ ಬಯಸುತ್ತದೆ. ಅಂದರೆ, ನೆರೆಯವರ ಭೂಮಿಯನ್ನು ಸದಾ ಆಕ್ರಮಿಸುತ್ತಲೇ ಇರಬೇಕೆಂಬ ಸೂತ್ರ ಇದರಲ್ಲಿದೆ ; ಇಲ್ಲದಿದ್ದರೆ ಹೊಸದಾಗಿ ಇಸ್ರೇಲಿಗೆ ಬರಬಹುದಾದ ಯಹೂದಿಗಳಿಗೆ ಮನೆ, ತೋಟ, ಮೈದಾನ ಎಲ್ಲಿಂದ ಬರಬೇಕು! ಜಿಯೋನಿಸಂನ ಈ ಮುಖವನ್ನು ಮಾನ್ಯ ಮಾಡಿದರೆ ಅದರ ಇನ್ನೊಂದು ಮುಖವನ್ನೂ ಗಣನೆಗೆ ತೆಗೆದುಕೊಳ್ಳಬೇಕು. ಅದೇನೆಂದರೆ, ಎಲ್ಲ ರಾಷ್ಟ್ರಗಳಲ್ಲೂ ಯಹೂದಿಗಳನ್ನು ಕಂಬಿ ಕೀಳುವಂತೆ ಮಾಡುವುದು ಉಚಿತವೆಂಬ ನಿಯಮ. ಇದು ಮಾನವ ಹಕ್ಕುಗಳ ಉಲ್ಲಂಘನೆಯಾಗುತ್ತದೆ. ಆದರೆ ಪ್ಯಾಲಿಸ್ಟೈನ್ ಜನರ ಭೂಮಿ ಆಕ್ರಮಿಸಿ ಅವರನ್ನು ಕೊಲ್ಲುವುದು ಯಾವ ಹಕ್ಕಿನ

(೮ನೇ ಪುಟಕ್ಕೆ)






ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೧೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೪೨೪೩೦೨




### ವಿಜ್ಞಾನಿಗಳಲ್ಲ, ವಿಜ್ಞಾನವನ್ನು ಹೊತ್ತ ಕತ್ತೆಗಳು

ಫೆಬ್ರವರಿ ೨೦೦೪ರ "ಹೊಸತು" ಸಂಚಿಕೆಯಲ್ಲಿ ಡಾ|| ಶೈಲಜಾ ಕೆ. ಆರ್. ಅವರು "ಇವರು ವಿಜ್ಞಾನಿಗಳು" ಎಂದು ಕೆಲವು ವಿಜ್ಞಾನ ಓದಿದವರ ಮೂಢನಂಬಿಕೆಗಳನ್ನು ವಿವರಿಸಿದ್ದಾರೆ. ಹಾಗೆ ಮಾಡುವಾಗ ಅವರು ತುಂಬ ನೊಂದು ಕೊಂಡಿರುವುದು ನಮ್ಮ ಅನುಭವಕ್ಕೆ ಬರುತ್ತದೆ.

ಆದರೆ ನಮ್ಮ ದೇಶದಲ್ಲಿರುವ ಲಕ್ಷಾಂತರ ವಿಜ್ಞಾನ ಬೋಧಕರು, ವೈದ್ಯರು, ಎಂಜಿನಿಯರ್‌ಗಳು, ಸಂಶೋಧಕರು ಇತ್ಯಾದಿಗಳು ವಿಜ್ಞಾನಿಗಳಲ್ಲ, ವಿಜ್ಞಾನ ಓದಿದವರು ಅಷ್ಟೆ. ಅವರು ವಿಜ್ಞಾನದ ಪುಸ್ತಕಗಳನ್ನು ಜಿರಲೆಗಳಂತೆ ಮೇಯ್ದಿದ್ದಾರೆ ಅಷ್ಟೆ. ಅವರಿಗೆ ವಿಜ್ಞಾನವಾಗಲಿ, ವೈಜ್ಞಾನಿಕ ದೃಷ್ಟಿಯಾಗಲಿ, ವೈಚಾರಿಕತೆಯಾಗಲಿ ಸ್ವಲ್ಪವೂ ರಕ್ತಗತವಾಗಿಲ್ಲ. ಕರ್ನಾಟಕ ವಿಜ್ಞಾನ ಪರಿಷತ್ತಿನ ಅಧ್ಯಕ್ಷರು ಹಗಲೂ ರಾತ್ರಿ ವಿಭೂತಿ ಬಳಿದುಕೊಂಡು ಓಡಾಡುತ್ತಾ ವಿಭೂತಿಯಲ್ಲಿ ರೋಗಗಳನ್ನು ತಡೆಗಟ್ಟುವ ನೂರಾರು ರಾಸಾಯನಿಕಗಳಿವೆ ಎಂದು ಹೇಳಿದ್ದಾರೆ. ಅವು ಯಾವುವು ಎಂದು ಪತ್ರಿಕೆಗಳ ಮೂಲಕ ಕೇಳಿದಾಗ ಅದಕ್ಕೆ ಉತ್ತರವೇ ಬಂದಿಲ್ಲ

ಇರಲಿ. ಇನ್ನೊಂದೇ ಉದಾಹರಣೆ : ಇತ್ತೀಚೆಗೆ, ಎಂಭತ್ತು ದಾಟಿದ ರಸಾಯನ ಶಾಸ್ತ್ರದ ನಿವೃತ್ತ ಅಧ್ಯಾಪಕರೊಬ್ಬರು, ಹೋಮ-ಯಾಗ-ಯಜ್ಞಗಳಲ್ಲಿ ತೊಡಗಿದ್ದರು. ಏಕೆ ಎಂದರೆ ಯಾರೋ ಮೋಸಗಾರ ಅವರ ಜಾತಕವನ್ನು ಕಂಪ್ಯೂಟರ್ ಮೂಲಕ ಪರಿಶೀಲಿಸಿ ಅವರಿಗೆ ಪುತ್ರ ಶೋಕ ಪ್ರಾಪ್ತವಾಗುತ್ತದೆ ಎಂದನಂತೆ!

ಈ ವರ್ಗವನ್ನು ಕುರಿತು ಕುವೆಂಪುರವರು ಹೇಳಿದ್ದು: "ಇವರೆಲ್ಲ ವಿಜ್ಞಾನಿಗಳಲ್ಲ, ವಿಜ್ಞಾನವನ್ನು ಹೊತ್ತ ಕತ್ತೆಗಳು." ನಾನು ಸ್ವಲ್ಪ ಮಾರ್ಪಾಟು ಮಾಡುವ ಸ್ವಾತಂತ್ರ್ಯ ವಹಿಸಿ "ಹೇಸರ ಕತ್ತೆಗಳು" ಎನ್ನುತ್ತೇನೆ.

ಇಂಥವರ ಮಕ್ಕಳೂ ಮೊಮ್ಮಕ್ಕಳೂ ಇವರನ್ನೇ ಅನುಸರಿಸುತ್ತಿರುವುದರಿಂದ ಮುಂದೆಯೂ ನಮಗೆ – ಈ ಕಗ್ಗತ್ತಲ ಸುರಂಗದ ತುದಿಯಲ್ಲಿ ಯಾವ ಬೆಳಕೂ ಕಾಣುತ್ತಿಲ್ಲ. ಆದ್ದರಿಂದ ಶ್ರೀಮತಿ ಶೈಲಜಾ ಅವರೇ, ಮೂಢನಂಬಿಕೆಗಳ ಕತ್ತಲಲ್ಲೇ ಬಾಳಲು ಕಲಿಯೋಣ.

ಮೈಸೂರು **ಪ್ರಭುಶಂಕರ**

ಇಪ್ಪತ್ತೊಂದನೆಯ ಶತಮಾನದಲ್ಲಿಯೂ, ವಿದ್ಯಾವಂತ ರೆನಿಸಿಕೊಂಡವರೂ, ಸಮಾಜದಲ್ಲಿ ಒಳ್ಳೆಯ ಪ್ರತಿಷ್ಠೆ ಹೊಂದಿದವರೂ, ತೀರ ಕೀಳು ರೀತಿಯಲ್ಲಿ ನಡೆದು ಕೊಳ್ಳುವ ವಿಧಾನವನ್ನು, ಸತ್ಯಘಟನೆಗಳ ಆಧಾರದಿಂದ ಎಲ್ಲರಿಗೂ ತೆರೆದು ತೋರಿಸಿ ಡಾ|| ಶೈಲಜಾ ಮಹದುಪಕಾರ ಮಾಡಿದ್ದಾರೆ. ಸತ್ಯ ಘಟನೆಗಳನ್ನಾಗಲೀ, ಅವುಗಳ ಆಧಾರಿತ ವಿಷಯಗಳನ್ನಾಗಲೀ ಬರೆಯಲು ಬಹಳ ಧೈರ್ಯ ಬೇಕಾಗುತ್ತದೆ. ಈ ಕಾರ್ಯ ಮಾಡಿ ತೋರಿಸಿದ ಲೇಖಕಿಯವರಿಗೆ ಅನೇಕ ನಮನಗಳು.

ಬೆಂಗಳೂರು *ಡಿ. ಟಿ. ಲೋಹಿತ್*

ಶ್ರೀ ವಿಶ್ವನಾಥ್ ಎಲ್. ವೇಮಗಲ್‌ರವರು "ಏಕಲವ್ಯ ಹಾಗೂ ಹದ್ದು" ವೈಚಾರಿಕ ಕಥೆಯನ್ನು ಚೆನ್ನಾಗಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಓದಿದ ಬುದ್ಧಿಜೀವಿಗಳೂ ಮೌಢ್ಯ ಆಚರಣೆಗೆ ಜೋತುಬೀಳದೆ ಜಾಗೃತರಾಗಲು ಡಾ|| ಶೈಲಜಾ ಎಚ್ಚರಿಕೆ ಕೊಟ್ಟಿದ್ದಾರೆ. ಉದಾಹರಣೆಸಹಿತ ಸನ್ನಿವೇಶಗಳನ್ನು ಎಳೆ ಎಳೆಯಾಗಿ ಬಿಡಿಸಿ ಈಗಿನ ಯುವಪೀಳಿಗೆಯನ್ನು ಎಚ್ಚರಿಸಿದ್ದಾರೆ. ಅವರಿಗೆ ಅಭಿನಂದನೆಗಳು.

ಭಾನಾಪುರ ***ಶಂಕರ ಕೆ. ಪತ್ತಾರ***

### ನಾಡಗೀತೆ ಹೇಗಿರಬೇಕು

ಮಧ್ವಾಚಾರ್ಯರು ಶೂದ್ರರನ್ನು ನಿತ್ಯನಾರಕಿಗಳೆಂದು ಉಲ್ಲೇಖಿಸಿದ್ದರೆಂಬ ಕಾರಣಕ್ಕೆ ಅವರ ಹೆಸರನ್ನು ಸೇರಿಸಿಲ್ಲವೆಂದು ಹೇಳಲಾಗಿದೆ. ಆದರೆ ಶಂಕರಾಚಾರ್ಯರು ಮತ್ತು ರಾಮಾನುಜಾಚಾರ್ಯರು ಸಹ ವರ್ಣಾಶ್ರಮ ಧರ್ಮದ ಪ್ರತಿಪಾದಕರಾಗಿದ್ದರೆಂದು ಇತಿಹಾಸವಿದೆಯಲ್ಲ? ಹಾಗೆಯೇ ಹೈದರಾಲಿ, ಟಿಪ್ಪುಸುಲ್ತಾನರ ಹೆಸರುಗಳು ಮೂಲಕೃತಿಯಲ್ಲಿ ಅಡಕವಾಗಿದ್ದುವೆಂದು ವಿದ್ವಾಂಸರೊಬ್ಬರು ತಿಳಿಸಿದ್ದಾರೆ.




ಹಾಗಾದರೆ, ಈ ಹೆಸರುಗಳನ್ನು ಯಾವಾಗ, ಏಕೆ ವರ್ಜಿಸಲಾಯಿತೆಂಬುದು ಯಕ್ಷಪ್ರಶ್ನೆಯಾಗಿಯೇ ಉಳಿದಿದೆ. ಅಂತೆಯೇ ಆಧುನಿಕ ಕಾಲದಲ್ಲಿ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿರುವ ರೆವೆರೆಂಡ್ ಕಿಟ್ಟೆಲ್‌ರವರ ಹೆಸರು ಇಲ್ಲದಿರುವುದು ಒಂದು ದೊಡ್ಡ ಲೋಪವೆಂದೇ ಹೇಳಬಹುದು. ತೊಂದರೆಯೇನೆಂದರೆ, ನಮ್ಮ ಎಲ್ಲ ಪೂರ್ವಜ ಮಹಾಶಯರ ಹೆಸರುಗಳನ್ನು ಸೇರಿಸುತ್ತಾ ಹೋದರೆ ನಾಡಗೀತೆ ಒಂದು ಬರೇ ನಾಮಪಟ್ಟಿಯಾಗುತ್ತದೆ. ಮಾತ್ರವಲ್ಲದೆ ಸಮುದಾಯಗಳೊಳಗೆ ವಿವಾದಕ್ಕೆ ಕಾರಣವಾಗುತ್ತದೆ.

ಎರಡನೆಯದಾಗಿ ನಾಡಗೀತೆಯು ನಮ್ಮ ಗತವೈಭವವನ್ನು ಭಜಿಸಬೇಕೇ ಎಂಬ ಪ್ರಶ್ನೆ. ಗತವೈಭವವೆಂಬುದು ಹೆಚ್ಚಿನ ಮಟ್ಟಿಗೆ ಒಂದು ಕಟ್ಟುಕತೆ. ಯಾವ ದೇಶದ ಇತಿಹಾಸವನ್ನು ತೆರೆದು ನೋಡಿದರೂ ಈ ಗತವೈಭವದ ಸುಖಸಂತೋಷಗಳನ್ನು ಉಂಡವರು ಆ ಕಾಲದ ಬಲಾಢ್ಯ ವರ್ಗಗಳು ಮಾತ್ರವೆಂದು ಕಂಡುಬರುತ್ತದೆ. ಸಮಾಜದ ಬಹುತೇಕ ಮಂದಿ – ಅಂದರೆ ಕಾರ್ಮಿಕರು, ಬೇಸಾಯಗಾರರು, ದಸ್ಯುಗಳು ಮತ್ತು ಹೆಂಗಸರು ಮುಂತಾದ ದುರ್ಬಲ ವರ್ಗಗಳವರು – ಬಡತನಕ್ಕೆ, ದಬ್ಬಾಳಿಕೆಗೆ ಬಲಿಯಾಗಿದ್ದರು. ಆದುದರಿಂದ ನಾಡಗೀತೆಗಳು ಇಂತಹ ಕಪೋಲ ಕಲ್ಪಿತ ಅಥವಾ ಅತಿಶಯೋಕ್ತಿಯ ವೈಭವವನ್ನು ಸುಮ್ಮನೆ ಹೊಗಳುವುದರಲ್ಲಿ ಅರ್ಥವಿದೆಯೇ?

ಅದರ ಬದಲು ನಾಡಗೀತೆಯು ನಮ್ಮ ಆಧುನಿಕ ಆದರ್ಶಗಳನ್ನು, ಅರ್ವಾಚೀನ ಸಾಧನೆಗಳನ್ನು ಪ್ರತಿಬಿಂಬಿಸುವುದು ಹೆಚ್ಚು ಪ್ರಸ್ತುತ. ಉದಾಹರಣೆಗೆ : ಭಾರತದ ಸಂವಿಧಾನದಲ್ಲಿ ಉಲ್ಲೇಖಿತವಾಗಿರುವ ಉನ್ನತ ತತ್ವಾದರ್ಶಗಳನ್ನು – ಪ್ರಜಾಪ್ರಭುತ್ವ, ಸಾಮಾಜಿಕ ನ್ಯಾಯ, ಧರ್ಮನಿರಪೇಕ್ಷತೆ, ವೈಜ್ಞಾನಿಕ ಮನೋಧರ್ಮ ಮುಂತಾದ ಮೌಲ್ಯಗಳನ್ನು, ನಾಡಗೀತೆಯು ವಿಜೃಂಭಿಸತಕ್ಕದ್ದು. ಅದೇ ವೇಳೆ ನಮ್ಮಲ್ಲಿ ಇನ್ನೂ ಅಂಟಿಕೊಂಡಿರುವ ಅಂಧವಿಶ್ವಾಸ, ಧರ್ಮಾಂಧತೆ, ಕೋಮುವಾದ, ಭ್ರಷ್ಟಾಚಾರ, ಅನ್ಯಾಯ, ಅವಿದ್ಯೆ ಮುಂತಾದ ಪಿಡುಗುಗಳನ್ನು ಕಿತ್ತೊಗೆಯುವ ದೃಢ ಸಂಕಲ್ಪವನ್ನು ನಾಡಗೀತೆಯು ಘೋಷಿಸಬೇಕು. ನಮ್ಮ ಎಳೆಯರಲ್ಲಿ ತಮ್ಮ ಭವಿಷ್ಯದ ಕುರಿತು ಮಹತ್ವಾಕಾಂಕ್ಷೆಯನ್ನು ಉದ್ದೀಪನಗೊಳಿಸಬೇಕು. ಮುಂದಿನ ಜನಾಂಗದಲ್ಲಿ ಆತ್ಮವಿಶ್ವಾಸವನ್ನೂ, ಆತ್ಮಾವಲಂಬನೆಯನ್ನೂ ಹುರಿದುಂಬಿಸಬೇಕು. ಅದು ಹಿನ್ನೋಟಕ್ಕಿಂತ ಮುನ್ನೋಟಕ್ಕೇ ಹೆಚ್ಚಿನ ಒತ್ತು ಕೊಡಬೇಕು.

ಸರಕಾರ ಬಯಸಿದರೆ, ಇಂತಹ ಒಂದು ಪ್ರಗತಿಪರ, ಧರ್ಮಾತೀತ ಹಾಗೂ ಸರ್ವಸಮ್ಮತವಾದ ಹೊಸ ನಾಡಗೀತೆಯೊಂದನ್ನು ರಚಿಸುವುದು ನಮ್ಮ ಪ್ರತಿಭಾವಂತ ಕನ್ನಡ ಕವಿಗಳಿಗೆ ಖಂಡಿತ ಸಾಧ್ಯ.

ಮಂಗಳೂರು **ಪಿ. ಎ. ಖಾದರ್ ಕುಕ್ಕಾಡಿ**

### ಡಾ|| ನಾಡಕರ್ಣಿಯವರ ಪ್ರತಿಕ್ರಿಯೆ

ಮೂರು ಕಂತುಗಳಲ್ಲಿ ಪ್ರಕಟವಾದ ಜಾತಿಪದ್ಧತಿ ಮತ್ತು ಹಿಂದು ಧರ್ಮದ ಮೇಲಿನ ಲೇಖನಕ್ಕೆ ಅನೇಕರು ಸ್ಪಂದಿಸಿ ಬರೆದುದಕ್ಕೆ ನನ್ನ ಕೃತಜ್ಞತೆಗಳು. ಅವುಗಳಲ್ಲಿ ಕೆಲ ಅಭಿಪ್ರಾಯಗಳು ತಪ್ಪು ತಿಳುವಳಿಕೆಯಿಂದ ಕೂಡಿವೆ. ನನ್ನ ವಾದದ ತಿರುಳು ಇಷ್ಟೇ : ಹಿಂದೂ ಸಮಾಜದಲ್ಲಿ ಬೆಳೆದು ಬಂದ ಜಾತಿಪದ್ಧತಿ ಹಿಂದು ಧರ್ಮದ ತತ್ವಜ್ಞಾನಕ್ಕೆ, ಅದರ ಮೂಲಭೂತ ಸ್ವಭಾವಕ್ಕೆ, ಸಂಬಂಧಿಸಿಯೇ ಇಲ್ಲ. ಜಾತಿಪದ್ಧತಿ ಬೆಳೆದು ಬಂದುದು ಧಾರ್ಮಿಕವಲ್ಲ ಆದರೆ ಸಾಮಾಜಿಕ, ಆರ್ಥಿಕ ಕಾರಣಗಳಿಂದ. ಈಗ ಜಾತಿಪದ್ಧತಿ ಕ್ಷೀಣವಾಗುವುದರ ದಿಶೆಯಲ್ಲಿದೆ; ಏಕೆಂದರೆ, ಈ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳೇ ಕ್ಷೀಣವಾಗುತ್ತಿವೆ.

ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯನವರ ವಿಮರ್ಶೆ ಭಾವಾವೇಶವಿಲ್ಲದೇ ಸಮತೋಲವಾಗಿದ್ದು ಒಳ್ಳೆಯ ವಿಮರ್ಶೆಗೆ ಒಂದು ನಿದರ್ಶನವಾಗಿದೆ. ಅವರ ಶಂಕೆಗಳಿಗೆ ನನ್ನ ಉತ್ತರ ಇಷ್ಟೆ: ಯಾವುದೇ ಧರ್ಮದಲ್ಲಿ ಮತ್ತು ಸಮಾಜದಲ್ಲಿ ಧರ್ಮದ ಮೂಲತತ್ವಗಳಿಗೂ ಅವುಗಳ ಅನುಸರಣೆಯಲ್ಲಿಯೂ ಒಂದು ಅಂತರವಿದ್ದೇ ಇದೆ. ಒಂದು ಕೆನ್ನೆಗೆ ಹೊಡೆದರೆ ಇನ್ನೊಂದು ಕೆನ್ನೆ ಕೊಡು ಎಂದು ಹೇಳಿದ ಬೈಬಲ್ಲಿಗೂ ಕ್ರಿಶ್ಚಿಯನ್ ರಾಷ್ಟ್ರಗಳ ನಡತೆಗೂ ಎಷ್ಟು ಅಂತರವಿದೆ! ಈ ಸಮಸ್ಯೆ ಹಿಂದು ಧರ್ಮ ಮತ್ತು ಸಮಾಜದ ನಡುವೆಯೂ ಇದೆ. ಸಮಾಜದಲ್ಲಿಯ ನಡೆವಳಿಕೆ ಈ ಸ್ವಭಾವಜನ್ಯ ಭಾಗದಲ್ಲಿ ಅಡಕವಾಗಿಲ್ಲ. ಧರ್ಮದ ಮೂಲ ತತ್ವಗಳಷ್ಟೇ ಇದರಲ್ಲಿ ಅಡಕವಾಗಿವೆ. ನನ್ನ ಅಭಿಪ್ರಾಯದಲ್ಲಿ



## ಭಾರತ ಪ್ರಕಾಶಿಸುತ್ತಿದೆ!

ಎತ್ತರೆತ್ತರದ ಮಹಲುಗಳಲಿ
ಕಾರು-ಬಾರು, ಪ್ಲೇನ್‌ಗಳಲಿ
ಮೊಬೈಲ್‌ನ ರಿಂಗ್‌ಟೋನ್‌ಗಳಲಿ
ಭಾರತ ಪ್ರಕಾಶಿಸುತ್ತಿದೆ...

ಟಿ.ವಿ., ರೇಡಿಯೋ, ಪತಾಕೆಗಳಲಿ
ಮುಂಜಾವಿನ ಮುಖಪುಟದ ತಲೆಬರಹದಲಿ
ಸಂಜೆ ಮಬ್ಬು ಕವಿದ ಪಬ್‌ಗಳಲಿ
ಭಾರತ ಪ್ರಕಾಶಿಸುತ್ತಿದೆ...

ಹಾದಿಬೀದಿಯ ಭಿತ್ತಿಪತ್ರಗಳಲಿ
ಕೈಬೀಸಿ ನಿಂತ ಕಟೌಟ್‌ಗಳಲಿ
ಹೊಳೆವ ಟೈ-ಕೋಟು ಬೂಟುಗಳಲಿ
ಭಾರತ ಪ್ರಕಾಶಿಸುತ್ತಿದೆ...

ಪೃಥ್ವಿ, ಅಗ್ನಿ, ತ್ರಿಶೂಲ್, ಸಿಡಿಬಾಂಬು ತಲೆಗಳಲಿ
ಲಾಠಿ, ತ್ರಿಶೂಲ, ಕೇಸರಿ ರುಮಾಲುಗಳಲಿ
ಗಲ್ಲಿಗೊಂದೆದ್ದ ಗುಡಿಗೋಪುರಗಳಲಿ
ಭಾರತ ಪ್ರಕಾಶಿಸುತ್ತಿದೆ...

ಉಳ್ಳವರ ಮನೆಯೊಳಗೆ, ಹೊರಗೆ, ಹಜಾರದಲಿ
ಹೊಳೆವ ಮೊಸಾಯಿಕ್, ಕುರ್ಚಿ ಮೇಜಿನಲಿ
ಬ್ಯಾಂಕ್‌ಗಳ ಸೇಫ್‌ಟಿ ಲಾಕರ್‌ಗಳಲಿ
ಭಾರತ ಪ್ರಕಾಶಿಸುತ್ತಿದೆ...

ಮಾತುಗಳಲಿ, ಮೋಸದ ಕಸೂತಿಗಳಲಿ
ನೇಯ್ದ ಸುಳ್ಳಿನ ನಾಜೂಕಿನಲಿ
ಬಣ್ಣಬಣ್ಣದ ದೇಶಾವರಿ ನಗೆಗಳಲಿ
ಭಾರತ ಪ್ರಕಾಶಿಸುತ್ತಿದೆ...

........ ಬಂದು ನೋಡಿ
ಇಲ್ಲಿ ನೀರಿಲ್ಲ, ನೆರಳಿಲ್ಲ
ನಗಲಿಷ್ಟು ಕಸುವಿಲ್ಲ
ಭರವಸೆಯ ಬೆಳಕಿಲ್ಲ
ಚಿಗುರಬಲ್ಲ ಕನಸಿಲ್ಲ

ನನಗೆ ಹಸಿವಾಗುತ್ತಿದೆ
ಭಾರತ ಎಲ್ಲಿ ಪ್ರಕಾಶಿಸುತ್ತಿದೆ!

■ **ರವಿಕುಮಾರ್ ಅಜ್ಜೀಪುರ**

ಹಿಂದೂ ಧರ್ಮ ವೇದೋಪನಿಷತ್ತುಗಳಿಂದ ಹಿಡಿದು, ಮಧ್ಯ ಯುಗದ ಭಕ್ತಿಪಂಥವನ್ನೂ ಆಧುನಿಕ ಯುಗದ ದ್ರಷ್ಟಾರರ ಉಪದೇಶಗಳನ್ನೂ ಒಳಗೊಂಡು ಮುಂದುವರಿದಿದೆ. ಗಾಂಧೀಜಿ ಹೇಳಿದಂತೆ ಹಿಂದು ಧರ್ಮದಲ್ಲಿ ಸನಾತನ ತತ್ವಗಳೂ ಇವೆ, ಕಾಲಕ್ಕೆ ಹೊಂದಿಕೊಳ್ಳುವ ಹೊಸ ಮೌಲ್ಯಗಳನ್ನು ಸಮಾವೇಶ ಮಾಡಿಕೊಳ್ಳುವ ಗತಿಶೀಲತೆಯೂ ಇದೆ.

ಬೆಂಗಳೂರು **ಎಂ. ವಿ. ನಾಡಕರ್ಣಿ**

### ಗಾಂಧಿ! ಒಂದು ವಿವರಣೆ

ಗಾಂಧೀಜಿಯವರ ಚಿಂತನೆಗಳು ಅತಿಯಾದ ನೈತಿಕ ಮೌಲ್ಯಗಳನ್ನು ಬೇಡುತ್ತಿರುವುದನ್ನು ಕಾಣಬಹುದು. ಧರ್ಮದರ್ಶಿ ಸೂತ್ರದ ಪ್ರಕಾರ ಬಂಡವಾಳಶಾಹಿಗಳು ಕಾರ್ಮಿಕರ ಸಂಪತ್ತಿನ ರಕ್ಷಕರಾಗಿದ್ದು ಕಾರ್ಮಿಕರ ಒಳಿತಿಗಾಗಿ ಸ್ವ ಇಚ್ಛೆಯಿಂದ ಆ ಸಂಪತ್ತನ್ನು ಬಳಸಬೇಕು. ಈ ಪರಿಕಲ್ಪನೆ ಚೆನ್ನಾಗಿದೆ. ಆದರೆ ತಮ್ಮ ಸಂಪತ್ತನ್ನು ಕಾರ್ಮಿಕರ ಒಳಿತಿಗಾಗಿ ಬಳಸಲು ರಾಜಕೀಯ ಒತ್ತಡವಾಗಲಿ, ಸಾಮಾಜಿಕ ಒತ್ತಡವಾಗಲಿ ಅಲ್ಲಿ ಇಲ್ಲ. ಕೇವಲ ನೈತಿಕ ಒತ್ತಡ ಮಾತ್ರ. ಅದೊಂದೇ ಆ ಪ್ರವೃತ್ತಿಯನ್ನು ತೊಡೆದುಹಾಕುತ್ತದೆಂದು ಭಾವಿಸಲು ಬರುವುದಿಲ್ಲ. ಮತ್ತದು ಸಾಧ್ಯವಾಗಿಯೂ ಇಲ್ಲ. ಸಾಮಾನ್ಯ ಜನರಿಗಂತಿರಲಿ, ಗಾಂಧಿವಾದಿಗಳಿಗೇ ಅದು ಸಾಧ್ಯವಾಗಿಲ್ಲ. ಯಾಕೆಂದರೆ ತ್ಯಾಗಶೀಲತೆಗೆ ಒಂದು ಮಿತಿ ಇದೆ.

ಗಾಂಧೀಜಿ ಒಬ್ಬ ಶ್ರದ್ಧಾವಂತ ಹಿಂದೂ ಆಗಿ ಕಾಣಿಸಿಕೊಳ್ಳುತ್ತಾರೆ. ಆದರೆ ಅಸ್ಪೃಶ್ಯತೆಯನ್ನು ತಳ್ಳಿಹಾಕುತ್ತಾರೆ. ಸಂಪ್ರದಾಯವಾದಿ ಭಾರತದಲ್ಲಿ ಹಿಂದೂ ಧರ್ಮಕ್ಕೆ ನಿಷ್ಠೆ ತೋರಿದ ಬಳಿಕ ಅಸ್ಪೃಶ್ಯತೆಯ ನಿರಾಕರಣೆ ಎನ್ನುವಂಥದ್ದು ಸಾಂಪ್ರದಾಯಿಕ ನೆಲೆಯಲ್ಲಿ ಅಸಾಧ್ಯ. ಸಾಮಾಜಿಕ ಸುಧಾರಣಾ ಪ್ರಕ್ರಿಯೆಯಿಂದ ಅದು ಸಾಧ್ಯವಾಗಬಹುದು ಎಂಬುದನ್ನು ಕೊಂಚಮಟ್ಟಿಗೆ ಗಾಂಧೀಜಿಯವರೇ ಮಾಡಿ ತೋರಿಸಿದ್ದಾರೆ. ಆದರದು ಗಾಂಧೀಜಿ ಸಾಮಾಜಿಕ ಕಾರ್ಯಕರ್ತನೂ ಆಗಿದ್ದರಿಂದ ಸಾಧ್ಯವಾಯಿತೇ ಹೊರತು ಚಿಂತಕನಾಗಿ ಅಲ್ಲ. ಇದರರ್ಥ ಗಾಂಧೀಜಿಯವರು ತಾತ್ವಿಕವಾಗಿ ಅಸ್ಪೃಶ್ಯತೆಯನ್ನು ಸಮರ್ಥಿಸಿದ್ದರು ಎಂಬುದಲ್ಲ. ಗಾಂಧೀಜಿ ಸಮರ್ಥಿಸಿದ ಧರ್ಮವೇ ಬೇರೆ, ಪ್ರಚಲಿತ ಧರ್ಮವೇ ಬೇರೆ. ಗಾಂಧೀಜಿಯವರದು ಧರ್ಮದ ಆದರ್ಶವಾದಿ ಪರಿಕಲ್ಪನೆಯ ಸಮರ್ಥನೆ.

ಜನಸಂಖ್ಯಾ ನಿಯಂತ್ರಣಕ್ಕೆ ಗಾಂಧೀಜಿ ಸೂಚಿಸುವ ಪರಿಹಾರ ಬ್ರಹ್ಮಚರ್ಯ. ವಿವಾಹದ ಬಳಿಕ ಲೈಂಗಿಕ ಸಂಯಮದಂಥ ಸಾಧನಗಳು ಎಲ್ಲರಿಗೂ ಸಾಧ್ಯವಲ್ಲ. ಮದುವೆಯೇ ಆಗಬೇಡಿ ಎನ್ನುವುದಕ್ಕಾದರೂ ಒಂದು ಅರ್ಥವಿದೆ. ಮದುವೆ ಆಗಿಯೂ ಲೈಂಗಿಕ ಸಂಪರ್ಕದಲ್ಲಿರಬೇಡಿ; ಅಂತಹ ಸಂಪರ್ಕದ ಉದ್ದೇಶ ಸಂತಾನೋತ್ಪತ್ತಿ ಯಷ್ಟೇ ಆಗಿರಬೇಕು ಎನ್ನುವಂಥದೆಲ್ಲ ಇಂದ್ರಿಯ ನಿಗ್ರಹದ ಅತಿರೇಕವಾದಿ ಚಿಂತನೆಗಳು.

ಬೆಳ್ತಂಗಡಿ **ಅರವಿಂದ ಚೊಕ್ಕಾಡಿ**

### ಫೆಬ್ರವರಿ ಸಂಚಿಕೆ

'ಮಾಯಕಾರ್ತಿ ನೀನೇ ಯಲ್ಲಮ್ಮಾ', ಕತೆ ಮಾರುತಿ ದಾಸಣ್ಣವರರ ಆರಂಭ ಮತ್ತು ಅಂತ್ಯಗಳ ನಡುವೆ ಏನಾಗುತ್ತದೆ ಎಂಬುದನ್ನು ಸುಸೂತ್ರವಾಗಿ ಹೇಳುತ್ತಾ ಸಾಗಿದೆ. ಒಟ್ಟಾರೆ ಕತೆ ಮೆಚ್ಚುಗೆಯಾಯಿತು.

'ಹೆಪ್ಪು ಹಾಕುವುದೆಂದರೆ...' ಈ ಕವಿತೆ ನಿಜವಾಗಿಯೂ ನವ ನಿರ್ಮಾಣದ ಪ್ರಕ್ರಿಯೆ ಅನ್ನಿಸುತ್ತದೆ.

ಮಲ್ಲಿಗೆ ಕವಿಯ ಅನ್ನಪೂರ್ಣೆಗೆ ಕವಿತೆ, ತುಟಿ ತುದಿಗೆ ಬಂದ ದುಃಖದ ನೋವಾಗಿ, ಮರೆಗೆ ಸರಿದ ಕವಿ ಸದಾ ಕಂಪು ಬೀಸುತಿರಲಿ.

ಕಡೂರು **ಜಿ. ಹೆಚ್. ತ್ರಿವೇಣಿ ಶಿವಕುಮಾರ್**

'ರಾಮಲಿಂಗಪ್ಪ ಟಿ. ಬೇಗೂರು' ಅವರ 'ಮುನ್ನುಡಿ ಬೆನ್ನುಡಿಗಳೆಂಬ...' ಲೇಖನ ಸಮಂಜಸವಲ್ಲ. ಇಂತಹ ಲೇಖನದಿಂದ ಏನೂ ಉಪಯೋಗವಿಲ್ಲ, ಮುನ್ನುಡಿ, ಬೆನ್ನುಡಿಗಳು – ಸಾಹಿತ್ಯ ಕೃತಿಗಳಲ್ಲಿ ಇರಲೇಬೇಕು.

'ಹೊಸತು' ಬರುಬರುತ್ತ ಉತ್ತಮ ಕತೆ, ಕವನ ಮತ್ತು ಲೇಖನಗಳನ್ನು ನೀಡಲಿ. ಯುವ ಬರಹಗಾರರಿಗೆ ಹೆಚ್ಚಿನ ಅವಕಾಶ ಕೊಡಿ.

ಕಿತ್ತೂರು **ಖುರ್ಷೀದ್ ಆಲಂ. ಮೋಮಿನ**

ಫೆಬ್ರವರಿ ತಿಂಗಳ ಸಂಚಿಕೆಯಲ್ಲಿ ಎಂ. ಎನ್. ಕೇಶವ ರಾವ್ ಬರೆದಿರುವ ಸೃಷ್ಟಿಯ ಬಗೆಗಿನ ಲೇಖನ ವಿಚಾರಪೂರ್ಣವಾಗಿತ್ತು. ಆದರೆ ವಿಜ್ಞಾನವೆಂದರೆ ಈ ಜಗತ್ತಿನ ಅತ್ಯಂತ ಅದ್ಭುತವೂ ರೋಚಕವೂ ಆದ ಗುಟ್ಟುಗಳನ್ನು ಅರಿಯುವ ವಿಧಾನ ಎಂಬುದನ್ನು ಮರೆತು ವಿಶ್ವವೇ ವಿಜ್ಞಾನ ಎಂಬ ನಿರ್ಧಾರಗಳನ್ನು ಕೆಲವೇ ಕೆಲವು ವಿಜ್ಞಾನಿಗಳ ಶೋಧನೆಯ ಆಧಾರದ ಮೇಲೆ ಪ್ರತಿಪಾದಿಸಿರುವ ರೀತಿ ಸಾಗರದ ನೀರನ್ನು ಬೊಗಸೆಯಲ್ಲಿ ತುಂಬಿಸಿಕೊಂಡು ಸಾಗರವನ್ನೇ ಕೈಯಲ್ಲಿ ತುಂಬಿಸಿಕೊಂಡಂತಿದೆ.

ಮಲ್ಲೇಶ್ವರಂ **ನರೇಂದ್ರ ಸಿರಕಜೆ**

### ಮಾರ್ಚ್ ಸಂಚಿಕೆ

ಬರಗೂರು ರಾಮಚಂದ್ರಪ್ಪನವರ ''ಜಾತ್ಯಾತೀತತೆ–ಒಂದು ನೋಟ'' ವಾಸ್ತವತೆಯ ಪ್ರತೀಕವಾಗಿ ಹೊರಹೊಮ್ಮಿದೆ.

ಕಾವ್ಯಧಾರೆಯಲ್ಲಿನ ''ಕದ ತೆರೆ'' ಮಾರ್ಮಿಕವಾಗಿ

ಮೂಡಿಬಂದರೆ ''ಸರಹದ್ದು'' – ಹಕ್ಕಿಯ ಸ್ವಚ್ಛಂದ ವಿಹಾರದ ದ್ಯೋತಕವಾಗಿ ಹೊರಹೊಮ್ಮಿದೆ.

ಜನಪದ ಸಾಹಿತ್ಯ – ಜನಪರ ಎನ್ನುವುದು ಒಂದು ಪರಂಪರೆ. ಇದನ್ನು ಗಾದೆ – ಒಗಟುಗಳ ಮೂಲಕ ಪ್ರತಿಪಾದಿಸಿದ್ದಾರೆ ಬಿಂಡಿಗನವಿಲೆ ಭಗವಾನರು.

ವಿಜಯನಗರ **ನೆ. ಲ. ರಾಮಮೂರ್ತಿ**

ಪ್ರೊ॥ ಬರಗೂರರ ಲೇಖನ ನಿಜಕ್ಕೂ ಚಿಂತನೆಗೆ ಹಚ್ಚುವ ವಾಸ್ತವಿಕತೆಯ ಚಿತ್ರಣ. ಜಾತಿಯ ಹೆಸರಿನಲ್ಲಿ ಇತರರಲ್ಲಿರುವ ಬಡವರನ್ನು ನಿರ್ಲಕ್ಷಿಸಬಾರದೆಂಬ ಬರಗೂರರ ವಿಚಾರವನ್ನು ನಮ್ಮ ಸರ್ಕಾರಗಳು ಗಮನಿಸಬೇಕು. ಅಂತೆಯೇ ಎಂದೋ... ಎಲ್ಲೋ ಆಗಿಹೋದ ಘಟನೆಗಳಿಗೆ ಇಂದೂ ಉಪ್ಪು ಖಾರ ಸವರಿ ರುಚಿ ನೋಡಿ – ಜಾತಿ ಭೂತವನ್ನು ಕೆರಳಿಸಿ ಕೋಮುವಾದವನ್ನು ಅತಿಯಾಗಿ ಉತ್ತೇಕ್ಷಿಸುವವರೂ ಗಮನಿಸಬೇಕಾದ ಮಾತು.

ಮೈಸೂರು **ಕೊ. ಸು. ನರಸಿಂಹಮೂರ್ತಿ**

ಮುಖಪುಟದ ಹಲವು ವರ್ಣಗಳ ಉತ್ತಮ ಕಲೆ ಆಕರ್ಷಕವಾಗಿತ್ತು. ಸಂಪಾದಕೀಯ ಅರ್ಥಪೂರ್ಣ ಮತ್ತು ಸಮಯೋಚಿತ. ಜಾತ್ಯಾತೀತತೆಯ ಬಗ್ಗೆ ಬರಗೂರರು ವಿವರವಾಗಿ ತಿಳಿಸಿದ್ದಾರೆ. ಎಲ್ಲಿಯವರೆಗೂ ಈ ಜಾತಿಪದ್ಧತಿ ಇರುವುದೋ ಅಲ್ಲಿಯವರೆಗೂ ದೇಶ ಉದ್ಧಾರವಾಗದು. ಯುಗಾದಿಯ ಉಡುಗೊರೆ ಎಂದ ತಕ್ಷಣ ಏನೋ ನೀಡುತ್ತಾರೆಂದು ತಿಳಿದ ನಮಗೆ ನಭಾಸಕ್ತರಿಗೆ ಐದು ಗ್ರಹಗಳನ್ನು ನೋಡುವ ಅವಕಾಶ ಎಂದು ತಿಳಿದು ಅದಾದರೂ ದೊರಕಿತಲ್ಲ ಎಂದು ಸಮಾಧಾನವಾಯಿತು.

ಪಾಂಡವಪುರ **ಆ. ಮೃತ್ಯುಂಜಯ**

ಸಂಪಾದಕೀಯ ಪ್ರತಿ ಸಂಚಿಕೆಯಲ್ಲೂ ವಿಚಾರವನ್ನು, ಪ್ರಸ್ತುತ ಸ್ಥಿತಿಗಳನ್ನು ಹೇಳಿ ಜೀವ ತುಂಬುತ್ತಿದೆ. ಮಾರ್ಚ್ ತಿಂಗಳ ಸಂಪಾದಕೀಯವೂ ವಿಮರ್ಶಾತ್ಮಕವಾಗಿದೆ. ಬರಗೂರರು ಬೇರೆಯವರನ್ನು ಹೀಯಾಳಿಸದೆ ನಮ್ಮನ್ನು ನಾವೇ ಹೇಗೆ ಜಾತ್ಯತೀತರಾಗಿ ಗುರುತಿಸಿಕೊಳ್ಳಬಹುದು ಎಂಬುದನ್ನು ಹೇಳಿದ್ದಾರೆ. ಪ್ರತಿ ತಿಂಗಳೂ ಇಡೀ ಜಗತ್ತಿನ ಜ್ಞಾನವನ್ನೇ ಹೊತ್ತು ತರುವ ಹೊಸತನ್ನು ಜಾತಿವಾದಿಗಳು ಮೂಲಭೂತವಾದಿಗಳು ಓದಿ ಇನ್ನಾದರೂ ಸಮಾಜದಲ್ಲಿ ಶಾಂತಿಯತ್ತ ಮುನ್ನಡೆಯಲಿ.

ಚೆರಾಡಿ ಅಂಚೆ **ವನಿತಾ ಕುಮಾರಿ ವೇಣೂರು**

ಬರಗೂರರ ಲೇಖನ ನಮ್ಮೆದುರಿಗಿನ ಸಂಕೀರ್ಣ ವ್ಯವಸ್ಥೆಯನ್ನು ಗಂಭೀರವಾಗಿ ಚರ್ಚಿಸಿದೆ. ಸದ್ಯದ ಗೊಂದಲದ ಪರಿಸ್ಥಿತಿಯಲ್ಲಿ ಬಹುತೇಕ ಪ್ರಶ್ನೆಗಳಿಗೆ ಉತ್ತರ ಹೇಳುತ್ತದೆ. ಜಾತಿಯ ಸೂಕ್ಷ್ಮತೆಯನ್ನು ಅರ್ಥಮಾಡಿಕೊಳ್ಳದೆ ನಾವು ತುಂಬ ದೂರ ಬಂದಿದ್ದೇವೆ. ಕೆಲವು ಮಠಾಧೀಶರು ಹಾಗೂ ಪ್ರಭುತ್ವದ ವಾರಸುದಾರರು ಇಂಥ ಲೇಖನಗಳನ್ನು ಗಂಭೀರವಾಗಿ ಗಮನಿಸಬೇಕು.

ಕೊಪ್ಪಳ **ಬಸವರಾಜ ಹೂಗಾರ**

### ಕ್ರಿಕೆಟ್

ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ನಡೆಯುವ ಕ್ರಿಕೆಟ್ ಆಟದ ಬಗೆಗಿನ ಸಂಗತಿ ಮನನೀಯವಾಗಿದೆ. ಖರೆ ಎಂದರೆ, ಕ್ರೀಡೆ ಇರುವುದೇ ಕ್ರೀಡಾಮನೋ ಭಾವನೆಯನ್ನು ವರ್ಧಿಸುವುದಕ್ಕಾಗಿ. ಭಾರತ ಮತ್ತು ಪಾಕ್ ಕ್ರಿಕೆಟ್ ತಂಡಗಳು ಸಮಾನ ಕುಶಲಿಗಳು. ಆದ್ದರಿಂದ ಯಾರಿಗೇ ಗೆಲುವಾದರೂ ಅದು ಆಕಸ್ಮಾತ್ ಆಗಿರುತ್ತದೆ. ಆದರೆ ನಮ್ಮ ಮಾಧ್ಯಮಗಳು ಅದನ್ನೊಂದು ಎರಡು ರಾಷ್ಟ್ರಗಳ ನಡುವಿನ ಯುದ್ಧ ಎನ್ನುವ ರೀತಿಯಲ್ಲಿ ಪ್ರಚಾರ ಮಾಡುತ್ತಿವೆ, ಜನರಲ್ಲಿ ಅಂಥ ಅಪಾಯಕಾರಿ ಭಾವನೆಯನ್ನು ಪ್ರಚೋದಿಸುತ್ತಿವೆ. ಇದು ಹೋಗಲಿ, ಆಟಗಾರರಾದರೂ ಒಂದಾದರೂ ಕ್ರೀಡಾಮನೋ ಭಾವದ ಮಾತಾಡುತ್ತಾರೆಂದರೆ ಅದೂ ಇಲ್ಲ ಮಹಾ ರಣಧೀರರಂತೆ ಮಾತಾಡುತ್ತಾರೆ. ಇವರು ಆಡುವ ಆಟ ಎರಡು ರಾಷ್ಟ್ರಗಳ ನಡುವಿನ ಯುದ್ಧವಲ್ಲ, ಅದು ಕ್ರೀಡೆ. ಎರಡು ಸಮರ್ಥ ತಂಡಗಳ ಆಟದ ಹೋರಾಟವನ್ನು ನೋಡಿ ಆನಂದಿಸುವ ಮನಸ್ಸು ಬೇಕು. ಅದಕ್ಕೆ ರಾಷ್ಟ್ರಾಭಿಮಾನದ ಹೆಸರಿನಲ್ಲಿ, ಧರ್ಮ, ಜಾತಿ, ರಾಷ್ಟ್ರಗಳ ಕುರಿತಾದ ಅತಿ ಅಹಂಕಾರದ ಪೂರ್ವಾಗ್ರಹ ದೃಷ್ಟಿಯಿಂದ ಮುಕ್ತವಾಗಿರಬೇಕು. ಇಂಥ ತಿಳಿವಳಿಕೆಯ ಒಂದು ಮಾತನ್ನು ಕೂಡ ನಮ್ಮ ರಾಜಕಾರಣಿಗಳು ಹೇಳುವುದಿಲ್ಲ, ಅವರು ಹೇಳಲಿ ಬಿಡಲಿ, ನಮ್ಮ ಮಾಧ್ಯಮಗಳು ಈ ಮನೋಭಾವವನ್ನೇ ಬಿತ್ತರಿಸಿ ಬೆಳೆಸಬೇಕು.

ಕೆರೆಕೋಣ **ಡಾ॥ ಆರ್. ವಿ. ಭಂಡಾರಿ**

---

**ಒಪ್ಪೋಲೆ**

*ಫೆಬ್ರವರಿ ಸಂಚಿಕೆಯಲ್ಲಿ ಪ್ರೊ॥ ಬಿ. ವಿ. ವೆಂಕಟರಾವ್ ಅವರ ಲೇಖನದೊಂದಿಗೆ ಪ್ರಕಟವಾದ ಚಿತ್ರಗಳನ್ನು ಒದಗಿಸಿದ್ದವರು ಭಾವಿಕೆರೆ ಸಂಶೋಧನಾ ಕೇಂದ್ರದ ಪ್ರೊ॥ ಎಂ. ರುದ್ರಾರಾಧ್ಯ ಅವರು.*

---

*೫ನೇ ಪುಟದಿಂದ.... ಸಂಪಾದಕೀಯ*

ಉಲ್ಲಂಘನೆಯೂ ಅಲ್ಲವೆ ? ಈ ಪ್ರಶ್ನೆಯನ್ನೆತ್ತದಿರುವುದು ಅಪರಾಧವೆನಿಸುತ್ತದೆ.

ಅರಬ್ ದೇಶಗಳ ಪ್ರಜ್ಞೆ ಸತ್ತಿದೆಯಾದ್ದರಿಂದ ಇಸ್ರೇಲಿನ ಯಾವ ದೌರ್ಜನ್ಯಕ್ಕೂ ಪ್ರತಿರೋಧ ತೋರಿಬರುತ್ತಿಲ್ಲ. ಅರಬ್ ರಾಷ್ಟ್ರೀಯತೆಯು ಝಿಯೋನಿಸಂ ತತ್ತ್ವವನ್ನು ಪ್ರಶ್ನಿಸುತ್ತಲೇ ಇಸ್ರೇಲಿನ ಅಸ್ತಿತ್ವವನ್ನು ಒಪ್ಪಿಕೊಳ್ಳಬೇಕಾದ್ದು ಅನಿವಾರ್ಯ. ಮಿಲಿಟರಿ ದೈತ್ಯಶಕ್ತಿಯು ಸದಾಕಾಲಕ್ಕೂ ನಿರ್ಣಾಯಕವಾಗಿ ಉಳಿಯಬಾರದೆಂಬುದು ವಿಶ್ವದ ನಿರೀಕ್ಷೆ. ೧೯೪೮ರಲ್ಲಿ ಮಹಾಯುದ್ಧದ ನಂತರ ಇಸ್ರೇಲನ್ನು ರಚಿಸುವಾಗ ಅಲ್ಲಿ ಶತಮಾನಗಳಿಂದ ವಾಸವಾಗಿದ್ದವರ ಹಕ್ಕುಗಳು ಮತ್ತು ಭವಿಷ್ಯ ಅಂದಿನ ಅಧಿನಾಯಕರಿಗೆ ಮುಖ್ಯವೆನಿಸಲಿಲ್ಲ. ಯೂರೋಪಿನಲ್ಲಿ ಯಹೂದಿಗಳ ಮೇಲೆ ಹಲ್ಲೆಗಳು ನಡೆಯುತ್ತಿದ್ದಾಗ ಅರಬ್ ದೇಶಗಳಲ್ಲಿ ವಾಸಿಸುತ್ತಿದ್ದ ಯಹೂದಿಗಳು ಯಾವ ತೊಂದರೆಯನ್ನೂ ಅನುಭವಿಸುವ ಪ್ರಮೇಯವಿರಲಿಲ್ಲ. ಅಲ್ಲದೆ, ಯುದ್ಧದಲ್ಲಿ ಅರಬ್ಬರೂ ಜರ್ಮನಿ ವಿರುದ್ಧ ಅಣಿಗೊಂಡಿದ್ದರು. ಆದಾಗ್ಯೂ ಇಸ್ರೇಲ್ ರಚನೆಯಲ್ಲಿ ಅವರ ಸಮ್ಮತಿಯನ್ನು ಪಡೆಯುವ ಸೌಜನ್ಯ ಕಂಡುಬರಲಿಲ್ಲ. ಮೊದಲಿಗೆ ಝಿಯೋನಿಸ್ಟ್ ಚಳುವಳಿಯ ನಾಯಕ ವೈಸ್‌ಮನ್‌ಗೆ ಬ್ರಿಟನ್ ಉಗಾಂಡ ದೇಶವನ್ನು ತೆರವು ಮಾಡಿಕೊಡಲು ಮುಂದಾಗಿತ್ತು. ಅಂದರೆ, ಉಗಾಂಡ ತನ್ನ ಹಿತ್ತಲು ಮನೆಯೆಂದು ಬ್ರಿಟನ್ ಭಾವಿಸಿತ್ತು ! ಇಸ್ರೇಲಿನ ನಾಯಕ ಎಶ್ಕೋಲ್ ೧೯೬೭ರಲ್ಲಿ ಘೋಷಿಸಿದ್ದ : ''ನಾವು ಆಕ್ರಮಿಸಿದ ಪ್ರದೇಶವನ್ನು ಶತ್ರುಗಳ ಪ್ರದೇಶವೆಂದು ಭಾವಿಸುವುದಿಲ್ಲ'' ಇಂದಿನ ನೀತಿಯೂ ಅದೇ ಆಗಿದೆ. ಅಂದರೆ, ಅದು ಅವರದೇ !

ವಿಶ್ವಸಂಸ್ಥೆಯ ನಿರ್ಣಯಗಳಡಿ ಗಾಜಾ ಪಟ್ಟಿಯಲ್ಲಿ ಅಂತರರಾಷ್ಟ್ರೀಯ ಸೈನ್ಯದ ತುಕಡಿಗಳನ್ನಿರಿಸಲಾಗಿತ್ತು. ಆ ತುಕಡಿಗಳು ಇಸ್ರೇಲಿನ ಆಕ್ರಮಣವನ್ನು ತಡೆಗಟ್ಟುವ ಬದಲು ಅದಕ್ಕೆ ಪುಷ್ಟಿ ನೀಡುತ್ತಿದ್ದುವು. ಅವು ಇಸ್ರೇಲಿನ ಪ್ರದೇಶದೊಳಗೆ ಕಾಲಿರಿಸುವಂತಿರಲಿಲ್ಲ. ಆದರೆ ಇಸ್ರೇಲ್ ನೆರೆರಾಷ್ಟ್ರಗಳಿಗೆ ನುಗ್ಗುವುದನ್ನು ತಡೆಯಲೂ ಇಲ್ಲ. ಸಿರಿಯಾದ ಮೇಲೆ ಇಸ್ರೇಲ್ ಆಕ್ರಮಣ ನಡೆಸುವ ಹುನ್ನಾರ ಪ್ರಕಟವಾದಾಗ ಈಜಿಪ್ಟಿನ ಅಂದಿನ ಅಧ್ಯಕ್ಷ ನಾಸೆರ್ ಈ ತುಕಡಿಗಳನ್ನು ಹಿಂತೆಗೆದುಕೊಳ್ಳಬೇಕೆಂದು ಆಗ್ರಹಪಡಿಸಿದ್ದು ತಿಳಿದ ವಿಷಯ. ಇದರ ತರುವಾಯದಲ್ಲಿ ದೆರ್‌ಯಾಸಿನ್ ಎಂಬ ಹಳ್ಳಿಯನ್ನು ಸಂಪೂರ್ಣವಾಗಿ ನಾಶಗೊಳಿಸಿದ ಇಸ್ರೇಲ್ ಆ ದುರಾಕ್ರಮಣವನ್ನು ನೂರುಪಟ್ಟು ಹೆಚ್ಚಿಸಿಕೊಂಡು ಬರುತ್ತಿದೆ. ಜಾನ್ ಗುಂತರ್ ಒಮ್ಮೆ ಹೇಳಿದ್ದ : ಯೆಮೆನ್ ಕಾಫಿ ಉತ್ಪಾದಿಸುತ್ತದೆ, ಈಜಿಪ್ಟ್ ಹತ್ತಿಯನ್ನು, ಇರಾಕ್ ಖರ್ಜೂರವನ್ನು, ಪ್ಯಾಲಿಸ್ಟೈನ್ ಕಿತ್ತಳೆಯನ್ನು ಮತ್ತು ಸಿರಿಯಾ ತೊಂದರೆಯನ್ನು ! ಉತ್ಪನ್ನಗಳು ಬೇಕು, ತೊಂದರೆ ಬೇಡ, ಎಂಬ ಕಾರಣಕ್ಕೆ ಇಸ್ರೇಲಿನ ದೌರ್ಜನ್ಯಗಳನ್ನು ಅಮೆರಿಕಾ ಬೆಂಬಲಿಸುತ್ತದೆ. ಆ ಉತ್ಪನ್ನಗಳ ಜೊತೆಗೆ ತೈಲವೂ ಸೇರಿಕೊಂಡಿದೆ. ಅವನ್ನು ಕಬಳಿಸಲು ಇಸ್ರೇಲಿಗೆ ''ಕ್ಷೇಮಕರ ಸೀಮಾರೇಖೆಗಳು'' ಅಗತ್ಯವೆಂದು ಹೇಳುತ್ತಾ ಎಲ್ಲ ಅರಬ್ ರಾಷ್ಟ್ರಗಳಲ್ಲೂ ಅಮೆರಿಕಾ ತನ್ನ ಆಧಿಪತ್ಯವನ್ನು ಸ್ಥಾಪಿಸಿಕೊಂಡಿದೆ. ಪ್ಯಾಲಿಸ್ಟೈನ್‌ನ ಪ್ರಶ್ನೆಯನ್ನು ಇದರ ಹಿನ್ನೆಲೆಯಲ್ಲಿ ನೋಡಿದರೆ ಅಲ್ಲಿ ಶಾಂತಿ ಸ್ಥಾಪನೆಗಿರುವ ನಿಜವಾದ ತೊಡಕೇನೆಂಬುದು ತಿಳಿಯುತ್ತದೆ. ತಮ್ಮ ಭೌಗೋಳಿಕ ಸಂಪತ್ತೇ ತಮಗೆ ಹೊರೆ ಮತ್ತು ಹಿಂಸೆಯ ಆಗರವಾಗದಂತೆ ನೋಡಿಕೊಳ್ಳಲು ಅರಬ್ ರಾಷ್ಟ್ರಗಳು ಪ್ಯಾಲಿಸ್ಟೈನ್ ಜೊತೆ ಸಮೀಕರಣ ಸಾಧಿಸಿಕೊಂಡಾಗ ಮಾತ್ರವೇ ಪಶ್ಚಿಮ ಏಷ್ಯದ ಸಂಧಾನಗಳು ಜನಪರವಾದ ಫಲ ನೀಡಬಲ್ಲವು. ಸೆಪ್ಟೆಂಬರ್ ೧೯೪೮ರ ೧೭ರಂದು ಇಸ್ರೇಲಿನ ಗೂಢಚಾರ ಸೈನ್ಯವು ಆಗ ವಿಶ್ವಸಂಸ್ಥೆಯ ಪ್ರತಿನಿಧಿಯಾಗಿ ಪಶ್ಚಿಮ ಏಷ್ಯಾದಲ್ಲಿದ್ದ ಫೋಕ್ ಬರ್ನಾಡಟ್‌ನನ್ನು ಕೊಂದಿತು. ಅದಕ್ಕೆ ಮುನ್ನಾ ದಿನ ಆತ ನೀಡಿದ್ದ ಹೇಳಿಕೆ ಇದು : ''ಈಗಿನ ಭಯೋತ್ಪಾದನೆ ಮತ್ತು ಯುದ್ಧದ ಭೀಕರತೆಗೆ ಇಸ್ರೇಲ್ ಕಾರಣ. ಪ್ಯಾಲಿಸ್ಟೈನಿನ ನೂರಾರು ಜನರ ಹಕ್ಕನ್ನು ಕಸಿದುಕೊಳ್ಳಲಾಗಿದೆ, ಅವರ ನೆಲೆಗಳಿಂದ ಅವರನ್ನು ಹೊರದೂಡಲಾಗಿದೆ. ಅವರ ನೆಲೆಗಳಿಗೆ ಹಿಂದಿರುಗಲು ಅವರು ಹಕ್ಕುದಾರರೆಂಬುದನ್ನು ಮನಗಂಡು ಅದಕ್ಕೆ ಬೇಕಾದ ಕ್ರಮಗಳನ್ನು ಕೈಗೊಳ್ಳಬೇಕು.'' ಇದನ್ನು ಹೇಳಿದ ೫೬ ವರ್ಷಗಳ ನಂತರವೂ ಪ್ಯಾಲಿಸ್ಟೈನ್ ಸಮಸ್ಯೆಗೆ ಇರುವ ಪರಿಹಾರ ಅದೇ ದಿಕ್ಕಿನಲ್ಲಿದೆ, ವಿಶ್ವಸಂಸ್ಥೆಗೆ ಅದನ್ನು ನಿರ್ವಹಿಸುವ ಕರ್ತವ್ಯವಿದೆ.

# ಈಗಿನ ಚುನಾವಣೆಯಲ್ಲಿ ಜನತೆಯ ನಿರೀಕ್ಷೆಗಳು

ವಿಶ್ವದಲ್ಲೇ ಹೆಚ್ಚು ರಾಜಕೀಯ ಪಕ್ಷಗಳಿರುವ ದೇಶ ಭಾರತ. ಏಕೈಕ ಪಕ್ಷ ಹೆಚ್ಚುಕಾಲ ರಾಜ್ಯಭಾರ ಮಾಡಿದ ದೇಶವೂ ಭಾರತವೇ. ಆದರೆ ಇಂದು ಭಾರತದಲ್ಲಿ ಯಾವುದೇ ರಾಜಕೀಯ ಪಕ್ಷ ಒಂಟಿಯಾಗಿ ಆಡಳಿತ ಮಾಡುವ ಶಕ್ತಿಯನ್ನು ಉಳಿಸಿಕೊಂಡಿಲ್ಲ. ಕಾಂಗ್ರೆಸ್ ಒಂದು ಕಾಲದಲ್ಲಿ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಭಾವ ಹಾಗೂ ಶಕ್ತಿ ಪಡೆದ ಪಕ್ಷವಾಗಿತ್ತು. ಆದರೆ ಇಂದು ದೇಶದಲ್ಲಿ ಪ್ರಾಂತೀಯ ಪಕ್ಷಗಳು ಆಯಾ ರಾಜ್ಯದಲ್ಲಿ ಶಕ್ತಿಯಾಗಿ ಬೆಳೆದು ಕಾಂಗ್ರೆಸ್ ಪಕ್ಷದ ಏಕಸ್ವಾಮ್ಯತೆಯನ್ನು ಮುರಿದಿವೆ. ಇಂದು ಅಧಿಕಾರದಲ್ಲಿರುವ ಬಿ.ಜೆ.ಪಿ.ಯಾಗಲಿ ಪ್ರತಿಪಕ್ಷವಾದ ಕಾಂಗ್ರೆಸ್ ಆಗಲಿ ಇತರೆ ಪಕ್ಷಗಳ ಸಹಾಯ ಸಹಕಾರವಿಲ್ಲದೆ ಆಡಳಿತ ಮಾಡುವ ಸ್ಥಿತಿಯಲ್ಲಿಲ್ಲ. ಬಿ.ಜೆ.ಪಿ. ಇಂದು ಏಕೈಕ ಪಕ್ಷವಾಗಿ ಆಡಳಿತ ನಡೆಸಲು ಹವಣಿಸುತ್ತಿದೆ. ಅದಕ್ಕಾಗಿ ಕೋಮುವಾದವನ್ನೂ ಒಳಗೊಂಡು ಹಲವಾರು ಅಪಾಯಕಾರಿ ಸೂತ್ರಗಳನ್ನು ಕೆಲವೊಮ್ಮೆ ನೇರವಾಗಿ ಕೆಲವೊಮ್ಮೆ ಪರೋಕ್ಷವಾಗಿ ಜನರ ಮುಂದಿಡುತ್ತಾ ಬಂದಿದೆ. ಸ್ಥಿರ ಸರಕಾರದ ಘೋಷಣೆಯನ್ನೂ ಕೊಡುತ್ತಿದೆ. ಸ್ಥಿರ ಸರಕಾರವೆಂದರೆ ಹಿಂದೆ ಕಾಂಗ್ರೆಸ್ ಆಡಳಿತ ನಡೆಸಿದ ರೀತಿಯಲ್ಲಿ ಏಕಸ್ವಾಮ್ಯವನ್ನು ಹೊಂದುವುದು! ಆದರೆ ಸ್ಥಿರತೆಗಿಂತಲೂ ಮುಖ್ಯವಾಗಿ ಆ ಸರಕಾರಗಳು ಐದು ವರ್ಷಗಳಲ್ಲಿ ಎಂಥ ಆಡಳಿತ ನೀಡಿವೆ ಎನ್ನುವುದು ಮುಖ್ಯವಾಗುತ್ತದೆ. ಇಂದು ಭಾರತ ಪ್ರಕಾಶಿಸುತ್ತಿದೆ, ಹಿತಾನುಭವ, ಸೂಪರ್ ಪವರ್‌ನ ಭಾರತ, ಇತ್ಯಾದಿ ಹೇಳಿಕೆಗಳನ್ನು ಕೊಡುತ್ತಲೇ ಜನರ ಗಮನವನ್ನು ಸೆಳೆವ ಹಾಗೂ ಮೂಲಭೂತ ಸಮಸ್ಯೆಗಳಿಗಿಂತ ಹೆದ್ದಾರಿ ನಿರ್ಮಾಣ, ವಿದೇಶಿ ಬಂಡವಾಳ, ಭಾರತ-ಪಾಕ್ ಸಂಬಂಧದಂಥ ವಿಷಯಗಳ ಕುರಿತು ಹೆಚ್ಚು ಪ್ರಸ್ತಾಪ ಮಾಡಲಾಗುತ್ತಿದೆ. ಇಂದು ಮೌಲ್ಯಗಳ ಬದಲಾಗಿ ಅಧಿಕಾರ ಕೇಂದ್ರಿತ ರಾಜಕಾರಣದ ಮಾರ್ಗ ಮುಖ್ಯವಾಗುತ್ತಿದೆ. ಬಹುತೇಕ ರಾಜ್ಯಗಳಲ್ಲಿ ತಾಂಡವವಾಡುತ್ತಿರುವ ಬರಗಾಲ, ಬಡತನ, ನಿರುದ್ಯೋಗ, ಸಾಮಾಜಿಕ ಅಭದ್ರತೆ, ಆರೋಗ್ಯ ಸಮಸ್ಯೆಗಳು, ಶೈಕ್ಷಣಿಕ ಸಮಸ್ಯೆಗಳು, ಕುಡಿವ ನೀರು, ಕೃಷಿ-ಕೈಗಾರಿಕೆ ಸಮಸ್ಯೆಗಳು ಇವು ಯಾವುವೂ ಚುನಾವಣೆಯಲ್ಲಿ ಕಾರ್ಯಸೂಚಿಯಾಗದೆ ಇರುವುದು ಈ ದೇಶದ ಪ್ರಜಾಪ್ರಭುತ್ವದ ದುರಂತ. ಎಡಪಕ್ಷಗಳನ್ನು ಹೊರತುಪಡಿಸಿ ಎಲ್ಲ ಪಕ್ಷಗಳೂ ಅಧಿಕಾರದ ಗದ್ದುಗೆ ಏರಲು ಪಕ್ಷಾಂತರ, ಪ್ರಸಿದ್ಧ ವ್ಯಕ್ತಿಗಳ, ಕ್ರಿಕೆಟ್ ಆಟಗಾರರ ಹಾಗೂ ಚಿತ್ರನಟ-ನಟಿಯರ ಪಕ್ಷಸೇರ್ಪಡೆ ಮತ್ತು ಸ್ಥಾನ ಹೊಂದಾಣಿಕೆಯಲ್ಲಿಯೇ ಮಗ್ನವಾಗಿವೆ. ಕೋಮುವಾದ ಹಾಗೂ ಜಾಗತೀಕರಣ ನೀತಿಗಳನ್ನು ವಿರೋಧಿಸುವ ಎಡಪಕ್ಷಗಳು ಇಡೀ ವರ್ಷ ಈ ನೀತಿಗಳ ವಿರುದ್ಧ ಹೋರಾಡಿ ಈಗ ಕೋಮುವಾದಿ ಬಿ.ಜೆ.ಪಿ. ಹಾಗೂ ಅದರ ಮಿತ್ರ ಪಕ್ಷಗಳ ಎನ್.ಡಿ.ಎ. ಕೂಟದ ವಿರುದ್ಧ ಜಾತ್ಯತೀತ ಶಕ್ತಿಗಳನ್ನು ಒಗ್ಗೂಡಿಸುತ್ತಿವೆ. ಸ್ವಲ್ಪಮಟ್ಟಿಗೆ ಜಾಗತೀಕರಣ ವಿರೋಧಿ ನೀತಿಗೆ ಹಿನ್ನೆಡೆಯಾದರೂ ಕೋಮುವಾದ ವನ್ನು ಜಾಗತೀಕರಣದ ಮುಖವಾಡದಂತೆ ಬಳಸಿಕೊಳ್ಳುತ್ತಿರುವ ಬಿ.ಜೆ.ಪಿ.ಯ ಅಪಾಯಕಾರಿ ನೀತಿಗಳನ್ನು ಎದುರಿಸಲು ಕಾಂಗ್ರೆಸ್ ಜೊತೆಗಿನ ಹೊಂದಾಣಿಕೆ ಎಡಪಕ್ಷಗಳಿಗೆ ಅನಿವಾರ್ಯವಾಗಿದೆ. ಜಾತ್ಯತೀತ ಶಕ್ತಿಗಳ ಏಕತೆ ಸಾಧಿಸುವುದು, ಆ ಮೂಲಕ ದೇಶದಲ್ಲಿ ಕೋಮುವಾದಿಗಳ ನಾಯಕತ್ವದ ಎನ್.ಡಿ.ಎ. ಕೂಟವನ್ನು ಅಧಿಕಾರದಿಂದ ಕೆಳಗಿಳಿಸುವುದು ಅವರ ಉದ್ದೇಶ. ಆದರೆ ಪ್ರಾಂತೀಯ ಹಾಗೂ ಸೆಂಟ್ರಿಸ್ಟ್ ಪಕ್ಷಗಳಿಗೆ ಅಧಿಕಾರದ ಹೊರತಾಗಿ ಇನ್ಯಾವ ಮೌಲ್ಯಗಳೂ ಕಾಣಿಸುತ್ತಿಲ್ಲ. ನಿನ್ನೆ ಮೊನ್ನೆ ಎನ್.ಡಿ.ಎ. ಜೊತೆಗಿದ್ದವರು ಇಂದು ಜಾತ್ಯತೀತತೆಯ ಬಗ್ಗೆ ಮಾತನಾಡುತ್ತಾರೆ. ನಿನ್ನೆ ಜಾತ್ಯತೀತ ಮೌಲ್ಯಗಳ ವಾರಸುದಾರರಂತೆ ವರ್ತಿಸುತ್ತಿದ್ದವರು ಇಂದು ವಾಜಪೇಯಿಯವರ ನಾಯಕತ್ವ ಕೊಂಡಾಡಿ ಬಿ.ಜೆ.ಪಿ. ಸೇರಿಕೊಳ್ಳುತ್ತಿದ್ದಾರೆ. ಅಥವಾ ಎನ್.ಡಿ.ಎ. ಭಾಗವಾಗುತ್ತಿದ್ದಾರೆ. ದೇಶದಾದ್ಯಂತ ನಡೆವ ಈ ಮಂಗಾಟವನ್ನು ಗಮನಿಸಿದರೆ ಈ ಸಮಯಸಾಧಕ ರಾಜಕಾರಣಿಗಳು, ಅಧಿಕಾರದಾಹಿ ರಾಜಕೀಯ ಪಕ್ಷಗಳು ಮೊಟ್ಟಮೊದಲ ಬಾರಿಗೆ ಈ ದೇಶದ ಜನತೆಯನ್ನು ನಿರ್ಲಕ್ಷಿಸಿದ್ದಾರೆ ಎಂದರೆ ತಪ್ಪಿಲ್ಲ.

೧೯೫೨ರಲ್ಲಿ ನಡೆದ ಪ್ರಥಮ ಸಾರ್ವತ್ರಿಕ ಚುನಾವಣೆಯಿಂದ ಇಂದಿನವರೆಗೆ ಜನರ ಬದುಕನ್ನು, ದೇಶದ ಬೆಳವಣಿಗೆಯನ್ನು, ಗಮನದಲ್ಲಿಟ್ಟುಕೊಂಡು ಜನರ ಮುಂದೆ ಒಂದು ಕಾರ್ಯಕ್ರಮವನ್ನು ಇಡುತ್ತಿದ್ದರು. ತೋರಿಕೆಗಾದರೂ ಒಂದು ಪ್ರಣಾಳಿಕೆಯನ್ನು ಮೌಲ್ಯಗಳ ಆಧಾರದಲ್ಲಿ ಮಂಡಿಸುತ್ತಿದ್ದರು. ಆದರೆ ಇಂದು ಎಡಪಕ್ಷಗಳ ಹೊರತಾಗಿ ಉಳಿದ ಬಹುತೇಕ ರಾಜಕೀಯ ಪಕ್ಷಗಳು ಅಧಿಕಾರವೇ ತಮ್ಮ ಮೌಲ್ಯ, ಸಂದರ್ಭಸಾಧಕತನವೇ ಮಾರ್ಗ ಎಂಬ ನೀತಿಗೆ ತಲುಪಿವೆ.

ರಾಜ್ಯ ರಾಜಕಾರಣದಲ್ಲಿ ಇದಕ್ಕಿಂತ ಭಿನ್ನವಾದ ಚಿತ್ರಣವೇನಿಲ್ಲ. ಬಿ.ಜೆ.ಪಿ. ಹಾಗೂ ಕಾಂಗ್ರೆಸ್‌ನವರು ಕೊಡುತ್ತಿರುವ ಹೇಳಿಕೆಗಳನ್ನು ಗಮನಿಸಿದರೆ ಕೇಂದ್ರದ ಬಿ.ಜೆ.ಪಿ. ಸಹಾಯ ದಿಂದ ಹಾಗೂ ರಾಜ್ಯದ ಕಾಂಗ್ರೆಸ್ ನೀತಿಯಿಂದ ರಾಜ್ಯ ಸಂಪೂರ್ಣವಾಗಿ ಸಂಪದ್ಭರಿತವಾಗಿದೆ ಎಂಬ ಭಾವನೆ ಬರುತ್ತದೆ. ರಾಜ್ಯವು ಕಳೆದ ಮೂರು ವರ್ಷಗಳಿಂದ ಸತತವಾದ ಬರಗಾಲಕ್ಕೆ ತುತ್ತಾಗುತ್ತಿದ್ದರೂ ರಾಜ್ಯದ ಆಡಳಿತ ಪಕ್ಷವಾದ ಕಾಂಗ್ರೆಸ್ ಪಕ್ಷ ಜನರ ನೆರವಿಗೆ ಪ್ರಾಮಾಣಿಕವಾದ ಪ್ರಯತ್ನ ಮಾಡಲಿಲ್ಲ. 'ಕೂಲಿಗಾಗಿ ಕಾಳು' ಎಂಬ ಯೋಜನೆಯಡಿಯಲ್ಲೂ ಭ್ರಷ್ಟಾಚಾರ ನಡೆಸಿದ ಅಧಿಕಾರಿಗಳು, ರಾಜಕಾರಣಿಗಳನ್ನು ಎಂಥ ಶಬ್ದಗಳಿಂದ ಖಂಡಿಸಬೇಕೆಂಬುದೇ ಅರ್ಥವಾಗದಂತಿದೆ. ಇನ್ನು ರಾಜ್ಯದಲ್ಲಿ ವಿರೋಧ ಪಕ್ಷವಾದ ಬಿ.ಜೆ.ಪಿ. ಸ್ಟಾಂಪ್ ಹಗರಣದಲ್ಲಿ ಸಿಲುಕಿದ ರೋಶನ್ ಬೇಗ್ ರಾಜೀನಾಮೆಗೆ ಒತ್ತಾಯಿಸಿದ ನೂರನೇ ಒಂದು ಭಾಗದಷ್ಟೂ 'ಕೂಲಿಗಾಗಿ ಕಾಳು' ಯೋಜನೆಯಲ್ಲಿ ನಡೆದ ಭ್ರಷ್ಟಾಚಾರದ ವಿರುದ್ಧ ಸೊಲ್ಲೆತ್ತಲಿಲ್ಲ.

ಕಳೆದ ಚುನಾವಣೆಯ ನಂತರ ಕೇಂದ್ರ ಸರಕಾರದ ನೀತಿಗಳಿಗೆ ಪ್ರಚಾರ ಪಡೆಯುವುದು ಬಿ.ಜೆ.ಪಿ. ಕಾಯಕವಾದರೆ ರಾಜ್ಯ ಸರಕಾರದ ಯೋಜನೆಗಳನ್ನು ಮಹಾಸಾಧನೆಗಳೆಂದು ಕೊಚ್ಚಿಕೊಳ್ಳುವುದು ಕಾಂಗ್ರೆಸ್ ಕಾಯಕವಾಗಿದೆ. ಈ ಯಾವ ಯೋಜನೆಗಳೂ ಪ್ರಾಮಾಣಿಕವಾಗಿ ಪೂರ್ಣಪ್ರಮಾಣದಲ್ಲಿ ಜನತೆಗೆ ತಲುಪಲಿಲ್ಲ. ಭ್ರಷ್ಟಾಚಾರದಲ್ಲಿ ಇಡೀ ವಿಧಾನಸಭೆ 'ನೀ ನನಗಾದರೆ ನಾ ನಿನಗೆ' ಎಂಬ ನೀತಿಗೆ ಬದ್ಧವಾಗಿತ್ತು. ಮೇಲಾಗಿ ಭ್ರಷ್ಟತೆಯ ಜೊತೆ ಕೋಮುವಾದ ಬಿ.ಜೆ.ಪಿ.ಯ ಇನ್ನೊಂದು ಪ್ರಮುಖ ಕಾರ್ಯಸೂಚಿ. ಜನತಾದಳದವರು ಕಳೆದ ಚುನಾವಣೆಯಿಂದ ಇಂದಿನವರೆಗೆ ದೂರಾಗಲು ಒಂದಾಗುವುದು, ಒಂದಾಗಲು ದೂರವಾಗು ವುದು ಎಂದು ಹಾಡುತ್ತಲೇ ಬಂದರು. ಕೊನೆಗೂ ಒಂದಾಗದೆ ಪ್ರಗತಿಪರ ಜನತಾದಳ, ಕಾಂಗ್ರೆಸ್ ಮತ್ತು ಬಿ.ಜೆ.ಪಿ. ಮಧ್ಯೆ ಹಂಚಿಹೋಯಿತು. ಕಳೆದ ಬಾರಿ ಜನತಾದಳಗಳು ಪ್ರತ್ಯೇಕವಾಗಿಯೇ ಸ್ಪರ್ಧಿಸಿ ಪಡೆದ ಪ್ರತಿಶತ ಮತ ೨೪.೦ (ಜೆ.ಡಿ.ಯು : ೧೩.೫೨ ಮತ್ತು ಜೆ.ಡಿ.ಎಸ್. ೧೦.೪೭). ಆದರೆ ಪ್ರತಿಶತ ೨೦.೬ ಮತ ಪಡೆದ ಬಿ.ಜೆ.ಪಿ. ವಿರೋಧ ಪಕ್ಷವಾಯಿತು.

ರಾಜ್ಯ ರಾಜಕಾರಣದಲ್ಲಿ ತೀವ್ರವಾದ ಬದಲಾವಣೆಗಳಾಗುತ್ತಿವೆ. ಜನತೆಯ ಸಮಸ್ಯೆ, ಬೇಡಿಕೆ ಇಲ್ಲಿರುವ ಆಳುವ, ವಿರೋಧ ಪಕ್ಷಗಳ ಕಾರ್ಯಸೂಚಿಯಲ್ಲಿಲ್ಲ. ಯಾರ್‍ಯಾರನ್ನು ನಮ್ಮ ಪಕ್ಷಕ್ಕೆ ಕರೆದುಕೊಂಡರೆ ನಾವು ಅಧಿಕಾರ ಹಿಡಿಯಬಹುದು ಎಂಬ ಆಲೋಚನೆಯೇ ಇವರ ಪ್ರಮುಖ ಕಾರ್ಯಕ್ರಮ. ಮೌಲ್ಯಗಳು ದಿವಾಳಿಯಾಗಿವೆ. ಬರುವ ದಿನಗಳಲ್ಲಿ ನಮ್ಮ ರಾಜ್ಯದ ಬರಗಾಲವನ್ನು ಸಮರ್ಥವಾಗಿ ಎದುರಿಸುವ ಸರಕಾರ ನಮಗಿಂದು ಬೇಕಾಗಿದೆ. ಈಗಾಗಲೆ ಉತ್ತರ ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಕುಡಿವ ನೀರಿಗೂ ಗತಿ ಇಲ್ಲದಂತಾಗಿದೆ. ನಗರಗಳಲ್ಲಿ ವಾರಕ್ಕೊಮ್ಮೆ ನೀರಿನ ಸರಬರಾಜಾಗುತ್ತಿದೆ. ದನಕರುಗಳಿಗೆ ನೀರೂ ಸಿಗದ ಸ್ಥಿತಿ ನಿರ್ಮಾಣವಾಗಿದೆ. ಬಹುತೇಕ ಹಳ್ಳಿಗಳ ಕೂಲಿಕಾರ ಜನ ವಲಸೆ ಹೋಗಿದ್ದಾರೆ. ಹಳ್ಳಿಗಳು ಬಿಕೋ ಎನ್ನುತ್ತಿವೆ. ಕಾಫಿ ಮತ್ತು ಅಡಿಕೆ ಬೆಳೆಯುವ ಶ್ರೀಮಂತರೂ ಈಗ ಸಾಲಗಾರರಾಗಿದ್ದಾರೆ. ಬಡವರಿಗೆ ಉನ್ನತ ಶಿಕ್ಷಣ ಮರೀಚಿಕೆಯಾಗಿದೆ. ನಗರ ಹಾಗೂ ಗ್ರಾಮೀಣ ಯುವಕರು ನಿರುದ್ಯೋಗದಿಂದ ತತ್ತರಿಸಿದ್ದಾರೆ. ಪರಿಣಾಮವಾಗಿ ಕೊಲೆ, ದರೋಡೆ ಹೆಚ್ಚುತ್ತಿವೆ. ಇಂಥ ಸಂದರ್ಭದಲ್ಲಿಯೇ ಕೋಮುಗಲಭೆ ಗಳನ್ನು ಹಬ್ಬಿಸಿ ಕೊಚ್ಚೆಯಲ್ಲಿ ಮೀನು ಹಿಡಿವ ಕೆಲಸ ಬಿ.ಜೆ.ಪಿ.ಯವರು ನಡೆಸಿದ್ದಾರೆ. ಇಂಥ ವಾತಾವರಣದಲ್ಲಿ ಕೋಮುಸೌಹಾರ್ದವನ್ನು ಪ್ರಾಮಾಣಿಕವಾಗಿ ಬಯಸುವ, ಗ್ರಾಮೀಣ ಜನತೆಗೆ ಕನಿಷ್ಠ ಸೌಲಭ್ಯಗಳನ್ನಾದರೂ ಒದಗಿಸುವ ಕಾರ್ಯಕ್ರಮ ಹೊಂದಿದ, ಜಾಗತೀಕರಣಕ್ಕೆ ರಾಜ್ಯದ ಜನತೆಯ ಹಿತಾಸಕ್ತಿಯನ್ನೇ ಬಲಿಕೊಡದ, ತೀರ ಬಡವರ ಬದುಕನ್ನು ಬಲಿಕೊಟ್ಟು ಭ್ರಷ್ಟಾಚಾರ ಮಾಡದ, ರಾಜಕಾರಣವನ್ನು ಜನ ಕೇಂದ್ರಿತ ದೃಷ್ಟಿಯಿಂದ ನೋಡುವ ಒಂದು ಸರಕಾರ ಈ ರಾಜ್ಯಕ್ಕೆ, ದೇಶಕ್ಕೆ ಬೇಕಾಗಿದೆ. ಆದರೆ ಭ್ರಷ್ಟ-ದುಷ್ಟರಿಗೆ ಪರ್ಯಾಯವಾಗಿ ಮತ್ತೆ ಅತಿ ಭ್ರಷ್ಟರೇ ಕಾಣಿಸುತ್ತಿದ್ದಾರೆ! ಕಡಿಮೆ ಅಪಾಯಕಾರಿಗಳನ್ನು ಅವರಲ್ಲೇ ಆಯ್ಕೆ ಮಾಡಿಕೊಳ್ಳುವ ಅನಿವಾರ್ಯ ಸ್ಥಿತಿಗೆ ಈ ರಾಜ್ಯ, ದೇಶದ ಜನತೆ ತಲುಪಿದ್ದಾರೆ. ಇದು ೧೩ನೆಯ ಲೋಕಸಭಾ ಚುನಾವಣೆಗಳನ್ನು ಮುಗಿಸಿ ೧೪ನೇ ಲೋಕಸಭೆಗೆ ತೆರಳುವ ಮುನ್ನ ನಮ್ಮ ಸ್ಥಿತಿ.

ಒಂದೇ ಒಂದು ಆಶಾದಾಯಕ ಸ್ಥಿತಿ ಎಂದರೆ ಈ ರಾಜ್ಯದಲ್ಲಿ ದಲಿತ ಸಂಘಟನೆಗಳು, ರೈತ ಸಂಘಟನೆಗಳು, ಕಮ್ಯುನಿಸ್ಟ್ ಪಕ್ಷಗಳು ಸೇರಿ ಕಳೆದ ತಿಂಗಳು ಕರ್ನಾಟಕ ಜನಪರ ಚಳುವಳಿಗಳ ಒಕ್ಕೂಟ ರಚಿಸಿಕೊಂಡಿವೆ. ಈ ಸಲದ ಚುನಾವಣೆಯಲ್ಲಿ ಕೋಮುವಾದದ ವಿರುದ್ಧ ರಾಜಕೀಯ ಶಕ್ತಿಯಾಗುವ ಯತ್ನವನ್ನು ಆ ಒಕ್ಕೂಟದವರು ಮಾಡುತ್ತಿದ್ದಾರೆ. ಕಳೆದ ವಿಧಾನಸಭೆಯಲ್ಲಿ ಒಬ್ಬನೇ ಒಬ್ಬ ಜನಪರ ಚಳುವಳಿಗಳ ಪ್ರತಿನಿಧಿ ಇರಲಿಲ್ಲ. ಈ ಬಾರಿ ಕೆಲವರಾದರೂ ಅಲ್ಲಿರಲಿ ಎಂಬ ಆಶೆ ಅವರದು. ಜೊತೆಗೆ ಚುನಾವಣೆಯ ನಂತರ ಈ ರಾಜ್ಯದಲ್ಲಿ ಎಲ್ಲ ಜನಪರ ಚಳುವಳಿಗಳು ಒಂದಾಗಿ ಕಾರ್ಯರಂಗಕ್ಕಿಳಿಯುವ ಉದ್ದೇಶವಿದೆ. ಮುಂದಿನ ದಿನಗಳಲ್ಲಿ ಒಂದು ಜನಪರ ರಾಜಕೀಯ ಶಕ್ತಿಯಾಗಿ ಹೊರಹೊಮ್ಮಲು ಅದರಿಂದ ಸಾಧ್ಯವಾಗುತ್ತದೆ. ಅದು ಈ ರಾಜ್ಯದ ಪ್ರಜೆಗಳಿಗೆ ಆಶಾಕಿರಣವಾಗುತ್ತದೆ.

ಡಾ|| ಸಿದ್ದನಗೌಡ ಪಾಟೀಲ
ಕಾರ್ಯದರ್ಶಿ, ಭಾರತ ಕಮ್ಯುನಿಸ್ಟ್ ಪಕ್ಷದ ಕರ್ನಾಟಕ ರಾಜ್ಯ ಮಂಡಲಿ,
ಘಾಟೆಭವನ, ಗಾಯಿತ್ರಿದೇವಿ ಪಾರ್ಕ್ ಬಡಾವಣೆ, ವೈಯಾಲಿಕಾವಲ್, ಬೆಂಗಳೂರು-೩

# ಪ್ರಸಕ್ತ ಚುನಾವಣೆಗಳತ್ತ

**ಕ**ಳೆದ ವರ್ಷ ಮಧ್ಯಪ್ರದೇಶ, ರಾಜಸ್ಥಾನ ಮತ್ತು ಛತ್ತೀಸ್‌ಗಡ ರಾಜ್ಯಗಳ ಶಾಸನಸಭೆಗಳಿಗೆ ನಡೆದ ಚುನಾವಣೆಗಳಲ್ಲಿ ಸಂಘಪರಿವಾರವು ಗೆಲುವು ಸಾಧಿಸಿದ ಬಳಿಕ ತಮಗೆ ನಂತರದ ಚುನಾವಣೆಗಳಲ್ಲಿ ಜಯ ಸಾಧಿಸಲು ತಮ್ಮ ಆಡಳಿತೆಯ ಸಾಧನಗಳೇ ಸಾಕು ಎಂದು ಮನವರಿಕೆ ಮಾಡಿಕೊಂಡು ಅದನ್ನೇ ಅವ್ಯಾಹತವಾಗಿ ರಾಷ್ಟ್ರದ ಉದ್ದಗಲಕ್ಕೂ ಪ್ರಚಾರಗೈದಿದ್ದಾರೆ. ವೆಂಕಯ್ಯ ನಾಯ್ಡು ಅವರು ಈ ಕುರಿತು ತನ್ನ ತೆರದ ಬಾಯಿಯನ್ನು ಇತ್ತೀಚಿಗಿನವರೆಗೂ ಮುಚ್ಚಿರಲೇ ಇಲ್ಲ.

ಆದರೆ ಕಳೆದ ಫೆಬ್ರವರಿ ೨೮ರಂದು ಅದ್ವಾಣಿಯವರು ಪತ್ರಿಕಾಕರ್ತರ ಸಭೆಯೊಂದರಲ್ಲಿ, ಎನ್.ಡಿ.ಎ. ಸರಕಾರದ ನಿಖರವಾದ ಸಾಧನೆಗಳೇನೆಂದು ಕೇಳಿದ ಪ್ರಶ್ನೆಗೆ ಉತ್ತರವಾಗಿ ಟೆಲಿಕಾಂ ಸೌಲಭ್ಯಗಳ ಹೆಚ್ಚಳ ಮತ್ತು ರಸ್ತೆ ನಿರ್ಮಾಣ ಕಾರ್ಯ ಎಂದಿಷ್ಟೇ ಹೇಳಿದರು. ಆದುದರಿಂದ ಇತರ ರಂಗಗಳಲ್ಲಿ ಪ್ರಶಂಸಿಸಬೇಕಾದ ಯಾವ ಕಾರ್ಯಗಳನ್ನೂ ಎನ್.ಡಿ.ಎ. ಸರಕಾರವು ನಡೆಸಿಲ್ಲ ಎಂಬುದನ್ನು ಅವರೇ ಒಪ್ಪಿಕೊಂಡಂತಾಯಿತು. ತಮ್ಮ ೫ ವರ್ಷಗಳ ಆಡಳಿತೆಯ ಅವಧಿಯಲ್ಲಿ ಉಂಟಾದ ಹೊಳಪು, ಬೆಳಕು, ಪ್ರಕಾಶ ಹಾಗೆಯೇ ಹರ್ಷದ ಸ್ಪರ್ಶಗಳಿಂದಲೇ ತಾವು ಮುಂಬರುವ ಲೋಕಸಭಾ ಚುನಾವಣೆಯಲ್ಲಿ ಜಯಭೇರಿಯನ್ನು ಮೊಳಗಿಸುತ್ತೇವೆ ಎನ್ನುತ್ತಿದ್ದ ಈ ಮಂದಿ ಸರಕ್ಕನೆ ತಮ್ಮ ಧ್ವನಿ ಬದಲಾಯಿಸಿದ್ದು ಏಕೆ? ೨.೩.೨೦೦೪ರಲ್ಲಿ ಅದ್ವಾಣಿಯವರು ತಾವು ಒಂದೇ ಸಿದ್ಧಾಂತಕ್ಕೆ ಅಂಟಿ ಕೊಂಡಿದ್ದರೆ ಪ್ರಯೋಜನವಾಗದು, ಕಾಲಕ್ಕೆ ತಕ್ಕಂತೆ ಅದನ್ನು ಬದಲಾಯಿಸುವ ಆವಶ್ಯಕತೆ ಇದೆ ಎಂದೂ ಕೂಡಾ ಹೇಳಿದರಲ್ಲ? ಇವುಗಳ ಅರ್ಥವೇನು? ಶ್ರೀಸಾಮಾನ್ಯರಿಗೆ ಆಡಳಿತೆಯ ಹೊಳಪು ಪ್ರಕಾಶ ಹಾಗೆಯೇ ಹರ್ಷದ ಸ್ಪರ್ಶದ ಅನುಭವವಾಗಬೇಕಾದರೆ ಮೊಟ್ಟ ಮೊದಲಿಗೆ ಶೀಘ್ರವಾಗಿ ನಮ್ಮ ಕೈಗಾರಿಕಾ ರಂಗದಲ್ಲಿ ತೀವ್ರವಾದ ಪ್ರಗತಿಯಾಗಬೇಕು. ಹೊಸ ಹೊಸ ಉದ್ಯಮಗಳು ಸ್ಥಾಪಿಸಲ್ಪಡಬೇಕು. ಇವುಗಳಿಂದಾಗಿ ಉದ್ಯೋಗದ ಅವಕಾಶಗಳು ವಿಶಾಲವಾಗಬೇಕು. ಬದಲು ಈಗ ಕೈಗಾರಿಕಾರಂಗ ಸ್ಥಗಿತವಾಗಿದೆ. ಅನೇಕ ಕೈಗಾರಿಕಾ ಘಟಕಗಳು ಮುಚ್ಚಿಕೊಂಡಿವೆ. ಐ.ಟಿ. ವಿಭಾಗದ ಕೈಗಾರಿಕೆಗಳನ್ನು ಬಿಟ್ಟರೆ ಉಳಿದ ಉದ್ಯಮಗಳು ಯಾವುವೂ ವಿಸ್ತಾರವಾಗುತ್ತಿಲ್ಲ. ಬದಲು ಬಹಳಷ್ಟು ಮಂದಿ ಕೆಲಸ ಕಳೆದುಕೊಳ್ಳುತ್ತಿದ್ದಾರೆ. ಇಂಜಿನಿಯರಿಂಗ್ ಕಲಿತ ಸಾವಿರಾರು ಯುವಕರು ನಿರುದ್ಯೋಗಿಗಳಾಗಿ ಅಲೆಯುತ್ತಿದ್ದಾರೆ, ಇವರಲ್ಲಿ ಅನೇಕರು ತಮ್ಮ ಜೀವನಕ್ಕಾಗಿ ದುಷ್ಕರ್ಮಗಳಲ್ಲಿ ತೊಡಗಿದ್ದಾರೆ.

ಕೃಷಿರಂಗದಲ್ಲಿ ಇದೇ ರೀತಿಯ ಸೋಲು ಕಾಣಿಸಿಕೊಳ್ಳುತ್ತಿದೆ. ಈ ಹಾಲಿ ವರ್ಷದ ಆಹಾರ ಧಾನ್ಯಗಳ ಉತ್ಪಾದನೆಯ ಮೊತ್ತ ಕಳೆದ ವರ್ಷಕ್ಕಿಂತ ೨ ಮಿಲಿಯ ಟನ್ನುಗಳು ಇಷ್ಟರಲ್ಲೇ ಕಡಿಮೆಯಾಗುವುದು ಎಂದು ನಿರೀಕ್ಷಿಸಲಾಗಿದೆ. ನಮ್ಮ ರಾಜ್ಯದ ೧೨೬ ತಾಲೂಕುಗಳಲ್ಲಿ ಮಳೆಯ ಕೊರತೆಯಿಂದ ಕೃಷಿಕರು ಬಳಲಿದ್ದಾರೆ. ಸುಮಾರು ೭೦೦ಕ್ಕಿಂತಲೂ ಹೆಚ್ಚಿನ ರೈತರು ಆತ್ಮಹತ್ಯೆ ಮಾಡಿಕೊಂಡಿರುವುದು ಇದಕ್ಕೆ ಜೀವಂತ ಸಾಕ್ಷಿಯಾಗಿದೆ. ಕಾಫಿ ಮತ್ತು ಟೀ ತೋಟಗಳು ತತ್ತರಿಸುತ್ತಿವೆ.

ಇಡೀ ರಾಷ್ಟ್ರೀಯ ಸಾಮಾಜಿಕ ಪರಿಸ್ಥಿತಿ ನಿಜವಾಗಿಯೂ ಹದಮೀರಿದ ಪರಿಸ್ಥಿತಿಗೆ ತಲಪಿದೆ. ಮಂತ್ರಿಗಳು ರಾಜಕಾರಣಿಗಳು ನೌಕರಶಾಹಿಗೆ ಸೇರಿದ ಹಿರಿಯ ವ್ಯಕ್ತಿಗಳು ನಡೆಸುವ ಭ್ರಷ್ಟಾಚಾರಗಳೇ ಇದಕ್ಕೆ ಸಾಕ್ಷಿ. ತೆಲ್ಗಿ ೩೨,೦೦೦ ಕೋಟಿ ರೂಪಾಯಿಗಳ ಅವ್ಯವಹಾರ ನಡೆಸಿದ್ದರೆ ಅನಂತಕುಮಾರ್ ಸುಮಾರು ೭,೫೦೦ ಕೋಟಿ ರೂಪಾಯಿಗಳ ವ್ಯವಹಾರಗಳಲ್ಲಿ ಪಾಲುದಾರರಾಗಿದ್ದಾರೆ. ಈ ವ್ಯವಹಾರಗಳನ್ನು ಕಾಯಿದೆಗಳಿಗೆ ಸರಿಯಾಗಿ ನಡೆಸಿಲ್ಲ. ಅಧಿಕಾರಿಗಳ ಸಲಹೆಗಳಿಗೆ ಅವರು ಮಾನ್ಯತೆ ನೀಡಿರುವುದಿಲ್ಲ. ಹಿಂದೆ ೨ ದಶಕಗಳ ಕಾಲ ದಲ್ಲಿ ಬರೇ ೫ ಕೋಟಿ ರೂಪಾಯಿ ಸಾಲವನ್ನು ಹುಡ್ಕೊ ಮನ್ನಾ ಮಾಡಿದ್ದರೆ, ಇವರ ೨ ವರ್ಷಗಳ ಮಂತ್ರಿತನದಲ್ಲಿ ೫೫೦ ಕೋಟಿ ರೂಪಾಯಿಗಳನ್ನು ಮನ್ನಾ ಮಾಡಿದ್ದಾರೆ. ಅವುಗಳಲ್ಲಿ ಸಿಂಹಪಾಲು ಬಿ.ಜೆ.ಪಿ. ಮುಖಂಡರಿಗೆ ಹೋಗಿದೆ. ಭಯೋತ್ಪಾದನೆ ಆಂತರಿಕವಾಗಿ ಹೆಚ್ಚಿದೆ. ಕೊಲೆ, ದರೋಡೆಗಳು ಪ್ರತಿನಿತ್ಯದ ವಾರ್ತೆಗಳಾಗಿವೆ. ಅಧಿಕಾರದ ದುರುಪಯೋಗ ಈ ಕೇಂದ್ರ ಸರಕಾರದಲ್ಲಿ ಮನೆ ಮಾಡಿದೆ. ಇದಕ್ಕೆ ಇತ್ತೀಚಿನ ಒಂದು ಉದಾಹರಣೆ ಸಾಕು.

ಅರುಣ್ ಜೈಟ್ಲೆ ಕೇಂದ್ರ ಸರಕಾರದ ಕಾಯಿದೆ ಖಾತೆಯ ಮಂತ್ರಿ. ಚುನಾವಣೆಯ ಕುರಿತು ಪ್ರಕಟಣೆ ಹೊರಟೊಡನೆ ಈ ಕುರಿತು ನೀತಿಸಂಪರ್ಕ ಜಾರಿಗೆ ಬರುತ್ತದೆ. ಪಿ. ಬಿ. ಸಿಂಗ್ ಎಂಬುವವರು ಪಾರ್ಲಿಮೆಂಟರಿ ವಿಭಾಗದಲ್ಲಿ ಸಾಮಾನ್ಯ ಓರ್ವ ಸಲಹೆಗಾರರಾಗಿದ್ದಾರೆ. ಅವರು ಇನ್ನೂ ಈ ಕೆಲಸಕ್ಕೆ ಹೊಸಬರು. ಇವರ ಮೇಲಧಿಕಾರಿ ಎಸ್. ಆರ್. ದಲೇರ್ ಎಂಬುವವರು ಕಾಯಿದೆಗಳನ್ನು ರೂಪಿಸುವುದರಲ್ಲಿ ಸಾಕಷ್ಟು ಅನುಭವ ಪಡೆದವರು. ವರ್ಷಕ್ಕೆ ಸರಾಸರಿ ೩೦ ಕಾಯಿದೆಗಳನ್ನು ಅನೇಕ ವರ್ಷಗಳಿಂದ ಅವರು ರೂಪಿಸುತ್ತಾ ಬಂದಿದ್ದಾರೆ. ಆದರೆ ಸಿಂಗರಿಗೆ ಒಂದೇ ಒಂದು ಅರ್ಹತೆ ಎಂದರೆ ಕೇಂದ್ರ ಸರಕಾರದ ಮಂತ್ರಿಮಂಡಲದಲ್ಲಿ ಮಂತ್ರಿಯಾಗಿರುವ ರಾಜನಾಥ್ ಸಿಂಗರ ಸಂಬಂಧಿಕತನ. ಈ ಅರ್ಹತೆಯಿಂದ ಸಿಂಗ್‌ರನ್ನು ಸರಕಾರದ ಜಂಟಿ ಕಾರ್ಯದರ್ಶಿ ಸ್ಥಾನಕ್ಕೆ ಉತ್ತೀರ್ಣಗೊಳಿಸಲು ಜೈಟ್ಲೆಯವರು ಶಿಫಾರಸ್ಸು ಮಾಡಿದ್ದಾರೆ. ಮಂತ್ರಿಮಂಡಲದಲ್ಲಿ ಅದಕ್ಕೆ ಸಮರ್ಥನೆ ದೊರೆಯುವುದು ಖಂಡಿತ. ಅವರ ಈ ಕೃತ್ಯ ಚುನಾವಣಾ ಕಾಲದ ನೀತಿ ಸಂಹಿತೆಗೆ ವ್ಯತಿರಿಕ್ತವಾಗಿದೆ. ದಲೇರ್‌ರ ಹಿರಿತನವನ್ನು ಅಲಕ್ಷಿಸಿದ್ದು ಮಾತ್ರವಲ್ಲ ಇದು ಕಾನೂನುಬಾಹಿರವೂ ಆಗಿದೆ. ಅಂತೆಯೇ ಅವರನ್ನು ದಲಿತರೆಂದು (ಬಹುಶಃ) ತಿರಸ್ಕರಿಸಿದ್ದು, ಹಿಂದುತ್ವ ವಾದಕ್ಕೆ ಅನುಗುಣವಾಗಿದೆ. ಇದುವೇ ಹಿಂದುತ್ವವಾದಿಗಳ ಮನುಸ್ಮೃತಿಯ ಆಧಾರದಲ್ಲಿ ನಡೆಸಿಕೊಂಡು ಬರುವ ಆಡಳಿತಾ ಕ್ರಮಗಳ ವೈಖರಿ!

ತಿಂಗಳಿಗೆ ಎರಡೋ ಮೂರೋ ಸಾರಿ ರೈಲುಗಳು ಉರುಳುತ್ತಿವೆ. ತಮಿಳುನಾಡಿನ ಅರಿಯಲೂರು ಎಂಬ ಸ್ಥಳದಲ್ಲಿ ರೈಲು ಅಪಘಾತದ ಹೊಣೆಯನ್ನು ಹೊತ್ತು ತನ್ನ ಮಂತ್ರಿಸ್ಥಾನಕ್ಕೆ ರಾಜಿನಾಮೆ ಇತ್ತ ಲಾಲ್‌ಬಹದೂರ್ ಶಾಸ್ತ್ರಿಯವರ ಶ್ರೇಷ್ಠತೆಯನ್ನು ಇಂದಿನ ರೈಲ್ವೆ ಮಂತ್ರಿ ನಿತೀಶ್ ಕುಮಾರರು ಇಂತಹ ಅಪಘಾತಗಳಿಗೆ ನೀಡುವ ನಿಲುವಿಗೆ ಏನಾದರೂ ಸಾಮ್ಯತೆ ಇದೆಯೇ? ಇದೆ. ಅದು ಮಾತ್ರ ಅಜಗಜಾಂತರ. ನಿತೀಶ್ ಕುಮಾರ್ ಮಂತ್ರಿತ್ವದಲ್ಲಿ ಇಷ್ಟರತನಕ ಕಡಿಮೆ ಎಂದರೆ ೧೫೦ ಅಪಘಾತಗಳಾಗಿರಬಹುದು. ಅವುಗಳಿಗೆ ಡೆಲ್ಲಿಯಿಂದಲೇ ತನ್ನ ಕಣ್ಣಿನ ಏಕೆ, ಮನಸ್ಸಿನ ದೂರದೃಷ್ಟಿಯಿಂದ ಅದು ಭಯೋತ್ಪಾದಕರಿಂದ ನಡೆಯಿತು ಎಂದು ಹೇಳುವುದು ಮಾತ್ರ ಅವರ ಜವಾಬ್ದಾರಿ. ಫರ್ನಾಂಡೀಸರ ರಕ್ಷಣ ಇಲಾಖೆಯು ಇದಕ್ಕೂ ಮೀರಿದ್ದು. ಲಂಚದ ಹಗರಣ ಇನ್ನೂ ಅಂತೆಯೇ ನಿದ್ರಿಸುತ್ತಿದೆ. ಅವರ ಕಾಲದಲ್ಲಿ ಸುಮಾರು ೨೭ ಮಿಗ್ ಮತ್ತು ಇತರ ವಿಮಾನಗಳು ಉರುಳಿದವು. ಮಿಗ್ ವಿಮಾನವನ್ನು ಬಳಸಲು ಶುರುಮಾಡಿ ಈಗ್ಯೆ ೨೭ ವರ್ಷಗಳಾದವು. ಅವುಗಳ ಸವೆದ ಭಾಗಕ್ಕೆ ಇಲ್ಲಿ ತಯಾರಿಸಿದ ಬಿಡಿಭಾಗಗಳೇ ಆಧಾರ. ರಷ್ಯನ್ ತಜ್ಞರು ಇಲ್ಲಿಗೆ ಆಗಮಿಸಿ, ಅವುಗಳ ಉರುಳುವಿಕೆಯ ಕುರಿತು ಕೂಲಂಕಷವಾಗಿ ತನಿಖೆ ನಡೆಸಿದರು. ಈ ಬಿಡಿಭಾಗಗಳಲ್ಲಿಯ ಬಲಾಢ್ಯತನದ ಕೊರತೆಯೇ ಈ ಅಪಘಾತಕ್ಕೆ ಕಾರಣವೆಂದು ಸ್ಪಷ್ಟವಾಗಿ ತಿಳಿಸಿದ್ದರೂ ಈ ಹಳತಾದ ವಿಮಾನಗಳ ಮೂಲಕ ಪೈಲಟ್‌ರಿಗೆ ತರಬೇತಿ

**೧೮ನೇ ಶತಮಾನದ ಹಿಂದೆ ಹಿಂದುಗಳಲ್ಲಿ ಪ್ರಾಣಿಹಿಂಸೆಗಳು ವಿಪರೀತವಾಗಿ ಹರಡಿಹೋದ ಕಾರಣ ಬಹಳಷ್ಟು ಮಂದಿ ಇವುಗಳಿಂದ ನೊಂದು ಬೌದ್ಧಮತವನ್ನು ಸೇರುತ್ತಿದ್ದರು. ಶಂಕರಾಚಾರ್ಯರು ಇದರಿಂದ ದಿಗಿಲುಗೊಂಡರು. ಪ್ರಾಣಿಹಿಂಸೆಯನ್ನು ನಿಲ್ಲಿಸುವುದೇ ಇದಕ್ಕೆ ಪರಿಹಾರವೆಂದುಕೊಂಡು, ಅದನ್ನು ಆಕ್ಷೇಪಿಸಿದರು. ಪರಿಣಾಮವಾಗಿ ಹಿಂದುಧರ್ಮ ಉಳಿಯಿತು. ಆದರೆ ಇಂದಿನ ಹಿಂದುತ್ವವಾದಿಗಳು ತಮ್ಮ ತಮ್ಮ ತತ್ವಗಳನ್ನು ಶಂಕರಾಚಾರ್ಯರ ಕಾಲದ ಹಿಂದಕ್ಕೆ ಒಯ್ಯಲು ಹೊರಟಿದ್ದಾರೆ ಎಂಬುದು ಕೆಲವು ಘಟನೆಗಳಿಂದ ಶ್ರುತವಾಗುತ್ತದೆ. ಸಂಘಪರಿವಾರದ ಈ ನಿಲುಮೆಗಳು ನಮ್ಮ ಜನರನ್ನು ಇನ್ನಷ್ಟು ಮೂಢನಂಬಿಕೆಗಳಿಗೆ ಒಳಪಡಿಸುತ್ತವೆ.**

ಪಿ. ಎಮ್. ಎಸ್. ಮೂರ್ತಿ

ನೀಡುವ ಕ್ರಮವನ್ನು ನಿಲ್ಲಿಸಲಿಲ್ಲ ಏಕೆ? ತರಬೇತಿಗಾಗಿರುವ ಫೈಟರ್ ವಿಮಾನಗಳ ಕೊರತೆಯಿಂದ ಹೀಗಿದ್ದರೂ ಕಳೆದ ವರ್ಷ ರಕ್ಷಣಾ ಖಾತೆಗೆ ನೀಡಲಾಗಿದ್ದ ಬಜೆಟಿನ ಸುಮಾರು ೪೦೦೦ ಕೋಟಿ ರೂಪಾಯಿಗಳನ್ನು ಖರ್ಚು ಮಾಡದೆ ಉಳಿಸಿದರಲ್ಲಾ? ತರಬೇತಿ ಪಡೆಯುತ್ತಿದ್ದ ಹಲವಾರು ಪೈಲೆಟ್‌ಗಳ ಜೀವಗಳನ್ನು ಅನ್ಯಾಯವಾಗಿ ಬಲಿಕೊಟ್ಟು ಉಳಿಸಿದ ಹಣ ಇದು.

ಸಂಘಪರಿವಾರದ ಹೊಳಪು, ಪ್ರಕಾಶ, ಕಾಂತಿ ಹಾಗೆಯೇ ಹರ್ಷದ ಸ್ಪರ್ಶವು ಎತ್ತಿತೋರಬೇಕಾದರೆ ಕೃಷಿ ಉತ್ಪನ್ನಗಳು ಹೆಚ್ಚಾಗಬೇಕಿದೆ. ಕಾಫಿ, ಟೀ, ಅಡಕೆ, ಮೆಣಸು ಇತ್ಯಾದಿ ಬೆಳೆಗಳಿಗೆ ನ್ಯಾಯಬೆಲೆ ದೊರಕುವಂತಾಗ ಬೇಕಿದೆ. ಒಟ್ಟಾರೆ ಹಳ್ಳಿಯ ಬದುಕಿನ ಕಡೆ ಸರ್ಕಾರ ತನ್ನ ಗಮನ ಹರಿಸಬೇಕಿದೆ. ನಮ್ಮದೇ ಕೈಗಾರಿಕೆಗಳ ಬೆಳವಣಿಗೆಗೆ ಸ್ವದೇಶಿ ಮತ್ತು ವಿದೇಶಿ ಮಾರುಕಟ್ಟೆಗಳು ಪೂರಕವಾಗುವ ರೀತಿಯಲ್ಲಿ ನೀತಿಗಳನ್ನು ರೂಪಿಸ ಬೇಕಿದೆ : ಹಾಗೆಯೇ ಉದ್ಯೋಗ, ನೀರು, ಶಿಕ್ಷಣ ಈ ಕ್ಷೇತ್ರಗಳ ಬಗ್ಗೆ ನಿರ್ಲಕ್ಷ್ಯ ಸಲ್ಲದು.

ಹೀಗೆ ಬಿ.ಜೆ.ಪಿ. ಸರಕಾರವು ಜನರ ಪ್ರಾಥಮಿಕ ಆವಶ್ಯಕತೆಗಳನ್ನು ಒದಗಿಸಿದ್ದರೆ ಅವರು ಹೇಳುವ ಹೊಳಪು, ಕಾಂತಿ, ಬೆಳಕು, ಪ್ರಕಾಶ, ಸಂತೃಪ್ತಿಯ ಸ್ಪರ್ಶತೆಗಳು ಜನಸಾಮಾನ್ಯರ ಮುಖಗಳಲ್ಲಿ ಕಂಡು ಬರುತ್ತಿದ್ದವು. ಅವರ ಘೋಷಣೆಗೆ ಸಕಾರಾತ್ಮಕವಾದ ಉತ್ತರ ದೊರೆಯುತ್ತಿತ್ತು. ಬದಲು ಈ ನಿಜವಾದ ವಸ್ತುನಿಷ್ಠೆಯ ಸ್ಥಿತಿಯನ್ನು ಒಂದು ಉದಾಹರಣೆಯಿಂದ ತಿಳಿದುಕೊಳ್ಳೋಣ. ಮುಂಬೈಯ ಕಸೂತಿ ಕೆಲಸದ ಕಾರ್ಖಾನೆ ಒಂದಕ್ಕೆ ಕಳೆದ ವಾರದಲ್ಲಿ ಅಂದರೆ ಮಾರ್ಚಿ ಒಂದನೇ ವಾರದಲ್ಲಿ ದಿಢೀರನೆ ಪೊಲೀಸರು ಧಾಳಿ ನಡೆಸಿದರು. ಆಗ್ಯೆ ಅವರು ಕಂಡದ್ದು ೭-೧೦ ವರ್ಷಗಳ ಬಾಲಕಿ ಬಾಲಕರಿಂದ ಕೆಲಸ ಸುಲಿಯುವ ದೃಶ್ಯ. ಹಾಗೆಯೇ ಮುಂಬೈ ಒಂದೇ ನಗರದಲ್ಲಿ ಚರ್ಮ ಕೆಲಸ, ಕಲ್ಲುಕಡಿತ, ಇಟ್ಟಿಗೆ ನಿರ್ಮಾಣ, ಕಾಫಿ, ಟೀ ಹೋಟೇಲುಗಳಲ್ಲಿ ಒಟ್ಟಾರೆ ೩೫,೦೦೦ ಬಾಲಕ ಬಾಲಕಿಯರು ದುಡಿಯುತ್ತಿದ್ದಾರೆ ಎಂಬುದು ಪೊಲೀಸರ ಅಂದಾಜು.

ಇಂದು ಪ್ರಪಂಚ ವೈಜ್ಞಾನಿಕವಾಗಿ ಬಹಳಷ್ಟು ಪ್ರಗತಿ ಸಾಧಿಸಿದ್ದರೂ ನಮ್ಮ ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರವಲ್ಲ ನಗರಗಳ ಪ್ರದೇಶಗಳಲ್ಲೂ ನಾನಾ ತರಹದ ಮೂಢನಂಬಿಕೆಗಳು ತಾಂಡವವಾಡುತ್ತವೆ. ರಾಜಕಾರಣಿಗಳಲ್ಲಿ, ಮಂತ್ರಿವರ್ಯರಲ್ಲಿ, ಅಧಿಕಾರಿ ವರ್ಗದಲ್ಲಿ ಈ ಮೂಢನಂಬಿಕೆಗಳು ಪುನಃ ಹೆಚ್ಚು ಹೆಚ್ಚಾಗುತ್ತಿವೆ. ಕರ್ನಾಟಕದಲ್ಲಿ ಬಾನಾಮತಿ, ದೇವದಾಸಿ ಹಾಗೆಯೇ ಇತರ ಮೂಢನಂಬಿಕೆಯ ಪ್ರವೃತ್ತಿಗಳು ತಲೆ ಎತ್ತಿ ನಿಂತಿದ್ದರೆ, ಉತ್ತರದಲ್ಲಿ ಸತಿ ಸಹಗಮನ ಪದ್ಧತಿಗಳನ್ನು ಬಲವಾಗಿ ಸಮರ್ಥಿಸುವ ದುಷ್ಟ ಮನೋವೃತ್ತಿಯನ್ನು ನಾವು ಕಾಣುತ್ತಿದ್ದೇವೆ. ೧೯೮೮ರಲ್ಲಿ ರಾಜಸ್ಥಾನದಲ್ಲಿ ನಡೆದ ರೂಪ್ ಕನ್ವರಳ ಸತಿಗೆ ಒತ್ತಾಸೆ ನೀಡಿದವರು ಬೈರಾನ್ ಸಿಂಗ್ ಶೇಖಾವತ್ ಸಹೋದರ; ಹಾಗೂ ಇಂದಿನ ರಾಜಸ್ಥಾನದ ಬಿ.ಜೆ.ಪಿ. ಮುಖಂಡರು ಸಾಕ್ಷಿಗಾರರನ್ನು ತಿರುಗಿಸಿ ಅವರು ಬಿಡುಗಡೆ ಮಾಡಿಕೊಂಡರು, ನಿಜ; ಆದರೆ ಈ ಕುರಿತು ರಾಜಸ್ಥಾನದ ಹೈಕೋರ್ಟಿಗೆ ಮೇಲ್ಮನವಿಯನ್ನಾದರೂ ಮಾಡಬಹುದಲ್ಲ? ಇಷ್ಟರತನಕ ಮಾಡಿಲ್ಲ, ಮಾಡವುದೂ ಇಲ್ಲ – ಕಾರಣ ಮೂಢನಂಬಿಕೆಗಳಲ್ಲಿ ಅತ್ಯಂತ ವಿಶ್ವಾಸವಿರುವ ಬಿ.ಜೆ.ಪಿ. ಸರಕಾರ ಅಲ್ಲಿದೆ. ಈ ಮೂಢನಂಬಿಕೆಗೆ ಇತ್ತಲಾಗಿ ಮಹಾರಾಷ್ಟ್ರದ ಔರಂಗಾಬಾದಿನ ಸಮೀಪ ನಡೆದ ಘಟನೆಯನ್ನು ಪರಿಚಯಿಸಿಕೊಳ್ಳೋಣ. ಗುರಾನ ಮಹೊತೊ ಮತ್ತು ಬಸಂತಿ ದೇವಿ ಇವರ ಪುತ್ರ ವಿಕಾಸ. ಆತನಿಗೆ ಬರೇ ೪ ವರ್ಷ ಪ್ರಾಯ. ಈ ಬಾಲಕ ಒಂದು ದಿನ ಕಾಣೆಯಾದ. ಹೆತ್ತವರು ಪೊಲೀಸಿಗೆ ಈ ಕುರಿತು ತಿಳಿಸುವ ಬದಲು ಆ ಊರಿನಲ್ಲಿದ್ದ ಓರ್ವ ವ್ಯಕ್ತಿ (ಅವನ ನಿಜವಾದ ಹೆಸರು ರಾಮ ಆಶೀಶ್ ಚವಾಣ) ಎಂಬ ಹೆಸರಿನಿಂದ ಕರೆಯಲಾಗುತ್ತಿದ್ದ ಮಾಂತ್ರಿಕನ ಬಳಿಗೆ ತೆರಳಿದರು. ಆತ ಕೂಡಲೇ ಮಂತ್ರಮಾಡುವ ನಟನೆಯನ್ನು ವ್ಯಕ್ತಪಡಿಸಿ ತಾನು ಆ ಬಾಲಕನನ್ನು ಜೀವಂತವಾಗಲಿ ಅಥವಾ ಆತನ ಶವವನ್ನಾಗಲಿ ನಿಮಗೆ ೧೦ ದಿವಸಗಳೊಳಗೆ ತೋರಿಸಿ ಕೊಡುವೆನು ಎಂಬ ಆಶ್ವಾಸನೆ ನೀಡಿದ. ಆದರೆ ಆ ಊರಿನ ಕೆಲವು ಮಂದಿಗೆ ಈ ಮಾಂತ್ರಿಕನನ್ನು ನಂಬಲು ಸಾಧ್ಯವಾಗಲಿಲ್ಲ. ಅವರು ಪೊಲೀಸರಿಗೆ ದೂರು ಸಲ್ಲಿಸಿದರು. ಪೊಲೀಸರು ಪ್ರಥಮವಾಗಿ ಈ ಮಾಂತ್ರಿಕನನ್ನು ತಪಾಸಣೆಗೆ ಗುರಿಪಡಿಸಿದರು, ಕೂಡಲೇ ಆತ ತಾನೇ ಆ ಬಾಲಕನನ್ನು ಅಪಹರಿಸಿದ್ದು, ಹಾಗೆಯೇ ದೇವಿಗೆ ಬಲಿ ಕೊಟ್ಟದ್ದು ಎಂದು ಒಪ್ಪಿಕೊಂಡ. ಬಾಲಕನ ಕೊಳೆತ ಶವವನ್ನು ಇಟ್ಟಿಗೆಗಳಿಂದ ಕಟ್ಟಿದ ಗೂಡಿನ ಮಧ್ಯದಿಂದ ಎಳೆದು ಪೊಲೀಸರಿಗೆ ತೋರಿಸಿದ.

ಬಿ.ಜೆ.ಪಿ. ಪಕ್ಷದ ಶೋಭೆ, ಕಾಂತಿ, ಪ್ರಕಾಶ, ಹರ್ಷದ ಸ್ಪರ್ಶ ಇವೇ ಮೊದಲಾದ ಘೋಷಣೆಗಳು ಸಮರ್ಥನೀಯವಲ್ಲವೆಂದು ಸ್ವತಃ ಸಂಘಪರಿವಾರಕ್ಕೆ ಗೊತ್ತು. ಫಲಿತಾಂಶವಾಗಿ ತಾವು ಒಂದೇ ತತ್ವವನ್ನು ಅಂಟಿಕೊಂಡಿದ್ದರೆ ಅದರಿಂದ ತಮಗೆ ಅಸಲು ದೊರಕದು, ಸಮಯಕ್ಕೆ ತಕ್ಕಂತೆ ಅದನ್ನು ಬದಲಾಯಿಸು ವುದು ಅಗತ್ಯವೆಂದು ಮನಗಂಡರು. ಆ ಹಿನ್ನೆಲೆಯಲ್ಲಿ ಬಂದಿದ್ದು ಅದ್ವಾಣಿಯವರ ರಥಯಾತ್ರೆಯ ತೀರ್ಮಾನ. ಮಾರ್ಚ್ ೪ರಂದು ಪ್ರಧಾನಿ ನಿವಾಸದಲ್ಲಿ ಆರ್.ಎಸ್.ಎಸ್.ನ ಪ್ರಮುಖರು ಹಾಗೂ ಬಿ.ಜೆ.ಪಿ.ಯ ನಾಯಕರು ೯೦ ನಿಮಿಷಗಳ ಸಭೆ ನಡೆಸಿದರು. ಈ ಚರ್ಚೆಯಲ್ಲಿ ತಮ್ಮ ಶೋಭೆ, ಕಾಂತಿ, ಹರ್ಷದ ಸ್ಪರ್ಶಗಳಲ್ಲಿ ತಿರುಳಿಲ್ಲ, ಹಾಗೆಯೇ ಹುರುಳಿಲ್ಲ ಎಂಬ ಅಭಿಪ್ರಾಯಕ್ಕೆ ಅವರು ಬಂದಿರಬೇಕು. ಆದ್ದರಿಂದಲೇ ತಮ್ಮ ಹಿಂದುತ್ವದ ಎಲ್ಲಾ ಪ್ರಶ್ನೆಗಳನ್ನು (ರಾಮ ಜನ್ಮಭೂಮಿ, ಸಂವಿಧಾನ ೩೭೦ನೇ ವಿಧಿಯನ್ನು ರದ್ದುಗೊಳಿಸುವುದು, ಏಕಪ್ರಕಾರದ ನಾಗರಿಕ ಸಂಹಿತೆ, ಗೋಹತ್ಯೆ ನಿಷೇಧ) ಈ ಚುನಾವಣೆಯಲ್ಲಿ ಉಪಯೋಗಿಸುವುದು ಅಗತ್ಯವೆಂದು ಅವರು ನಿರ್ಧರಿಸಿದರು. ಆದರೆ ಇದನ್ನು ಎನ್.ಡಿ.ಎ. ಕಾರ್ಯಸೂಚಿಯಲ್ಲಿ ಸೇರಿಸಿದರೆ ತಮಗೆ ಅಗತ್ಯ ಕಂಡಾಗ ನುಣುಚಿಕೊಳ್ಳುವ ಮೋಸ ಕೃತ್ಯಗಳಿಗೆ ಅಡ್ಡಿಯಾಗಬಹುದು ಎಂಬ ಅಧೈರ್ಯದಿಂದಾಗಿ, ಎರಡು ಪ್ರತ್ಯೇಕ ಕಾರ್ಯಕ್ರಮಗಳನ್ನು ರೂಪಿಸಲು ಅವರು ನಿರ್ಧರಿಸಿದರು. ಹಿಂದುತ್ವದ ಎಲ್ಲಾ ಪ್ರಶ್ನೆಗಳನ್ನು ಒಳಗೊಂಡ ಒಳಪ್ರಣಾಳಿಕೆಯನ್ನು ರೂಪಿಸಲು ತೀರ್ಮಾನವಾಯಿತು. ಇಂತಹ ಅತಿರೇಕದ ಹಿಂದುತ್ವದ ಪ್ರಶ್ನೆಗಳಿಂದ ಗುಜರಾತಿನಲ್ಲಿ ಅವರಿಗೆ ಗೆಲುವು ಒದಗಿಬಂದದ್ದು ಅವರಿಗೆ ಜ್ಞಾಪಕಕ್ಕೆ ಬಂದಿರಬೇಕು!

ಮತಾಂತರ' ವಿಚಾರ ಮಾತಾಡ ಬೇಡಿ ಸಾರ್... ಚುನಾವಣೆಯಲ್ಲಿ ಮತಗಳ ಅಂತರ' ಗೊತ್ತಾದ್ರೆ ಮರ್ಯಾದೆ ಹೋಗುತ್ತೆ....!?

ಆದರೆ ಈ ಹೊಸ ತಮ್ಮ ಸ್ವಂತದ ಪ್ರಣಾಳಿಕೆಯನ್ನು ಜನರ ಮುಂದೆ ಪ್ರಚಾರ ಮಾಡುವ ಬಗೆ ಹೇಗೆ? ೧೯೯೨ರಲ್ಲಿ ಅದ್ವಾಣಿಯವರು ಮಾಡಿದ ರಥಯಾತ್ರೆಯು ಅವರಿಗೆ ಒಂದು ದಾರಿ ತೋರಿಸಿತು.

ಅದ್ವಾನಿ ಯಾತ್ರೆಗೆ ರಥ ಯಾವುದು? ೧೯೪೭ರಲ್ಲಿ ನೌಕಾಲಿಯಲ್ಲಿ ಕೋಮುಗಲಭೆ ನಡೆದಾಗ ಅಲ್ಲಿ ಕೋಮುಸಾಮರಸ್ಯವನ್ನು ಉಂಟುಮಾಡಲು ಮಹಾತ್ಮಾ ಗಾಂಧಿಯವರು ದೊಣ್ಣೆ ಊರಿ ಕಾಲ್ನಡಿಗೆಯಿಂದ ನಡೆಸಿದ ಯಾತ್ರೆಯಂತಲ್ಲ. ಅವರು ತಮ್ಮ ಮೂಲ ಹಿಂದುತ್ವದ ಪ್ರಚಾರಕ್ಕೆ ಹಿಂದಿನ ರಥಯಾತ್ರೆಗೆ ಉಪಯೋಗಿಸಿದ ಹವಾನಿಯಂತ್ರಣ ಹಾಗೂ ಸುಖಾಸೀನಗಳುಳ್ಳ ಬಸ್ಸನ್ನು ಆರಿಸಿದರು. ಈ ಕಾರ್ಯವನ್ನು ನಿರ್ವಹಿಸುವ ಭಾರ ಛತೀಸ್‌ಗಡ ಬಿ.ಜೆ.ಪಿ. ಮುಖಂಡ, ಹಾಗೆಯೇ ಕೇಂದ್ರ ಸರಕಾರದಲ್ಲಿ ಮಂತ್ರಿಯಾಗಿದ್ದಾಗ ಹಣವೆಂದರೆ ದೇವರು ಎಂದು ಹೇಳಿ ಲಂಚವನ್ನು ಸ್ವೀಕರಿಸಿ ಮಂತ್ರಿ ಸ್ಥಾನಕ್ಕೆ ರಾಜಿನಾಮೆ ಕೊಡಬೇಕಾಗಿ ಬಂದ ಪ್ರತಾಪ ಸಿಂಗ್ ಜುಡೇವ್‌ಗೆ. ಆತನ ವಾಹನವನ್ನು ೧೦೧ ತೆಂಗಿನಕಾಯಿಗಳ ಮೇಲೆ ಹಾಯಿಸಿ ಅವುಗಳನ್ನು ನುಚ್ಚುನೂರು ಮಾಡಲಾಯಿತು. ನಂತರ ಒಂದು ಆಡನ್ನು ಬಸ್ಸಿನ ಮುಂದೆ ತಂದು ಅದ್ವಾಣಿಯವರು ಯಾತ್ರೆಯಲ್ಲಿ ಸುರಕ್ಷಿತರಾಗಿರುವಂತೆ, ಅವರ ಉದ್ದೇಶವು ಸಾಧಿಸುವಂತೆ ಪ್ರಾರ್ಥನೆಗೈದು ಅದನ್ನು ವಧಿಸಲಾಯಿತು. ೫.೩.೨೦೦೪ರ ಇಂಡಿಯನ್ ಎಕ್ಸ್‌ಪ್ರೆಸ್ ವರದಿಯಂತೆ ಇಂತಹ ಮೂಢನಂಬಿಕೆ ಯಾವ ಮಟ್ಟದಲ್ಲಿ ಇನ್ನೂ ಇದೆ ಎಂಬುದನ್ನು ಈ ಘಟನೆ ತೋರಿಸುತ್ತದೆ. ಅದ್ವಾಣಿ, ವಾಜಪೇಯಿಯವರ ಗಮನಕ್ಕೆ ಇದು ಬಂದಿರಲೇಬೇಕು. ಅವರಿಗೆ ಅದರಲ್ಲಿ ವಿಶ್ವಾಸವಿಲ್ಲದಿದ್ದರೆ ಈ ಹಿಂಸಾಚಾರವನ್ನು ಅವರು ಖಂಡಿಸಬೇಕಾಗಿತ್ತು. ಆಡಿನ ರಕ್ತದಿಂದ ಕಲುಷಿತವಾದ ಬಸ್ಸನ್ನು ಅದ್ವಾಣಿಯವರು ನಿರಾಕರಿಸಬೇಕಾಗಿತ್ತು. ಹಾಗೆ ಅವರಾರೂ ಅದನ್ನು ಖಂಡಿಸಲಿಲ್ಲ; ಕಾರಣ ಅವರೆಲ್ಲರೂ ಈ ಕ್ರಮದಲ್ಲಿ ವಿಶ್ವಾಸವುಳ್ಳವರು.

೪ನೇ ಶತಮಾನದ ಹಿಂದೆ ಹಿಂದುಗಳಲ್ಲಿ ಈ

ಪ್ರಾಣಿಹಿಂಸೆಗಳು ವಿಪರೀತವಾಗಿ ಹರಡಿಹೋದ ಕಾರಣ ಬಹಳಷ್ಟು ಮಂದಿ ಇವುಗಳಿಂದ ನೊಂದು ಬೌದ್ಧಮತವನ್ನು ಸೇರುತ್ತಿದ್ದರು. ಶಂಕರಾಚಾರ್ಯರು ಇದರಿಂದ ದಿಗಿಲುಗೊಂಡರು. ಪ್ರಾಣಿಹಿಂಸೆಯನ್ನು ನಿಲ್ಲಿಸುವುದೇ ಇದಕ್ಕೆ ಪರಿಹಾರವೆಂದುಕೊಂಡು, ಅದನ್ನು ಆಕ್ಷೇಪಿಸಿದರು. ಪರಿಣಾಮವಾಗಿ ಹಿಂದುಧರ್ಮ ಉಳಿಯಿತು. ಆದರೆ ಇಂದಿನ ಹಿಂದುತ್ವವಾದಿಗಳು ತಮ್ಮ ತಮ್ಮ ತತ್ವಗಳನ್ನು ಶಂಕರಾಚಾರ್ಯರ ಕಾಲದ ಹಿಂದಕ್ಕೆ ಒಯ್ಯಲು ಹೊರಟಿದ್ದಾರೆ ಎಂಬುದು ಈ ಘಟನೆಯಿಂದ ಶ್ರುತವಾಗುತ್ತದೆ. ಸಂಘಪರಿವಾರದ ಈ ನಿಲುಮೆಗಳು ನಮ್ಮ ಜನರನ್ನು ಇನ್ನಷ್ಟು ಮೂಢನಂಬಿಕೆಗಳಿಗೆ ಒಳಪಡಿಸುತ್ತವೆ.

ಅವರ ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಕಾಣಬರುವ ಕೆಲವು ಸತ್ಯಾಂಶಗಳಿವು :

(ಅ) ಸತ್ಯ ಅಸತ್ಯ, ಪಾಪ ಪುಣ್ಯ, ಸನ್ಮಾರ್ಗ ದುರ್ಮಾರ್ಗಗಳಲ್ಲಿ ಹಾಗೆಯೇ ಕಾನೂನುಬಾಹಿರ, ಹಾಗೂ ಕಾನೂನುಬದ್ಧತೆಗಳಲ್ಲಿ ಏನೊಂದು ವ್ಯತ್ಯಾಸವನ್ನು ಎಣಿಸದೆ, ಅವುಗಳನ್ನು ನಿರ್ಲಕ್ಷಿಸಿ ಮತ್ತೆ ಪುನಃ ಅಧಿಕಾರದ ಗದ್ದುಗೆಯನ್ನು ಏರುವುದು.

(ಆ) ಕೋಮು ಸೌಹಾರ್ದತೆಯ ಬದಲು ಅದನ್ನು ಉದ್ದಕ್ಕೆ ಸೀಳುವುದು.

(ಇ) ತಮ್ಮ ಹಿಂದುತ್ವವಾದವನ್ನು ಕೃತಿಗಿಳಿಸಲು ಪ್ರಾಚೀನಕಾಲದ ಪರಿಸ್ಥಿತಿಗೆ ಇಂದಿನ ಸಮಾಜ ಕ್ರಮವನ್ನು ಹಿಂದೊತ್ತುವುದು.

(ಈ) ಅಂದಿನ ಕಾಲದ ವರ್ಣಾಶ್ರಮ ಧರ್ಮವೆಂಬ ಶ್ರೇಣೀಕೃತ ಸಮಾಜಕ್ರಮಗಳನ್ನು ಸಂಪೂರ್ಣವಾಗಿ ಸಮಾಜದ ಮೇಲೆ ಹೇರುವುದು.

(ಉ) ಇದಕ್ಕೆ ಸಹಾಯವಾಗುವಂತೆ ರಾಷ್ಟ್ರದ ಸೊತ್ತುಗಳನ್ನು ದೇಶೀಯ ಹಾಗೂ ವಿದೇಶೀಯ ಬಂಡವಾಳಗಾರರಿಗೆ ವಿಕ್ರಯಿಸುವುದು.

ಇಂತಹ ಉದ್ದೇಶ ಸಾಧನೆಗಾಗಿಯೇ ಅಡ್ವಾಣಿಯವರ ಈ ರಥಯಾತ್ರೆಯನ್ನು ಇಂದು ಸಂಘಟಿಸಲಾಗಿದೆ. ಈ ಯಾತ್ರೆಯಿಂದ ಕೋಮುಗಲಭೆಗಳ ದಳ್ಳುರಿ ಮೊದಲಿನಂತೆ ಎದ್ದೇಳುವುದು ಎಂಬುದನ್ನು ಪುಷ್ಟೀಕರಿಸಲು ಸಾಧ್ಯವಿಲ್ಲ. ಆದರೆ ಈಗಾಗಲೇ ಸೀಳಿಗೆ ಗುರಿಯಾದ ನಮ್ಮ ಬಹುರೂಪದಿಂದ ಕೂಡಿರುವ ಸಮಾಜದಲ್ಲಿ ಇನ್ನಷ್ಟು ಒಡಕನ್ನು ಅದು ಉಂಟುಮಾಡುವುದು ಖಂಡಿತ. ಇದರಿಂದ ಲಾಭಪಡೆದು ಗೆಲವು ಸಾಧಿಸಿ ಅಧಿಕಾರದ ಗದ್ದುಗೆಗೇರಿದ ಮೇಲೆ ತಮ್ಮ ಕಾರ್ಯಸೂಚಿಯನ್ನು ಸಂಪೂರ್ಣವಾಗಿ ಕಾರ್ಯಗತ ಗೊಳಿಸಲು ಅವರಿಗೆ ಸಾಧ್ಯವಾದೀತು ಎಂಬ ವಿಶ್ವಾಸ ಅವರಲ್ಲಿದೆ. ಹೀಗಾದರೆ ನಮ್ಮ ರಾಷ್ಟ್ರದ ಜಾತ್ಯತೀತ ಪ್ರಜಾಪ್ರಭುತ್ವ ಸಮಾಜವಾದಿ ಗಣರಾಜ್ಯದ ರೂಪರೇಷೆಗಳು ನಾಶವಾಗುವುದು ಖಂಡಿತ.

ಈ ಪರಿಸ್ಥಿತಿಯಲ್ಲಿ ನಮ್ಮ ರಾಷ್ಟ್ರವನ್ನು ಇಂದಲ್ಲ ನಾಳೆಯಾದರೂ ರಕ್ಷಿಸಬೇಕೆಂಬ ಮನೋಭಾವದಿಂದ ಕೂಡಿದ ಪಕ್ಷ, ಪಂಗಡ, ಹಾಗೆಯೇ ಲಕ್ಷಾಲಕ್ಷಾಂತರ ವ್ಯಕ್ತಿಗಳು ಈ ಕುರಿತು ಕಾರ್ಯತತ್ಪರರಾಗುವುದು ಇಂದಿನ ಅತ್ಯಂತ ಜರೂರಿನ ಕರ್ತವ್ಯವಾಗಿದೆ.

ಪಿ. ಎಮ್. ಎಸ್. ಮೂರ್ತಿ
೪-೨-೨೩೭/೨೪, ಭಾರತಿನಗರ, ಬಿಜೈ, ಮಂಗಳೂರು - ೫೭೫ ೦೦೪



## ಗೂಡಿನಿಂದ ಬಯಲಿಗೆ

ಚಾಕಲೇಟು ಪಾಟಿ ಪುಸ್ತಕ
ಆಟ ಊಟ ಓಡಾಟ
ಜರಿಲಂಗ ಸರ ಶೃಂಗಾರ
ನನ್ನದೇ ಕನಸಿನ ಭಂಡಾರ
ಬಾಲ್ಯದ ನೆನಪು ಸಿಹಿಯೋ ಸಿಹಿ

ಬಂದಿತ್ತು ಯೌವನ ಮೈಯ ತುಂಬ
ಪ್ರೀತಿಯಾಟದ ಗುಲ್ಲು ಎದೆಯ ತುಂಬ
ಕಾಣದಿನಿಯನ ರೂಪ
ಕಾಡಿತ್ತು ಒಳಗೆಲ್ಲ

ಮೈಯ ಹಸಿವಿನ ಕಾವು
ರಾತ್ರಿ ಬೆಳಗೆಲ್ಲ
ಇಟ್ಟ ಹೆಜ್ಜೆಗಳಲ್ಲಿ
ದಿಟ್ಟ ಧೈರ್ಯದ ಭಾವ
ಯೌವನದ ನೆನಪು ಸಿಹಿಯೋ ಸಿಹಿ

ಅಪ್ಪ ಅಮ್ಮನ ಬೇಟೆ
ಗಂಡು ಬಂದ
ನನ್ನ ಕಣ್ಣಿನ ನೋಟ
ಸೆಳೆದುಕೊಂಡ
ಮೊದಲ ರಾತ್ರಿಯ ನೆನಪು ಸಿಹಿಯೋ ಸಿಹಿ

ಇದ್ದಕ್ಕಿದ್ದಂತೆ....
ನನ್ನ ಇನಿಯನಿಗೆ
ಕೋರೆ ಹಲ್ಲು ಮೂಡಿತ್ತು

ಉಗುರು ಚೂಪಾಗಿತ್ತು
ಕಣ್ಣಲ್ಲಿ ಕೆಂಪು ಹಿಂಸೆ
ಓಹ್..... ಆ ನೆನಪೆಲ್ಲ ಕಹಿಯೋ ಕಹಿ

ನನ್ನ ದೇಹದ ಕಣ ಕಣದಲ್ಲಿ
ಕಹಿ ಬೆರೆತು ಕಲ್ಲಾದೆ
ಮನೆಯೊಳಗಿನ ನನ್ನ ನೋಟ
ಹೊರ ಹಜಾರಕ್ಕೆ ಚಾಚಿ
ಮತ್ತೆ ಬಯಲಿಗಿಳಿದು
ಆಕಾಶ ಭೂಮಿಗಳ ವ್ಯಾಪಿಸಿ
ಧರಧರನೆ ಕಂಪಿಸಿತು.

ನನ್ನ ಗಂಡನ ಹೊಡೆತಕ್ಕೆ
ಎಷ್ಟೊಂದು ಶಕ್ತಿಯಿತ್ತು !
ಕಣ್ಣು ತೆರೆದೆ ನಾನು
ಜಗದ ಹಿಂಸೆಗೆ
ನನ್ನ ಕಪಾಳಕ್ಕೆ ಬಿದ್ದ ಏಟು
ನನ್ನ ಬಾಯಿಂದ ಹೊರಟ ಉದ್ಗಾರ
ಮತ್ತೆ ಅಲೆ ಅಲೆಯಾಗಿ
ನನ್ನಲ್ಲಿ ಪ್ರತಿಧ್ವನಿಸಿ
ನರಳುವ ಅಮಾಯಕರ
ನೋವಿನೊಂದು ಮೇಳವಾಗಿ
ನನ್ನ ಕಣ್ಣೀರು ಬತ್ತಿಸಿತು

ಇಂದು....
ನನ್ನೆದೆಯ ತುಂಬಾ ಸಿಟ್ಟು
ಕೆಲಸಕ್ಕಿಳಿವ ಕೆಚ್ಚು
ಅಳಬೇಡಿ, ಬನ್ನಿ ನನ್ನೊಂದಿಗೆ
ಸಾಗೋಣ ಬೆಳಕಿನೆಡೆಗೆ

ಎಸ್. ಮಾಲತಿ
ಮಹಾಲಸ ನಿಲಯ
ಜೋಗ್ ರಸ್ತೆ, ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

ಯಾವುದೋ ಅವ್ಯಕ್ತ ಭಾವ ಆ ರೂಮಿನೊಳಗೆ ಹೊಕ್ಕಿತ್ತು. ಬೇಸಿಗೆ ಕಾಲದ ಸರಿರಾತ್ರಿಯಲಿ, ಸರಸ್ವತಿಪುರಂನ ಆ ಕೋಣೆಯೊಳಗೆ ಪಸರಿಸಿದ ಗಾಳಿ, ಜೀರುಂಡೆಯ ಶಬ್ದ ಅಂದು ಎಂದಿನಂತೆ ಇರಲಿಲ್ಲ. ಟೇಬಲ್ಲಿನ ಮೇಲೆ ಡ್ರಾಯಿಂಗ್ ಷೀಟ್, ಪೆನ್ಸಿಲ್, ಕಾಂಪಾಸ್, ಸ್ಕೇಲ್, ಮೂಲೆಮಟ್ಟ.... ಹರಡಿ ಕುಳಿತಿದ್ದ ಕಿರಣ್‌ನ ಕಣ್ಣುಗಳಲ್ಲಿ ಇದ್ದಕ್ಕಿದ್ದಂತೆ ನೀರು ಜಿನುಗಲು ಪ್ರಾರಂಭಿಸಿತು. ಎದುರಿಗಿದ್ದ ಡೈರಿಯ ಹಾಳೆಗಳ ಮೇಲೆ ಬಿದ್ದ ಹನಿಗಳು ಬರೆದ ಶಾಯಿಯನ್ನು ಸುತ್ತಲೂ ಹರಡಿಸಿದ್ದವು.

ಡ್ರಾಯಿಂಗ್‌ಗೆ ಕುಳಿತ ಕಿರಣ್‌ಗೆ ಇದು ಹೊಸ ಅನುಭವ. ರೂಮಿನ ಮೂಲೆಯಲ್ಲಿದ್ದ ಜೇಡರ ಬಲೆಯನ್ನೇ ದಿಟ್ಟಿಸುತ್ತಾ ಕುಳಿತಿದ್ದ. ಆ ಜೇಡ ತನ್ನ ಮೈಮೇಲೆಲ್ಲಾ ಹರಿದಾಡಿದಂತೆ, ತನ್ನೊಳಗೆಲ್ಲೋ ಹುದುಗಿರುವ ಬಲೆಗೆ ತಡಕಾಡಿದಂತೆ ಭಾಸವಾಗುತ್ತಿತ್ತು. ಬೆಳಿಗ್ಗೆ ಪತ್ರಿಕೆಯಲ್ಲಿ ಓದಿದ ರೈತನೊಬ್ಬನ ಆತ್ಮಹತ್ಯೆಯ ಸುದ್ದಿ ಮತ್ತೆ ಮತ್ತೆ ಕಾಡಹತ್ತಿತ್ತು. ಬೆಳಿಗ್ಗೆಯಿಂದಲೂ ಖಿನ್ನನಾಗಿ, ಅನ್ಯಮನಸ್ಕನಾಗಿರುವುದಕ್ಕೂ, ಆ ಸುದ್ದಿಗೂ ಏನು ಸಂಬಂಧ ಎಂದು ತಿಳಿಯದಾದ.

ತಾನು ಓದುತಿದ್ದ ಜೆ.ಸಿ. ಇಂಜಿನಿಯರಿಂಗ್ ಕಾಲೇಜಿನ ಕ್ಯಾಂಪಸ್ ತುಂಬಾ ಹೆಸರುವಾಸಿಯಾಗಿದ್ದ, ಪ್ರಚಂಡ ಬುದ್ಧಿವಂತಿಕೆ, ಅಗಾಧ ಜ್ಞಾಪಕಶಕ್ತಿ, ಮೋಡಿ ಮಾಡುವ ವಾಕ್ಚಾತುರ್ಯದ ಕಿರಣ್ ರೈತರ ಆತ್ಮಹತ್ಯೆಯ ಕುರಿತು ಓದುತ್ತಿರುವುದು ಇದೇ ಮೊದಲೇನಲ್ಲ. ಪ್ರತಿದಿನ ವರದಿಯಾಗುತ್ತಿದ್ದ ಒಂದಲ್ಲಾ ಒಂದು ರೈತರ ಆತ್ಮಹತ್ಯೆ ವರದಿಯನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ. ಪ್ರತಿ ಘಟನೆಯಲ್ಲೂ ಊರು, ರೈತ, ಬೆಳೆಯುವ ಬೆಳೆ, ಮಾಡಿದ್ದ ಸಾಲ, ಒಡೆತನದ ಭೂಮಿ, ಸಾಯುವ ಕಾರಣ... ಎಲ್ಲವನ್ನೂ ಸೂಕ್ಷ್ಮಾತಿಸೂಕ್ಷ್ಮವಾಗಿ ತಿಳಿದುಕೊಳ್ಳುತ್ತಿದ್ದ.

ಆದರೆ ಯಾವತ್ತೂ ಹೀಗಾಗಿರಲಿಲ್ಲ. ಮೈಮನಸ್ಸುಗಳಿಗೆ ನುಸಿ ಹೊಡೆದಂತೆ ಅನಿಸಿರಲಿಲ್ಲ. ಇಂದು ಓದಿದ ಆತ್ಮಹತ್ಯೆ ವರದಿಯಲ್ಲಿ ತನ್ನೂರಿನ, ಊರಿಗೆ ಹೋದಾಗ ಸದಾ ಮಾತನಾಡಿಸುತ್ತಿದ್ದ ಚಿನ್ನಪ್ಪ ಸತ್ತಿದ್ದ. ಇಬ್ಬರ ಜಮೀನು ಒಟ್ಟೊಟ್ಟಿಗೇ ಇದ್ದವು. ಇದನ್ನು ಓದುತ್ತಲೇ ಕಿರಣ್‌ಗೆ ಅವನ ಅಪ್ಪನ ಚಿತ್ರ ಕಣ್ಮುಂದೆ ಬೆಳೆಯುತ್ತಾ ಹೋಯಿತು. ಕಣ್ಣುಗುಡ್ಡೆಗಳನ್ನು ಕಿತ್ತಿದ್ದರೂ ಅಪ್ಪ ಮಾತ್ರ ಹೊರಗೋಗಲಾರ ಎನಿಸಿತು. ಎಲ್ಲವನ್ನೂ ಬಿಟ್ಟು ಮನೆಗೆ ತೆರಳಬೇಕೆನಿಸಿತು.

* * *

ಕಿರಣ್‌ಗೆ ಓದುವುದು ಎಳ್ಳಷ್ಟೂ ಇಷ್ಟವಿರಲಿಲ್ಲ. ಎಸ್.ಎಸ್.ಎಲ್.ಸಿ.ವರೆಗೂ ತನ್ನ ಹಳ್ಳಿಯಲ್ಲಿ ಸರ್ಕಾರಿ ಶಾಲೆಯಲ್ಲಿ ಓದುವಾಗಲೇ ತನಗೇನಿದ್ದರೂ ಒಕ್ಕಲುತನವೇ ಸರಿ ಎಂದು ನಿರ್ಧರಿಸಿದ್ದ. ಎಸ್.ಎಸ್.ಎಲ್.ಸಿ ಫೇಲ್ ಆಗಿದ್ದಿದ್ದರೆ ಎಂದೋ ಶಾಲೆ ಬಿಟ್ಟು ಉಳುಮೆ ಮಾಡುತ್ತಿದ್ದ. ಆದರೆ ವಿದ್ಯೆ ಅವನಿಗೆ ಒದಗಿ ಬಂದಿತ್ತು. ತಾನದನ್ನು ಬಿಡಬೇಕು ಎಂದಷ್ಟೂ ಅದು ಇನ್ನೂ ದೊರೆಯುತ್ತಲೇ ಇತ್ತು. ಶಾಲೆ, ಮೇಷ್ಟ್ರು, ಪುಸ್ತಕ ಇದ್ಯಾವುದೂ ಅವನಿಗೆ ಇಷ್ಟವಿರಲೇ ಇಲ್ಲ. ಅಪ್ಪ-ಅವ್ವನ ಕಡ್ಡಾಯಕ್ಕಾಗಿ ಶಾಲೆಗೆ ಹೋಗುತ್ತಿದ್ದ, ತರಗತಿಯಲ್ಲಿ ಕೇಳಿದ ಪಾಠವಷ್ಟೋ ಅಷ್ಟೆ.... ಮನೆಯಲ್ಲಿ ಪುಸ್ತಕ ಮುಟ್ಟುತ್ತಿರಲಿಲ್ಲ. ಪರೀಕ್ಷೆ ಸಮಯದಲ್ಲಿ ಅಪ್ಪ ಬೈಯುತ್ತಾನೆ ಎಂಬ ಕಾರಣಕ್ಕಾಗಿ ಪುಸ್ತಕ ತಿರುವಿಹಾಕುತ್ತಿದ್ದ. ಇವನ ಓರಗೆಯ ಎಷ್ಟೋ ಮಂದಿ ಎಂಟು, ಒಂಬತ್ತರಲ್ಲೇ ಎರಡೆರಡು ಬಾರಿ ತಿಣುಕಾಡುತ್ತಿದ್ದರು. ಕೆಲವರನ್ನು ಶಾಲೆ ಬಿಡಿಸಿ ಜಮೀನಿಗೂ ಹಾಕಿಕೊಂಡಿದ್ದರು.

# ಬೇರು

ನವೀನ್ ಜೋಸೆಫ್

ಅವರೆಲ್ಲರನ್ನೂ ನೋಡುವಾಗ ತನ್ನ ಬುದ್ಧಿವಂತಿಕೆಯೆಲ್ಲವೂ ಇವರಿಗಾದರೂ ಹೋಗಬಾರದಿತ್ತೇ ಎಂದು ಸಂಕಟಪಡುತ್ತಿದ್ದ.

ಅವನಪ್ಪನೂ ಅಷ್ಟೆ. ಎಂದಿಗೂ ಮಗನನ್ನು ಜಮೀನಿನ ಬಳಿಗೆ ಸುಳಿಯದಂತೆ ನೋಡಿಕೊಂಡಿದ್ದ. ತನ್ನಂತೆ ತನ್ನ ಮಗನೂ ಬೆವರು ಸುರಿಸಬಾರದು ಎಂದು ಎಷ್ಟೇ ಕೆಲಸಗಳಿದ್ದರೂ ಕಿರಣ್‌ನನ್ನು ಕರೆಯುತ್ತಿರಲಿಲ್ಲ. ಎಲ್ಲಾದರೂ ಹೋಗಬೇಕಾಗಿ ಬಂದಾಗ ಮಗ ಎತ್ತುಗಳನ್ನು ಹಿಡಿಯಬೇಕಾಗುತ್ತದೆಂದು, ಹೋಗುವ ಮುಂಚೆಯೇ ಬೇರೆಯವರಿಗೆ ಕೆಲದಿನಗಳ ಮಟ್ಟಿಗೆ ಕೆಲಸ ಮಾಡಿಕೊಳ್ಳಲು ಕೊಟ್ಟುಹೋಗುತ್ತಿದ್ದ. ಆದರೆ, ಕಿರಣ್‌ನ ಆಸ್ಥೆಗಳೇ ಬೇರೆ. ಓರಗೆಯವರೊಡನೆ ದನ ಮೇಯಿಸಲು ಹೋಗುತ್ತಿದ್ದ. ಏಡಿ, ಮೀನು ಹಿಡಿಯುವುದು, ಓತಿಕ್ಯಾತಕ್ಕೆ ಎಕ್ಕದ ಹಾಲು ಕುಡಿಸಿ ಹುಚ್ಚು ಬರಿಸುವುದು, ಬಾವಿಯಲ್ಲಿ ಈಜಾಡುವುದು, ಬಾರೆಯ ಮೇಲೆ ಒಲೆ ಹಾಕಿಕೊಂಡು ಏನಾದರೂ ಅಡುಗೆ ಬೇಯಿಸುವುದು, ಗೋಲಿ, ಬುಗುರಿ, ಮರಕೋತಿ, ಚಿಣ್ಣಿದಾಂಡು... ಇವೆಲ್ಲವೂ ಅಪ್ಪನಿಗೆ ಗೊತ್ತಾಗಿ ಹೊಡೆಯುತ್ತಿದ್ದ.

ಮಗ ಮನೆಯೊಳಗೇ ಇದ್ದು ಪುಸ್ತಕ ಓದಬೇಕು ಎನ್ನುವುದು ಅವನಪ್ಪನ ಇಚ್ಛೆ ಮತ್ತು ಷರತ್ತು. ಕಿರಣ್‌ಗಾದರೋ ನೇಗಿಲು ಹಿಡಿಯುವ, ಸುಗ್ಗಿಯಲ್ಲಿ ಭತ್ತ, ರಾಗಿ ಕೊಯ್ಯುವ, ರಾತ್ರಿಯ ಹೊತ್ತು ರಾಶಿ ಕಾಯ್ದುಕೊಂಡು ಕಣದಲ್ಲೇ ಮಲಗುವ ಮಹದಾಸೆ. ಇದನ್ನು ಅರಿತಿದ್ದ

ಅಪ್ಪ, ಇವನು ಎಸ್.ಎಸ್.ಎಲ್.ಸಿ. ಮುಗಿಸಿದರೆ ಸಾಕು ನಂತರ ಮೈಸೂರಿಗೋ, ಬೆಂಗಳೂರಿಗೋ ಹಾಕಿಬಿಡಬೇಕೆಂಬ ಯೋಚನೆಯಲ್ಲಿದ್ದ. ಕಿರಣ್ ಪರೀಕ್ಷೆ ಬರೆದರೆ ಸಾಕು ಪಾಸಾಗುತ್ತಾನೆಂಬ ನಂಬಿಕೆಯೇನೋ ಇತ್ತು. ಆದರೆ ಎಲ್ಲಿ ಪರೀಕ್ಷೆಯನ್ನೇ ತಪ್ಪಿಸಿಬಿಡುತ್ತಾನೋ ಎಂದು ಅಂಜುತ್ತಿದ್ದ. ಅದಕ್ಕಾಗಿಯೇ ಫೆಬ್ರವರಿ ತಿಂಗಳಿನಲ್ಲಿಯೇ ತನ್ನ ಎತ್ತುಗಳನ್ನು ಮಾರಿ ಮಗನ ಕಡೆ ಗಮನ ಹರಿಸಿದ. ರಾತ್ರಿಯ ಹೊತ್ತು ಅವನೊಂದಿಗೇ ಕುಳಿತು ಓದಿಸುತ್ತಿದ್ದ. ಪರೀಕ್ಷೆಯ ಸಂದರ್ಭದಲ್ಲಿ ಹತ್ತು ಕಿ.ಮೀ. ದೂರದ ಹಾಸನದ ಪರೀಕ್ಷಾ ಕೇಂದ್ರಕ್ಕೆ ಅವನೇ ಕರೆದೊಯ್ಯುತ್ತಿದ್ದ.

ಮಗ ಬರೀ ಪಾಸ್ ಆಗಿದ್ದಿದ್ದರೆ ಖುಷಿಪಡುತ್ತಿದ್ದ ಅಪ್ಪನಿಗೆ ಕಿರಣ್ ಶಾಲೆಗೆ ಪ್ರಥಮವಾಗಿ ಬಂದದ್ದು, ಅವನ ಮೇಲಿನ ನಿರೀಕ್ಷೆ, ಕನಸುಗಳನ್ನು ಇಮ್ಮಡಿಗೊಳಿಸಿತು. ತನ್ನ ಜೀವ ತೆತ್ತಾದರೂ ಮಗನನ್ನು ಇಂಜಿನಿಯರ್ ಮಾಡಿಸಬೇಕೆಂಬ ಹಟ ತೊಟ್ಟ. ಇದ್ದ ನಾಲ್ಕೆಕರೆ ಜಮೀನಿಗೆ ಆಗ ತಾನೆ ಬೋರ್ ಕೊರೆಸಿ ಸರ್ವಿಸ್ ತೆಗೆದುಕೊಳ್ಳಲು ಸಾಕಷ್ಟು ಸಾಲ ಮಾಡಿದ್ದ. ಅದ್ಯಾವುದೂ ಮಗನ ಶಿಕ್ಷಣಕ್ಕೆ ಬೇಕಾದ ಖರ್ಚಿಗೆ ಭಯಭೀತಗೊಳಿಸಲೇ ಇಲ್ಲ.

ಇವೆಲ್ಲದರ ಸ್ಪಷ್ಟ ಅರಿವಿತ್ತು ಕಿರಣ್‌ಗೆ. ಪ್ರತಿಬಾರಿ ಮನೆಗೆ ಹೋದಾಗಲೂ ಅಲ್ಲಿನ ಪರಿಸ್ಥಿತಿ ಕಂಡು ವಿಷಣ್ಣನಾಗುತ್ತಿದ್ದ. ತನ್ನ ಕಣ್ಮುಂದೆಯೇ ಮುದಿ ಎತ್ತುಗಳಂತೆ ದುಡಿಯುತ್ತಿದ್ದ ಅವ್ವ-ಅಪ್ಪರನ್ನು ಕಂಡು ಹಿಂಸೆ ಪಡುತ್ತಿದ್ದ. ತನ್ನ ಹಾಸ್ಟೆಲ್‌ನ ಇತರ ಸ್ನೇಹಿತರು ಪ್ರತಿ ತಿಂಗಳಿಗೆ ದೊರೆಯುತ್ತಿದ್ದ ಮೂರ್‍ನಾಲ್ಕು ಸಾವಿರಗಳನ್ನು ಯಾವ ಎಗ್ಗೂ ಇಲ್ಲದೆ ಮೇಣದಂತೆ ಕರಗಿಸಿಬಿಡುತ್ತಿದ್ದರು. ಆದರೆ ಒಂದೊಂದು ಪೈಸೆ ಖರ್ಚು ಮಾಡುವಾಗಲೂ ಉರಿಬಿಸಿಲಿನಲ್ಲಿ ರಕ್ತಬಸಿದು ಗೇಯುತ್ತಿದ್ದ ಅವ್ವ-ಅಪ್ಪರೇ ಇವನ ಕಣ್ಣ ಮುಂದಿರುತ್ತಿದ್ದರು.

''ಇಷ್ಟೆಲ್ಲಾ ಕಷ್ಟವಾದರೂ ಏತಕ್ಕೆ ? ತಮ್ಮ ತಲೆಮಾರಿನ ಎಲ್ಲರೂ ಮಕ್ಕಳ ಕೈಯಲ್ಲಿ ಅನ್ನ ತಿನ್ನುವಾಗ, ಈ ಇಳಿವಯಸ್ಸಿನಲ್ಲಿ ಉತ್ತು, ಬಿತ್ತಿ, ಮಗನನ್ನು ಓದಿಸುವ ಅವರ ಉದ್ದೇಶವಾದರೂ ಏನು ? ಶಿಕ್ಷಣಕ್ಕೆ ಏಕಿಷ್ಟು ಬೆಲೆ ಕೊಡಬೇಕು ? ನನ್ನನ್ನು ರೈತನಾಗಿ ಮಾಡಲೇಬಾರದೆಂಬ ಹಟವಾದರೂ ಏತಕ್ಕೆ ? ಶಿಕ್ಷಣ ಮುಗಿಸಿದೊಡನೆ ಕೆಲಸ ಸಿಕ್ಕಿಯೇ ಬಿಡುವ ಖಾತ್ರಿಯಾದರೂ ಏನು ? ನನ್ನನ್ನೇಕೆ ಮಣ್ಣು ಸೋಕದಂತೆ, ಸೆಗಣಿಯ ವಾಸನೆ ಮೈಗೆ ಹತ್ತದಂತೆ ಬೆಳೆಸಿದರು ? ಪ್ರತಿದಿನ ಗಂಜಲು ಬಳಿದು, ಸೆಗಣಿ ಬಾಚುವ ಅವರ ಬೆವರಲ್ಲಿ ನಾನೇಕೆ ಸುಂದರ ಸುವಾಸನೆ ಬೀರುವ ಸ್ನಾನ ಮಾಡಬೇಕು ? ಆ ಸ್ನಾನ ನನ್ನೊಳಗಿನ ರೈತನನ್ನು, ಮಣ್ಣಿನ ವಾಸನೆಯನ್ನು ತೊಳೆದುಬಿಡುತ್ತದೆಯೇ ? ಅಪ್ಪನಿಗೆ ನನ್ನನ್ನು – ನನ್ನ ರಕ್ತದ ಗುಣವನ್ನೇ ಬದಲಾಯಿಸಬೇಕೆಂಬ ಹಟವಾದರೂ ಏತಕ್ಕೆ ?....'' ಕಿರಣ್‌ನ ಡೈರಿಯ ತುಂಬಾ ಇಂತಹ ನೂರಾರು ಪ್ರಶ್ನೆಗಳು ಉತ್ತರ ಕಾಣದೆ ಹಾಗೇ ಉಳಿದಿದ್ದವು.

ಚಿನ್ನಪ್ಪನ ಆತ್ಮಹತ್ಯೆಯ ಸುದ್ದಿ ಓದಿದ ನಂತರ ತನ್ನ ಬದುಕಿನ ಬಗ್ಗೆಯೇ ಜಿಗುಪ್ಸೆ ಪ್ರಾರಂಭವಾಗಿತ್ತು. ತನ್ನ ಅಸ್ತಿತ್ವದ ಮೂಲಬೇರಿಗೆ ನುಸಿ ಹತ್ತಿದಂತೆ ಅನಿಸತೊಡಗಿತು. ಇನ್ನು ತಾನು ಇಲ್ಲಿರುವುದೇ ದೊಡ್ಡ ಅಪರಾಧವೆಂಬಂತೆ ಮಾರನೆಯ ದಿನವೇ ಊರಿಗೆ ಹೋಗಲು ತೀರ್ಮಾನಿಸಿದ.

* * *

ಕೊಳ್ಳೆ ಹೊಡೆದಂತಿತ್ತು ಊರು. ಬರಬೇಕಾದ ಮುಂಗಾರು ಬಾರದೆ, ಇಡೀ ಊರನ್ನು ತಲೆಕೆಳಕಾಗಿಡಿದು ಬಸಿದು ಹಾಕಿತ್ತು ಬಿಸಿಲು. ತಿಪ್ಪೆಗುಂಡಿಯ ಸುತ್ತಲೂ ಕಾಗೆಗಳ ವಿಕಾರ ಕೂಗು. ಪ್ರತಿದಿನ ಬಂದು ಬೀಳುತ್ತಿದ್ದ ಬಿಸಿಬಿಸಿ ಸಗಣಿಯಲ್ಲಿ ದೊರೆಯುತ್ತಿದ್ದ ಅವುಗಳ ಆಹಾರವಿಲ್ಲದೆ ಹಾಹಾಕಾರ ಎಬ್ಬಿಸಿದ್ದವು. ನೆಲವೇ ಸೀದು ಚಕ್ಕಳವಾಗಿರುವಾಗ ದನಕರುಗಳಿಗಾದರೂ ಎಲ್ಲಿಂದ ಮೇವು ಬಂದೀತು ?

ಮನೆಯ ಬಾಗಿಲು ತೆರೆದೇ ಇತ್ತು. ಒಳಹೋಗುತ್ತಿದ್ದಂತೆ ಬಿಸಿಗಾಳಿಗೆ ಶರೀರ ಒಮ್ಮೆಲೆ ತಲ್ಲಣಿಸಿತು. ಒಲೆಯ ಮುಂದೆ ಅವ್ವ ಹೊಗೆಯೊಳಗೆ ಮರೆಯಾಗಿದ್ದಳು. ಮಗನ ಅನಿರೀಕ್ಷಿತ ಆಗಮನ ಅಚ್ಚರಿಯೇನೂ ತರಲಿಲ್ಲ. ಖುಷಿ ಆಯಿತೆಂದು ಹೇಳುವುದಾದರೂ ಹೇಗೆ ? ಈಗಾಗಲೇ ಎರಡು ಮೂರು ತಿಂಗಳಿನಿಂದ ಮುನ್ನೂರು-ನಾನ್ನೂರು ರೂಪಾಯಿಗಳನ್ನಷ್ಟೇ ಕಳಿಸುತ್ತಿರುವುದರಿಂದ ಹಣದ ಅವಶ್ಯಕತೆ ಬಿದ್ದು ಮಗ ಬರಲೇಬಹುದೆಂದು ಅವಳಿಗೂ ಚೆನ್ನಾಗಿ ಗೊತ್ತಿತ್ತು.

ಮೊದಲಾದರೆ ತಿಂಗಳಿಗೊಂದಾವರ್ತಿ ಬರಲೇಬೇಕೆಂದು ಹಟ ಮಾಡುತ್ತಿದ್ದಳು. ಬಂದಾಗ ಬೆಣ್ಣೆಯಲ್ಲಿ ನಾಟಿ ಕೋಳಿ ಸಾರು ಮಾಡಿ, ಅವನಿಗಿಷ್ಟವಾದ ದೊಡ್ಡ ಹೊಲದ ರಾಗಿಯ ಹಿಟ್ಟಿನಲ್ಲೇ ಮುದ್ದೆಮಾಡಿ ಬಡಿಸುತ್ತಿದ್ದಳು. ತಾನೆ ಕೈಯಾರ ಬೇಯಿಸಿದ ಹರಳೆಣ್ಣೆಯನ್ನು ಮೈತುಂಬಾ ತಿಕ್ಕಿ ಸ್ನಾನ ಮಾಡಿಸುತ್ತಿದ್ದಳು. ಮಗ ಬೆಳೆದು ನಿಂತಿದ್ದಾನೆಂಬುದನ್ನೂ ಎಣಿಸದೆ ಅವನ ಜೊತೆಯಲ್ಲೇ ಮಲಗುತ್ತಿದ್ದಳು. ಅವನ ಬರುವಿಕೆ ಮನೆಗೆ ಮತ್ತೊಂದು ಕೂಸು ಜನಿಸಿದಂತಿರುತ್ತಿತ್ತು.

ಇಂದು...? ಸೂತಕದ ಮನೆಯಾಗಿತ್ತು. ''ಯಾವಾಗ ಬಂದ್ಯೋ....'' ಎಂಬುದಷ್ಟೇ ತಾಯವ್ವಳ ಪ್ರಶ್ನೆ. ಅವಳಿಗೆ ಇದ್ದ ಯೋಚನೆಯೇ ಬೇರೆ. ಮಗ ಹೊರಟುನಿಂತು ದುಡ್ಡು ಕೇಳಿದರೆ ಎಲ್ಲಿಂದ ತರುವುದು. ಹಣ ಹುಟ್ಟುವ ಮೂಲಗಳೆಲ್ಲವೂ ಸತ್ತು ಮಣ್ಣಾಗಿಹೋಗಿವೆ. ತೆಂಗಿನ ಮರಗಳು ಬಟಾಬಯಲನ್ನು ಮತ್ತೆ ಮತ್ತೆ ಗುಡಿಸಲು ನಿಂತ ಪೊರಕೆಯಂತಿವೆ. ಬಿಂದಿಗೆಯ ತುಂಬಾ ಹಾಲು ಕರೆಯುತ್ತಿದ್ದ ಎರಡು ಹಸುಗಳನ್ನು ಜೀವಂತ ಅಸ್ಥಿಪಂಜರವಾಗುವುದನ್ನು ನೋಡಲಾಗದೆ ಎಂದೋ ಮಾರಿ, ಬಂದ ಹಣದಲ್ಲಿ ಕಟ್ಟಬೇಕಾದ ಸಾಲದ ಕಂತು ಕಟ್ಟಿ ಆಗಿತ್ತು. ಮನೆಯಲ್ಲಿದ್ದ ದವಸದಲ್ಲಿ ಊಟಕ್ಕಾಗುವಷ್ಟು ಇಟ್ಟುಕೊಂಡು ಉಳಿದೆಲ್ಲವನ್ನೂ ಮಾರಿ ಆಗಿದೆ. ಗೆಣ್ಣಾಗಿದ್ದ ಕಬ್ಬು ಒಣಗಿ ಪುರಲೆಯಾಗಿದೆ. ಮತ್ತೆಲ್ಲಿಂದ ಹಣ ತರುವುದು ? ಹೀಗೆ ಚಿಂತೆಗೊಳಗಾಗಿದ್ದ ತಾಯವ್ವನಿಗೆ ಬಂದ ಮಗ ಬ್ಯಾಗನಿಟ್ಟು ಮನೆಯಿಂದ ಹೊರಹೋಗಿದ್ದೇ ತಿಳಿಯಲಿಲ್ಲ.

ತನ್ನ ಜಮೀನು ನೋಡುವ ಮಹದಾಸೆಯಿಂದ ಕಿರಣ್‌ನ ಕರುಳಬಳ್ಳಿ ತುಡಿಯುತ್ತಿತ್ತು. ಊರನ್ನು ಹಾದು ಹೋಗುವಾಗ ಬರೆಹಾಕುವ ಹಲ್ಲೆಯಂತೆ, ಸೂರ್ಯ ಸುಡುತ್ತಿದ್ದ. ಊರು ಬಿಕೋ ಎನ್ನುತ್ತಿತ್ತು. ಅಸ್ಥಿಪಂಜರಗಳಿಲ್ಲದ ಶವದಂತೆ ಉದ್ದವಾಗಿ ಚಾಚಿದ್ದ ತನ್ನ ನೆರಳುಗಳೊಂದಿಗೆ ಸಂಭಾಷಿಸುತ್ತಾ ಜಮೀನಿನೆಡೆಗೆ ನಡೆಯುತ್ತಿದ್ದ.

ಪಂಪ್‌ಸೆಟ್ ಮನೆ. ಇಡೀ ಜಮೀನಿಗೆ ಆತ್ಮವಾಗಿದ್ದ ಬೋರ್‌ವೆಲ್. ಸಾಲ ಮಾಡಿ ಕೊರೆಸಿದ್ದಾಗ ಪ್ರಥಮ ಯತ್ನದಲ್ಲೇ ಜಲದ ಬಸಿರು ಸಿಕ್ಕಿತ್ತು. ಯಾರ ಕೈಯಲ್ಲೂ ಜಲದ ಪರೀಕ್ಷೆ ಮಾಡಿಸದೇ, ಅಪ್ಪ ಮೈಸೂರಿನಿಂದ ತನ್ನನ್ನು ಕರೆಸಿ, ''ಮಗಾ ಆ ದ್ಯಾವ್ರನ್ನ ನೆನೆಸಿಕೊಂಡು, ಕಣ್ ಮುಚ್ಕೊಂಡು ಒಂದು ಕಲ್ ಎಸಿಲಾ'' ಅಂತ ಹೇಳಿ ಕಲ್ಲು ಬಿದ್ದ ಜಾಗದಲ್ಲೇ ಬೋರ್ ಕೊರೆಸಿದ್ದ. ಸಮಸ್ತ ಊರವರ ವಿರೋಧದ ನಡುವೆಯೂ, ''ನನ್ಮಗನ ಕೈಗುಣ ಚೆನ್ನಾಗೈತೆ. ದ್ಯಾವ್ರಿಟ್ಟಂಗಾಗ್ಲಿ, ನಾನ್ಮಾಡ್ತಿರೋದು ಅವನಿಗಾಗೇ ಅಲ್ವ ?'' ಎಂದು ಸಮಜಾಯಿಷಿ ಕೊಟ್ಟಿದ್ದ. ಅಂತೂ ಅಂದು ಸುತ್ತಮುತ್ತಲ ಎಲ್ಲಾ ಬಾವಿಗಳಿಗೂ ಸೆಡ್ಡು ಹೊಡೆದಂತೆ ನೀರು ಉಕ್ಕಿ ಹರಿದಿತ್ತು.

ಈಗ.... ಸದಾ ನೀರಾಡುತ್ತಿದ್ದ ಜಾಗ, ಒಣಗಿ ಚಕ್ಕಳವಾಗಿದೆ. ಜಲದ ಸೆಲೆ ಬತ್ತಿದೆ. ಪಂಪ್‌ಸೆಟ್ ಮನೆಯೊಳಗೆ ಇಣುಕಿ ನೋಡಿದ. ನೊಗ ನೇಗಿಲುಗಳು ಮೂಲೆ ಸೇರಿ ಕೂತಿವೆ. ಜೇಡರ ಬಲೆ ಸುತ್ತಲೂ ನೇಯ್ದಿವೆ.

ಸಾಲ ಮಾಡಿ ಗೊಬ್ಬರ ಹಾಕಿದ್ದ ಕಳೆ ಕಬ್ಬು, ಹಿತ್ತಲಲ್ಲಿ ಮಳೆಗಾಲಕ್ಕೆಂದು ಬಿತ್ತುವ ಸಾವೆ, ಪುರಲೆಗಳ ರಾಶಿಯಂತಿದೆ. ತೆಂಗಿನ ಮರಗಳಲ್ಲಿ ಮುದುಕರ ಬೀಜದಂತೆ ಗೊನೆಗೆರಡು ಕಾಯಿಗಳು ನೇತಾಡುತ್ತಿವೆ. ನುಸಿರೋಗ ಮರಗಳ ಹೊಂಬಾಳೆಯನ್ನೇ ನುಂಗಿಹಾಕಿದೆ. ಸದಾ ಕಪ್ಪಗೆ ಕಾಣುತ್ತಿದ್ದ ತೋಟದ ನೆರಳು, ಒಣಗಿ ಕಳಚಿಕೊಂಡ ಸೋಗೆಯಿಂದಾಗಿ ಬೋಳು ಬೋಳಾಗಿ ಕಾಣುತಿತ್ತು.



ತನ್ನೊಳಗಿನ ತನ್ನನ್ನೇ ಮರೆತು ನಡೆಯುತ್ತಿದ್ದ ಕಿರಣ್‌ಗೆ ತನ್ನ ಜಮೀನಿನ ಗದ್ದು ಮುಗಿದು, ಚಿನ್ನಪ್ಪನ ಜಮೀನಿಗೆ, ಮೊನ್ನೆ ಅವನು ನೇಣುಹಾಕಿಕೊಂಡ ಹೊಂಗೆ ಮರದ ಬಳಿಗೆ ಬಂದಿದ್ದೇ ಗೊತ್ತಾಗಲಿಲ್ಲ. ಸುಮಾರು ಐದಾರು ಬೋರ್ ಕೊರೆಸಿಯೂ ನೀರು ಬಾರದೆ ಹೋದರೂ, ಈ ಬಾರಿ ಬರಗಾಲದಲ್ಲಿಯೇ ಅದೃಷ್ಟ ಪರೀಕ್ಷೆಗಿಳಿಯುತ್ತೇನೆಂದು ಹೊರಟು ಆರುನೂರು ಅಡಿಗಳಷ್ಟು ಕೊರೆಸಿದರೂ ಬರಿಯ ಧೂಳನ್ನು ಬಿಟ್ಟು ಬೇರೇನೂ ಸಿಗದೆ, ಸಾಲಕ್ಕೆ ಹೆದರಿ ಇದೇ ಹೊಂಗೆ ಮರಕ್ಕೆ ನೇಣು ಹಾಕಿಕೊಂಡು ಪ್ರಾಣಬಿಟ್ಟಿದ್ದ.

ತನ್ನ ಓರಗೆಯವರೊಡನೆ ಮರಕೋತಿ ಆಡಿದ್ದ

ಮರ. ಊರಿನ ಅದೆಷ್ಟು ಸಾವಿರ ಬುಗುರಿಗಳಿಗಾಗಿ ಇದರ ಕೊಂಬೆಗಳು ಬಲಿಯಾಗಿದ್ದವೊ ? ಕೊಯ್ಲಿನ ನಂತರ ದನಗಳನ್ನು ಮೇಯಲು ಅಟ್ಟಿ, ತಣ್ಣೆಳಲಲ್ಲಿ ಗೋಲಿ, ಬುಗುರಿ ಆಡುತ್ತಾ ಕಳೆದ ದಿನಗಳು .... ಎಲ್ಲವೂ ನೆನಪುಗಳೋ ? ಕನಸುಗಳೋ ? ತಿಳಿಯದಾಯಿತು. ಗಂಡಸ್ತನ, ಎದೆಗಾರಿಕೆಗೆ ಹೆಸರಾಗಿದ್ದ ಚಿನ್ನಪ್ಪ. ದೊಡ್ಡ ಕುಳವಲ್ಲದಿದ್ದರೂ ಎಂಥವರನ್ನೂ ಎದುರುಹಾಕಿಕೊಳ್ಳುತ್ತಿದ್ದ ಮನುಷ್ಯ. ಸಾಲ ಮಾಡಲು ಹೆದರುತ್ತಿದ್ದ ತನ್ನಪ್ಪನಿಗೆ ಅವನೇ ಧೈರ್ಯ ತುಂಬಿ ಬೋರ್ ಕೊರೆಸುವಂತೆ ಮಾಡಿದ್ದ "ಒಂದಲ್ಲ, ಹತ್ತು ಬೇಕಾದರೂ ಕೊರೆಸ್ತೀನಿ. ಭೂತಾಯಿ ಕಣ್ಬುಟ್ಟರೆ ಸಾಕು. ಆದರೆಡ್ತಿ ಸಾಲ ಎರಡು ವರ್ಷದ್ ಕಬ್ಬ್‌ನಲ್ಲಿ ತೀರಿಸ್ತೀನಿ" ಅನ್ನೋ ಅವನ ಧೈರ್ಯಕ್ಕೆ ತಾನೇ ಬೆರಗಾಗಿದ್ದೆ. ಅಂತಹ ಮನುಷ್ಯ ನೇಣುಹಾಕಿಕೊಳ್ಳುವುದೆಂದರೆ ?

ಹೊಂಗೆ ಮರದ ಸಂಪೂರ್ಣ ಚಿತ್ರಣವನ್ನು ತನ್ನ ಕಣ್ಣುಗಳಲ್ಲಿ ತುಂಬಿಕೊಂಡ. ಮನಸ್ಸು ಸ್ತಿಮಿತ ಕಳೆದುಕೊಳ್ಳುವ ಅನುಭವವಾಗತೊಡಗಿತು. ದೈತ್ಯ ಮರ. ವಿಶಾಲವಾದ ಅದರ ದೇಹ. ಯಾವ ವಿದೇಶಿ ಕಂಪನಿಯ ಸಮಸ್ತ ಬುದ್ಧಿಮತ್ತೆಯ ಫಲದಿಂದ ನಿರ್ಮಿತವಾದ ಏರ್‌ಕಂಡೀಷನ್ ಮತ್ತು ಅವು ಕಕ್ಕುವ ಸುಖವನ್ನು ತೃಷೆಯಾಗಿಸುವ ಮರದ ಆ ತಣ್ಣೆಳಲು... ಹಸಿರು... ಚಿಲಿಪಿಲಿ... ಅಲ್ಲಿ ಮಿಳಿತಗೊಂಡ ಬದುಕು ಎಲ್ಲವೂ ಚಿತೆಯಲ್ಲಿ ಬೆಂದ ಅಸ್ಥಿಪಂಜರವಾದಂತೆ ಭಾಸವಾಗತೊಡಗಿತು. ಗೆದ್ದಲು ತಿನ್ನಹತ್ತಿದ್ದ ಬೇರುಗಳು ಎಂದೋ ಸತ್ತು ಮಣ್ಣಾಗಿದ್ದರೂ ಇನ್ನೂ ಜೀವಂತವಾಗಿರುವ ತಾನು ಸತ್ತ ಹೆಣದಂತೆ. ತಾನು ಓದುತ್ತಿರುವ ಕಾಲೇಜು, ಸ್ನೇಹಿತರು, ಕನಸುಗಳ ಜೂಜುಕೋರರು, ದೊಡ್ಡ ಹುದ್ದೆಯ ಆಸೆಗಳು, ಹಣ-ಕೀರ್ತಿಯ ಸೆರಗು ಹಿಡಿದವರು, ಓದುವ ಪಾಠಗಳು, ಅವುಗಳನ್ನು ಬೋಧಿಸುವ ಮೇಷ್ಟ್ರುಗಳು... ಎಲ್ಲವೂ ಭ್ರಮಾಲೋಕದಂತೆ. ಇಷ್ಟುದಿನ ತಾನೊಂದು ಮರೀಚಿಕೆಯನ್ನು ಹುಡುಕಿ ಹೊರಟವನಂತೆ... ತಾನು ಗಳಿಸಿದ ಜ್ಞಾನ, ಬುದ್ಧಿವಂತಿಕೆ ಬೆಲೆಹೀನ ವಸ್ತುಗಳು ಎಂದುಕೊಂಡ.

ಅವ್ವ, ಅಪ್ಪರ ಸೆಗಣಿ - ಗಂಜಲದ ವಾಸನೆ, ರಕ್ತ, ಬೆವರು ಸುರಿಸಿ ಅವರು ಕಳುಹಿಸುತ್ತಿದ್ದ ದುಡ್ಡಿಗೆ ಪಾವಿತ್ರ್ಯತೆ ಇರುವಂತೆಯೂ, ಚಿನ್ನಪ್ಪ ನೇಣುಹಾಕಿಕೊಂಡರೂ ವೀರನಾಗಿ ರೂಪುಗೊಳ್ಳತೊಡಗಿದ. ಅವನ ಸಾವು; ಕುಣಿಕೆ ಬಿಗಿದ ಕೊಂಬೆ, ಆ ಹಗ್ಗ, ಸಾಯುವ ಅವನ ನಿರ್ಧಾರ, ಧೈರ್ಯ, ಹೇಡಿತನ, ಎಲ್ಲವೂ ಅರ್ಥಗರ್ಭಿತ ಗಟ್ಟಿ ರೂಪಕಗಳಾಗಿ ಅರ್ಥವಾಗುವಂತೆ ಅನಿಸಿದರೂ ಅರ್ಥವಾಗದೆ ಅವನೊಳಗೆ ಉಳಿದವು.

ಸಮಾಧಿಯೊಳಗಿನ ದೇಹದಂತೆ ಬಿದ್ದಿರುವ ಜಮೀನು, ಗುರುತಿಗಾಗಿ ನೆಟ್ಟ ಹೊಂಗೆ ಮರ, ಸುತ್ತಲೂ ಆವಿರ್ಭವಿಸಿರಬಹುದಾದ ಚಿನ್ನಪ್ಪನ ಆತ್ಮ, ತನ್ನನ್ನು ಕಳುಹಿಸಲು ಹಣ ಹುಡುಕಿ ಹೊರಟಿರುವ ಅಪ್ಪ, ಮೈಮೇಲಿನ ಬಂಗಾರವನ್ನು ಬಿಚ್ಚಿಕೊಟ್ಟಿರುವ ಅವ್ವ, ಗುಳೇ ಏಳಲು ಸಜ್ಜಾಗಿರುವ ಊರು, ಇದ್ಯಾವುದರ ಪರಿವೆಯೇ ಇಲ್ಲದೆ ಬದುಕುತ್ತಿರುವ ಪಟ್ಟಣಗಳು, ಹಾರುವ ವಿಮಾನ, ಚಲಿಸುವ ವಾಹನಗಳು, ಅವುಗಳೊಳಗಿನ ಇಂಧನ... ಪ್ರಶ್ನೆಗಳಾಗಿ ಕಾಡಲಾರಂಭಿಸಿದವು. ತಾನು ಓದುವ ಇಂಜಿನಿಯರಿಂಗ್ ಸಿಲೆಬಸ್ ಆಗಲಿ, ಸಮಾಜಶಾಸ್ತ್ರದ ಸಿದ್ಧಾಂತಗಳಾಗಲಿ, ಅರ್ಥಶಾಸ್ತ್ರದ ಮಾದರಿಗಳಾಗಲಿ, ರಾಜ್ಯಶಾಸ್ತ್ರದ ನೀತಿಗಳಾಗಲಿ ಉತ್ತರ ಕೊಡುವುದು ಅಸಾಧ್ಯವೆನಿಸಿತು. ಉತ್ತರ ಹುಡುಕದ ಬದುಕು ನಿಷ್ಪ್ರಯೋಜಕವೆನಿಸಿತು.

ಹೊಂಗೆ ಮರದ ಒಂದು ಬೇರು ತನ್ನಾಳದೊಳಗೆ ಎಲ್ಲೋ ಜೀವಂತವಾಗಿದೆ ಎಂದುಕೊಂಡ. ಇದುವರೆಗೂ ಜಮೀನಿನಿಂದ, ಹಳ್ಳಿಯಿಂದ ದೂರವಿಟ್ಟು ಬೆಳೆಸುವ ಹಟ ತೊಟ್ಟ ತನ್ನ ಅಪ್ಪ-ಅವ್ವ ರಕ್ತ ಸೀದುಕೊಂಡು ನೀರೆರೆದದ್ದು ಅದೇ ಬೇರಿಗೆ. ಇಂದು ಅದು ಹೆಮ್ಮರವಾಗಿರುವಂತೆಯೂ, ತನ್ನ ಅಪ್ಪ ಅದೇ ಮರಕ್ಕೆ ನೇಣು ಹಾಕಿಕೊಂಡು ಸಾಯುವ ವಿಕ್ಷಿಪ್ತ ಕನಸೊಂದು ಅವನೊಳಗೆ ಹಾದುಹೋಯಿತು.

* * *

ಮೈಸೂರಿಗೆ ಬಂದ ಕಿರಣ್ ಪುಸ್ತಕಗಳು ಸೇರಿದಂತೆ ತನ್ನಲಿದ್ದ ಎಲ್ಲಾ ವಸ್ತುಗಳನ್ನು ಅರ್ಧ ಬೆಲೆಗೆ ಮಾರಿ ಕಟ್ಟಬೇಕಾಗಿದ್ದ ಮೆಸ್ ಬಿಲ್ಲನ್ನು ಕಟ್ಟಿದ. ಪ್ರಾಧ್ಯಾಪಕರು, ಸ್ನೇಹಿತರು, ಕೊನೆಗೆ ಅವನನ್ನು ತುಂಬಾ ಪ್ರೀತಿಸುತ್ತಿದ್ದ ರಕ್ಷಾಳು ಕೂಡ ಕಾಲೇಜು ತೊರೆಯುವ ಅವನ ನಿರ್ಧಾರವನ್ನು ಬದಲಾಯಿಸಲು ಸಾಧ್ಯವಾಗಲಿಲ್ಲ.

ತನ್ನ ಊರಿನ ಕಡೆಗಿನ ಬಸ್ಸು ಹತ್ತಿ ಕುಳಿತ ಕಿರಣ್ ಇದೇ ಮೊದಲಬಾರಿಗೆ ಮನೆಗೆ ಹೋಗುತ್ತಿರುವ ಅನುಭವದಲ್ಲಿ ಮಿಂದುಹೋದ.


**ನವೀನ್ ಜೋಸೆಫ್**
ದ್ವಿತೀಯ ಎಂ. ಎ., ಪತ್ರಿಕೋದ್ಯಮ ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦ ೦೦೬




## ಪುಟಾಣಿಗಳು

ಬೆಳಕು ಹಳಸುವುದಿಲ್ಲ
ಹಾಗೆಯೇ ಕತ್ತಲೆ ಕೂಡ
ಅವು ಪ್ರತಿ ಕ್ಷಣವೂ
ತಾಜಾ ಆಗಿರುತ್ತವೆ ಮಕ್ಕಳ ಹಾಗೆ
ಹಳೆಯ ಬೆಳಕು
ಅಥವಾ ಹಳೆಯ ಕತ್ತಲು
ನೋಡಲು ಸಿಗುವುದಿಲ್ಲ
ಸಂರಕ್ಷಕ ಸಾಧನಗಳಲ್ಲಿ
ವಸ್ತು ಸಂಗ್ರಹಾಲಯಗಳಲ್ಲಿ
ಹಿಡಿದಿಡಲು ಸಾಧ್ಯವಾಗಿಲ್ಲ
ಕಾಲನ ಜಾರು ಬಂಡೆಯ ಮೇಲೆ
ಆಡುವ ಕರಿಬಿಳಿ ಸಮವಸ್ತ್ರದ
ಈ ಪುಟಾಣಿಗಳು
ಒಮ್ಮೆ ಜಾರಿದರೆ ಮರಳಿ ಬರುವುದಿಲ್ಲ
ಸಮವಸ್ತ್ರದಿಂದಾಗಿ ಗುರುತು ಹತ್ತದೆ
ಅವೇ ಅವೇ ಅನಿಸುತ್ತವೆ
ಬೆನ್ನಿಗೆ ಬ್ಯಾಗು ಇಲ್ಲದೆ
ಅಟೆಂಡನ್ಸು ಹೇಳಿ ಆಟ ಆಡುತ್ತವೆ
ಒಂದು ದಿನವೂ
ಗೈರು ಹಾಜರಿಯ ದಾಖಲೆಯಿಲ್ಲ


ಬಸವರಾಜ ವಕ್ಕುಂದ
ಕೇರಾಫ್ ಎ. ಬಿ. ಕುಲಕರ್ಣಿ
ಶ್ರೀ ಕೃಷ್ಣ ಬಿಲ್ಡಿಂಗ್, ಬರಕೊಟ್ರ ಹತ್ತಿರ
ಶಿವಗಿರಿ, ಧಾರವಾಡ - ೫೮೦ ೦೦೭




# ಏಪ್ರಿಲ್ ೨೩ ವಿಶ್ವ ಪುಸ್ತಕ ದಿನ



**"ಇಡೀ ಪ್ರಪಂಚವೇ ನಿನ್ನನ್ನು ಬಿಟ್ಟುಹೋದಾಗ ನಿನ್ನೊಂದಿಗೆ ಒಂದು ಪುಸ್ತಕವಿರಲಿ. ಅದೇ ನಿನಗೆ ಸ್ಫೂರ್ತಿ, ಸಂಗಾತಿ ಎಲ್ಲವೂ."**

– ಜಾರ್ಜ್ ಬರ್ನಾಡ್ ಶಾ

**ಜಗನ್ನಾಥ ಅ. ಸಣ್ಣೂರ**

**ನೊಂ**ದ ಮನಸ್ಸಿಗೆ ಸ್ಫೂರ್ತಿ ನೀಡುವ, ಹೃದಯಕ್ಕೆ ಶಕ್ತಿ, ಧೈರ್ಯ ತುಂಬುವ ತಾಕತ್ತು ಪುಸ್ತಕಗಳಿಗಿದೆ. ಉತ್ತಮ ಪುಸ್ತಕಗಳು ಆತ್ಮೀಯ ಗೆಳೆಯರಿದ್ದಂತೆ. ಪುಸ್ತಕಗಳನ್ನು ಯಾರು ಪ್ರೀತಿಸುತ್ತಾರೋ ಅವರು ಎಲ್ಲಿ ಹೋದರೂ ಸುಖವಾಗಿರುತ್ತಾರೆ.

ಅಪಾರ ವಿಚಾರಗಳ ಅದ್ಭುತ ಲೋಕವೇ ಪುಸ್ತಕದ ಪುಟಗಳಲ್ಲಿ ತೆರೆಯುತ್ತದೆ. ಪುಸ್ತಕ ಇಂದಿನ ಮುಂದಿನ ಬಾಳಿಗೆ ದಾರಿ ತೋರಿಸುವ, ಕೈ ಹಿಡಿದು ನಡೆಸುವ ದೀವಿಗೆ ಇದ್ದಂತೆ. ಎಲ್ಲಿ ಪುಸ್ತಕಗಳಿವೆಯೋ ಅಲ್ಲಿ ಜಗತ್ತಿನ ಎಲ್ಲಾ ಸುಖ-ಸಂತೋಷಗಳೂ ನೆಲೆಸಿರುತ್ತವೆ. ತನ್ನ ಕೋಣೆಯಲ್ಲಿ ಒಂದು ಚಿಕ್ಕ ಗ್ರಂಥಾಲಯ ಹೊಂದಿರುವುದು ವಿದ್ಯಾರ್ಥಿಯಾದವನ ಲಕ್ಷಣ. ಜ್ಞಾನದಾಹಕ್ಕಾಗಿ ಪಠ್ಯಕ್ರಮದ ಜೊತೆ ಪಠ್ಯೇತರ ಪುಸ್ತಕಗಳನ್ನು ಸಂಗ್ರಹಿಸುವುದೂ ಒಂದು ಕಲೆ. ಅವುಗಳನ್ನು ಜೋಪಾನವಾಗಿಟ್ಟುಕೊಳ್ಳುವುದೂ ಮತ್ತೊಂದು ಕಲೆ. ಹೀಗೆ ಸಂಗ್ರಹಿಸಿ ಓದುವುದರಿಂದ ಪುಸ್ತಕ ಪ್ರಿಯರ ವ್ಯಕ್ತಿತ್ವ ವಿಕಾಸಗೊಂಡು ಉತ್ತಮ ಜ್ಞಾನ ಬೆಳೆಯುತ್ತದೆ.

ಯುನೆಸ್ಕೋ ಸಹಯೋಗದಲ್ಲಿ ೧೯೭೨ರಲ್ಲಿ ಏಪ್ರಿಲ್-೨೩ರಂದು 'ವಿಶ್ವ ಪುಸ್ತಕ ದಿನ' ಎಂದು ಮೊದಲ ಬಾರಿಗೆ ಆಚರಿಸಲಾಯಿತು. ಅದಾದ ೨೩ ವರ್ಷಗಳ ನಂತರ ಪ್ರತಿವರ್ಷ ಏಪ್ರಿಲ್-೨೩ನೇ ದಿನವನ್ನು ಜಾಗತಿಕ ಮಟ್ಟದಲ್ಲಿ ಪುಸ್ತಕ ದಿನವನ್ನಾಗಿ ಆಚರಿಸಲಾಗುತ್ತಿದೆ.

ಮಾನವನ ಕಲಿಕೆಯ ವಿಕಾಸದ ವಿವಿಧ ಘಟ್ಟಗಳಲ್ಲಿ ಮೂಡಿಬಂದ ಜ್ಞಾನವನ್ನು ವ್ಯಾಪಿಸಿಕೊಂಡು ನಿರಂತರ ಹಿಗ್ಗುತ್ತಿರುವ ಜ್ಞಾನವಾಹಕಗಳಂತಿರುವ ಪುಸ್ತಕಗಳು ಇಂದು ಅತ್ಯಗತ್ಯ. ಜಗತ್ತನ್ನು ಬೆಳಗಿಸಲು ಒಬ್ಬ ಸೂರ್ಯ ಬೇಕು. ಆದರೆ ಬದುಕನ್ನು ಬೆಳಗಿಸಲು ಒಂದು ಉತ್ತಮ ಪುಸ್ತಕ ಬೇಕು.

ಜೀವನದ ಶೈಕ್ಷಣಿಕ, ಸಾಮಾಜಿಕ, ಮಾನಸಿಕ, ಆರ್ಥಿಕ ಬೆಳವಣಿಗೆಗೆ ಪುಸ್ತಕಗಳ ಸಹಾಯ ತುಂಬಾ ಅವಶ್ಯಕ. ಇದನ್ನರಿತ ಹಲವಾರು ರಾಷ್ಟ್ರಗಳು ತಮ್ಮ ತಮ್ಮ ದೇಶಗಳಲ್ಲಿ ಸಾರ್ವಜನಿಕ ಗ್ರಂಥಾಲಯಗಳನ್ನು, ರಾಷ್ಟ್ರೀಯ ಗ್ರಂಥಾಲಯಗಳನ್ನು ಸ್ಥಾಪಿಸುವುದಲ್ಲದೆ ಹಲವು ಹಂತಗಳಲ್ಲಿ ಪುಸ್ತಕ ಪ್ರಕಾಶನದ ಬಗ್ಗೆ ಕಾಯ್ದೆಗಳನ್ನು ರಚಿಸಿದ್ದಾಗಿದೆ. ನಮ್ಮ ದೇಶದಲ್ಲೂ ಗ್ರಾಮೀಣ ಮಟ್ಟದಿಂದ ರಾಜ್ಯ ಮಟ್ಟದವರೆಗೂ ಸಾರ್ವಜನಿಕ ಗ್ರಂಥಾಲಯಗಳನ್ನು ನಾವು ಕಾಣಬಹುದಾಗಿದೆ.

ಹಲವು ಭಾಷೆಗಳುಳ್ಳ ನಮ್ಮ ರಾಷ್ಟ್ರದಲ್ಲಿ ಪುಸ್ತಕದ ಜ್ಞಾನದಾಹ ಹೆಚ್ಚಿಸಲು ರಾಷ್ಟ್ರಮಟ್ಟದ, ರಾಜ್ಯಮಟ್ಟದ ಸಂಘಸಂಸ್ಥೆಗಳು ಪ್ರಯತ್ನಿಸುತ್ತಿವೆ. ಈ ನಿಟ್ಟಿನಲ್ಲಿ ಸಾಹಿತ್ಯ ಅಕಾಡೆಮಿ, ದಿ ನ್ಯಾಷನಲ್ ಬುಕ್ ಟ್ರಸ್ಟ್, ಪುಸ್ತಕ ಪ್ರಾಧಿಕಾರ, ರಾಜಾರಾಮ್ ಮೋಹನರಾಯ್ ಲೈಬ್ರರಿ ಹಾಗೂ ಕೆಲವು ಖಾಸಗಿ ಸಂಸ್ಥೆಗಳನ್ನು ಮುಖ್ಯವಾಗಿ ಉದಾಹರಿಸಬಹುದು.

ಗ್ರಾಮೀಣ ಮಕ್ಕಳಲ್ಲಿ ಪುಸ್ತಕ ಓದುವ ಆಸಕ್ತಿ ಮೂಡಿಸುವಲ್ಲಿ ಹಾಗೂ 'ಶಾಲೆಗೊಂದು ಗ್ರಂಥಾಲಯ' ಯೋಜನೆಯಡಿ ಬೆಂಗಳೂರಿನ ಒಂದು ಪ್ರಮುಖ ಖಾಸಗಿ ಸಂಸ್ಥೆಯ ಮುಖ್ಯಸ್ಥರು ಲಕ್ಷಾಂತರ ಅಮೂಲ್ಯ ಪುಸ್ತಕಗಳನ್ನು ದೇಣಿಗೆ ನೀಡಿ ಸಾಮಾನ್ಯ ಜನರಲ್ಲಿ ಪುಸ್ತಕ ಪ್ರೀತಿ ಹೆಚ್ಚಿಸುವಲ್ಲಿ ಯಶಸ್ವಿಯಾಗಿದ್ದಾರೆ. ನಗರ ಪ್ರದೇಶದ ಶಾಲಾ ಮಕ್ಕಳಿಗೆ ಗ್ರಂಥಾಲಯಗಳ ಕೊರತೆ ಇಲ್ಲ. ಆದರೆ ಹಳ್ಳಿಗಾಡಿನ ಮಕ್ಕಳಿಗೆ ಒಳ್ಳೆಯ ಪುಸ್ತಕಗಳನ್ನು ಓದುವ ಅವಕಾಶ ಇರುವುದಿಲ್ಲ. ಆದ್ದರಿಂದಲೇ ಈ ಯೋಜನೆ ಪ್ರಾರಂಭಿಸಿದ್ದು. ಇದಕ್ಕಾಗಿ ಅನೇಕ ಸಂಸ್ಥೆಗಳು ಈವರೆಗೆ ೧೦ ಕೋಟಿಗೂ ಹೆಚ್ಚು ರೂಪಾಯಿ ಖರ್ಚು ಮಾಡಿವೆ.

ಪ್ರಸ್ತುತ, ಆಧುನಿಕ ಜಗತ್ತಿನಲ್ಲಿ ವಿಜ್ಞಾನ, ತಂತ್ರಜ್ಞಾನ ಮುಂದುವರಿದಿರುವುದರಿಂದ ದೃಶ್ಯ, ಶ್ರವ್ಯ ಮಾಧ್ಯಮಗಳಿಂದ ಓದುವ ಹವ್ಯಾಸ ಕಡಿಮೆಯಾಗುತ್ತಿದೆ. ದಿನ ಪತ್ರಿಕೆಗಳು, ನಿಯತಕಾಲಿಕಗಳು, ಪುಸ್ತಕ, ರೇಡಿಯೋ, ಟಿವಿ, ಚಲನಚಿತ್ರ ಇವುಗಳೆಲ್ಲವೂ, ಜ್ಞಾನವನ್ನು ವೃದ್ಧಿ ಮಾಡುವ ಮಾಧ್ಯಮಗಳಾದರೂ ಎಲ್ಲಾ ಮಾಧ್ಯಮಗಳಲ್ಲೂ ಒಂದಿಲ್ಲೊಂದು ದುರ್ಬಲತೆ ಇರುವುದು ಸಹಜ.

'ಪುಸ್ತಕ ದಿನ'ದ ಆಚರಣೆ ಕೇವಲ ಗ್ರಂಥಾಲಯಗಳು, ಬುಕ್ ಕ್ಲಬ್‌ಗಳು, ಸಾಹಿತ್ಯ, ಸಂಘ, ಸಂಸ್ಥೆಗಳ ಸ್ಥಾಪನೆಗೆ ಮಾತ್ರ ಸೀಮಿತವಾಗಬಾರದು. ಅಲ್ಲದೆ ಎಲ್ಲಾ ವರ್ಗದ ಓದುಗರಿಗೆ ತಲುಪುವಂಥ ಪುಸ್ತಕಗಳು ಪ್ರಕಟವಾಗಬೇಕು. ಪುಸ್ತಕಗಳು ಸಾಮಾನ್ಯರಿಗೂ ಎಟಕುವ ಬೆಲೆಯಲ್ಲಿದ್ದು ಸರಳ ಭಾಷೆಯಲ್ಲಿರಬೇಕು.

ಪುಸ್ತಕಗಳ ಉಗಮ ಹಾಗೂ ಗ್ರಂಥಾಲಯಗಳ ಸ್ಥಾಪನೆ ಇಂದು ನಿನ್ನೆಯದಲ್ಲ. ಇದು ನಾಗರಿಕತೆಯ ಇತಿಹಾಸದಷ್ಟೇ ಪ್ರಾಚೀನ. ಪ್ರಾರಂಭದಲ್ಲಿ ಪುಸ್ತಕಗಳು ಶಿಲೆ, ಇಟ್ಟಿಗೆ, ಜೇಡಿಮಣ್ಣಿನ ಫಲಕಗಳು, ಚರ್ಮ, ಮರದ ತೊಗಟೆ, ತಾಳೆ ಓಲೆ-ಗರಿಗಳು ಮುಂತಾದವುಗಳ ರೂಪದಲ್ಲಿದ್ದು, ತದನಂತರ ಕಾಗದದ ಉತ್ಪಾದನೆ ಮತ್ತು ಮುದ್ರಣ ಯಂತ್ರದ ಸಂಶೋಧನೆಯಿಂದಾಗಿ ಮುದ್ರಿತ ಗ್ರಂಥಗಳ ರೂಪದಲ್ಲಿ ರೂಪಾಂತರಗೊಂಡು ಇಂದು ವಿದ್ಯುನ್ಮಾನ ಮತ್ತು ಮಾಹಿತಿ ತಂತ್ರಜ್ಞಾನದಲ್ಲುಂಟಾಗಿರುವ ಪ್ರಗತಿಯಿಂದ ಜ್ಞಾನ ಪ್ರಸಾರದ ಮಾಧ್ಯಮಗಳಾದ ರೇಡಿಯೋ, ಟಿ.ವಿ, ಚಲನಚಿತ್ರ, ಗ್ರಾಮಫೋನ್‌ಗಳು, ಟೇಪುಗಳು, ಫೋಟೋ ರಿಕಾರ್ಡು, ಗಣಕ ಯಂತ್ರಗಳು, ಸಿ.ಡಿ., ರೋಮಿಂಗ್, ಮಲ್ಟಿಮೀಡಿಯಾ ಮುಂತಾದ ಮಾಧ್ಯಮಗಳ ಮೂಲಕ 'ಮಾತನಾಡುವ ಪುಸ್ತಕ'ಗಳಾಗಿ ಪರಿವರ್ತನೆ ಹೊಂದಿವೆ.

ಭಾರತದಲ್ಲಿ ಗ್ರಂಥಾಲಯ ಚಳುವಳಿಯ ಪಿತಾಮಹರಾದ ಡಾ|| ಎಸ್. ಆರ್. ರಂಗನಾಥನ್ ಅವರು ಗ್ರಂಥಾಲಯದ ಸಂದೇಶವನ್ನು ಭಾರತದ ಮೂಲೆ ಮೂಲೆಗಷ್ಟೇ ಅಲ್ಲದೆ ಪಾಶ್ಚಿಮಾತ್ಯ ದೇಶಗಳಿಗೂ ಸಹ ಸಾರಿದರು. ೧೯೩೧ರಲ್ಲಿ ಸಂಚಾರಿ ಗ್ರಂಥಾಲಯ ಯೋಜನೆ ಪ್ರಾರಂಭವಾಗಲು ಹಾಗೂ ೧೯೪೮ರಲ್ಲಿ ಮದ್ರಾಸಿನಲ್ಲಿ ಗ್ರಂಥಾಲಯ ಮಸೂದೆ ಪಾಸಾಗಲು ಡಾ|| ಎಸ್. ಆರ್. ರಂಗನಾಥನ್ ಅವರೇ ಪ್ರಮುಖ ರೂವಾರಿ.

೨೧ನೇ ಪುಟಕ್ಕೆ

# ವಿಸರ್ಜನಾ ಕಾಯಿದೆ ೨೦೪೦

**ಇಡೀ ಜಗತ್ತೇ ಒಂದು ಪುಟ್ಟ ಗ್ರಾಮ, ಬಂಡವಾಳವೇ ಪ್ರಗತಿಗೆ ಮೂಲ, ಜನರು ತಮ್ಮ ಭವಿಷ್ಯತ್ತಿಗೆ ತಾವೇ ಹೊಣೆಗಾರರು, ಸರಕಾರಕ್ಕೆ ತನ್ನದೇ ಆದ ಜವಾಬ್ದಾರಿಗಳಿರುತ್ತವೆ, ಜನತೆ ಎಲ್ಲದಕ್ಕೂ ಸರಕಾರವನ್ನು ಅವಲಂಬಿಸಲಾಗದು – ಎಂಬೆಲ್ಲಾ ಹುಂಬತನದ ಮಾತುಗಳು ಈಗೀಗ ಹೆಚ್ಚು ಪ್ರಚಲಿತವಾಗುತ್ತಿವೆ. ಇವುಗಳ ರಾಜಕೀಯ ಸಾಮಾಜಿಕ ಒಳನೋಟ ಅಜಿತ್ ಪಿಳ್ಳೆ ಅವರ ಈ ವಿಡಂಬನೆಯಲ್ಲಿ ಮೂಡಿಬಂದಿದೆ.**

ಮೂಲ
**ಅಜಿತ್ ಪಿಳ್ಳೆ**

ಕನ್ನಡಕ್ಕೆ
**ನಗರಗೆರೆ ರಮೇಶ್**

**ಆ** ಹೊಸ ಕಾಯಿದೆಗೆ ಸರ್ಕಾರ ವಿಸರ್ಜನಾ ಕಾಯಿದೆ-೨೦೪೦ ಅಂತ ಹೆಸರಿಟ್ಟಿತ್ತು. ಆ ವಿಷಯ ಹೊರಬಿದ್ದ ತಕ್ಷಣವೇ ಎಲ್ಲಿ ನೋಡಿದ್ರೂ ಅದರದೇ ಮಾತು. ಆ ಮಾತುಗಳ ಮೂಲಕವೇ ಅದರ ಹಿಂದಿದ್ದ ಭಯ ಕೂಡ ಹೊರಬೀಳ್ತಿತ್ತು. ಆದರೆ ದೊಡ್ಡವರು ಹೋಗುವ ಬಾರುಗಳು, ಸ್ಟಾರ್ ಹೋಟೆಲುಗಳಲ್ಲಿ ಸಂತೋಷದ ಮಹಾಪೂರ ಹರೀತಿತ್ತು. ಶ್ರೀಮಂತರಿಗೆ ಆನಂದವೋ ಆನಂದ; ಇನ್ನು ಮುಂದೆ ದೇಶದಲ್ಲಿ ಬಡವರೇ ಇರೋದಿಲ್ಲ, ಆ ದರಿದ್ರ ಜನರ ಮುಖ ನೋಡಬೇಕಾಗಿಲ್ಲ, ಅಂತಹ 'ಬದುಕುವ ಯೋಗ್ಯತೆ ಇಲ್ಲದವರು ಸಾಯಲೇಬೇಕು' – ಈ ಮಾತು ಅವರೆಲ್ಲರ ಬಾಯಿಂದಲೂ ಹೊರಡ್ತಿತ್ತು. ಆ ಹೊಸ ಕಾಯಿದೆಯ ಪ್ರಕಾರ ಬ್ಯಾಂಕಿನಲ್ಲಿ ಸಾಕಷ್ಟು ಹಣವಿರೋದೇ ಬದುಕುವ ಯೋಗ್ಯತೆಯಾಗುತ್ತಾದ್ದರಿಂದ, ಹಣವಂತರಿಗೆ ತಾವು ಉಳೀತೀವೆಂಬ ವಿಶ್ವಾಸವಿತ್ತು. ಆ ಹಣ ಹೇಗೆ ಬಂತು ಅಂತ ಯಾರು ಕೇಳೋರೂ ಇಲ್ಲವಾದ್ದರಿಂದ ನಿರಾತಂಕದ ನಿಟ್ಟುಸಿರು.

ದೆಹಲಿಯ ಒಂದು ಪತ್ರಿಕೆಯ ಸಂಪಾದಕೀಯ ಹೀಗೆ ಹೇಳ್ತು – ''ಈ ಹಿಂದೆ ಉದ್ಯಮಪತಿಗಳು ತಮ್ಮ ಆಫೀಸುಗಳಲ್ಲಿ, ಫ್ಯಾಕ್ಟರಿಗಳಲ್ಲಿ ಕೆಲಸದವರ ಸಂಖ್ಯೆ ಕಡಿಮೆಗೊಳಿಸಲು ತೆಗೆದುಕೊಂಡ ಕೆಲವು ಕ್ರಮಗಳ ಮುಂದುವರಿಕೆಯಾಗಿರುವ ಈ ಕಾಯಿದೆಯನ್ನು ಎಲ್ಲರೂ ಸ್ವಾಗತಿಸಬೇಕು. ವ್ಯವಸ್ಥೆಗೆ ಏನೂ ಕಾಣಿಕೆಯಾಗಿ ನೀಡದಿರುವವರನ್ನು ವ್ಯವಸ್ಥೆ ಪೋಷಿಸಬೇಕಾಗಿಲ್ಲ.'' ಅಷ್ಟೆ ಅಲ್ಲ ''ವ್ಯವಸ್ಥೆಯನ್ನೇ ಅವಲಂಬಿಸಿ ಇದುವರೆವಿಗೂ ಪರಾವಲಂಬಿಗಳಾಗಿದ್ದವರನ್ನು ಪೋಷಿಸಿದ್ದು ಸಾಕು. ಈಗಾಗಲೇ ಆಹಾರ ಮತ್ತು ಔಷಧಿಗಳ ಮೇಲಿನ ಸಬ್ಸಿಡಿಗಳನ್ನು ತೆಗೆದುಹಾಕಿರುವುದರಿಂದ, ದೇಶದ ಜನಸಂಖ್ಯೆ ಸ್ವಲ್ಪ ಹತೋಟಿಗೆ ಬಂದಿದೆ. ಆದರೆ ಅದು ಸಾಲದು. ತೆರಿಗೆದಾರರು ಸುಖ ಜೀವನವನ್ನು ನಡೆಸಬೇಕಾದರೆ ಇಂಥ ಕಾಯಿದೆಯ ಅವಶ್ಯಕತೆ ಇತ್ತು'' ಅಂತಲೂ ಬರೀತು.

ಆದರೆ ಆ ನಗರಗಳ ಕೊಳೆಗೇರಿಗಳಲ್ಲಿ ಗುಡಿಸಲುಗಳ ನಡುವೆ ಈ ಕಾಯಿದೆಯ ವಿಷಯ ಹರಡ್ತಿದ್ದಂತೆ ಜನರಲ್ಲಿ ಭಯದ ಗಂಟೆ ಮೊಳಗಲು ಶುರುವಾಯ್ತು. ಯಾರ್‍ಯಾರನ್ನ ಇಲ್ಲವಾಗಿಸಬೇಕು ಅಂತ ನಿರ್ಧಾರ ಮಾಡಿ ಪಟ್ಟಿ ಮಾಡೋದಕ್ಕೆ ಒಂದು ಸರ್ವೇ ನಡಸ್ತಾರಂತೆ, ಅಂತ ತಿಳಿದಮೇಲಂತೂ ತಮ್ಮ ದಿನಗಳು ಇನ್ನು ಹೆಚ್ಚಿಲ್ಲ ಅನ್ನೋದು ಅಲ್ಲಿನ ಎಲ್ಲ ಜನರಿಗೂ ಖಾತ್ರಿಯಾಯ್ತು. ಅವರು ಯಾರೂ ತೆರಿಗೆದಾರರಾಗಿಲ್ಲದಿದ್ದರಿಂದ ಅವರೇ ಮೊದಲ ಬಲಿ. ಅವರು 'ಬದುಕಬಹುದು' ಪಟ್ಟಿಯಲ್ಲಿ ಸೇರಬೇಕಾದ್ರೆ ಯಾರಾದ್ರೂ ತೆರಿಗೆದಾರರ ಹತ್ತಿರ ಖಾಯಂ ಕೆಲಸದಲ್ಲಿದ್ದ ಹಾಗೆ ಒಂದು ಪ್ರಮಾಣ ಪತ್ರ ಪಡೀಬೇಕಾಗಿತ್ತು.

ತೆರಿಗೆದಾರರಲ್ಲಿ ಮಾತ್ರ ಈ ಹೊಸ ಕಾಯಿದೆಯಿಂದಾಗಿ ಒಂದು ಹೊಸ ಆತ್ಮವಿಶ್ವಾಸವೇ ಹುಟ್ಟಿತ್ತು. ಈಗಾಗಲೇ ಚಾಲ್ತಿಯಲ್ಲಿದ್ದ 'ಯೋಗ್ಯರು ಮಾತ್ರ ಬದುಕಬಲ್ಲರು' ಅನ್ನೋ ಮಾತು 'ಹಣವಂತರು ಮಾತ್ರ ಬದುಕಬಲ್ಲರು' ಅನ್ನೋ ಮಾತಿಗೆ ದಾರಿಮಾಡಿಕೊಟ್ಟಿತ್ತು. ಸಮಾಜಕ್ಕೆ ಏನೂ ಕೊಡುಗೆ ನೀಡದವರನ್ನು ಇನ್ನು ಮುಂದೆ ಸಹಿಸೋದು ಸಾಧ್ಯವಿಲ್ಲ ಅನ್ನೋದು ಜನಪ್ರಿಯ ಅಭಿಪ್ರಾಯವಾಗಿತ್ತು. ತಮ್ಮನ್ನ ತಾವು ನೋಡಿಕೊಳ್ಳೋಕೆ ಸಾಧ್ಯವಿಲ್ಲದವರು ಸಾಯೋದೇ ಸರಿ ಅನ್ನೋದನ್ನ ಎಲ್ಲ ಹಣವಂತರೂ ಒಪ್ಪುತ್ತಿದ್ದರು.

'ಬಲಪಂಥೀಯ ಆದರ್ಶರಾಜ್ಯ'ದ ಗುರುತುಗಳನ್ನು ಈ ಕಾಯಿದೆಯಲ್ಲಿ ಸ್ಪಷ್ಟವಾಗಿ ಕಂಡ ಒಬ್ಬ ಲೇಖಕಿ ಹೀಗೆ ಬರೆದಳು : ''ಐವತ್ತು ವರ್ಷಗಳ ಹಿಂದೆ ಒಂದು ಅಣೆಕಟ್ಟು ಕಟ್ಟಬೇಕಾದರೆ ಅದರಿಂದ ಎಷ್ಟು ಜನ ಮನೆ ಮಠ ಕಳೆದುಕೊಳ್ಳುತ್ತಾರೆ ಎಂದು ಲೆಕ್ಕ ಹಾಕುತ್ತಾ ಸಮಯ ವ್ಯರ್ಥಮಾಡುತ್ತಿದ್ದೆವು. ಅವರಿಗೆ ಒಂದು ದಾರಿ ತೋರಿಸಬೇಕಾಗಿದೆ ಎಂಬ ನೆಪದಲ್ಲಿ ಹಣವೂ ಪೋಲಾಗುತ್ತಿತ್ತು. ಹತ್ತು ಮಿಲಿಯನ್ ಜನರ ಒಳಿತಿಗಾಗಿ ಒಂದು ಮಿಲಿಯನ್ ಜನ ತ್ಯಾಗಮಾಡಬೇಕಾಗಿದೆ ಎಂದವರನ್ನು ಮಾನವ ವಿರೋಧಿಗಳು ಎಂದು ಕರೆಯಲಾಗುತ್ತಿತ್ತು. ಆದರೆ ಅವರ ಮಾತುಗಳಲ್ಲಿ ಎಷ್ಟು ಸತ್ಯವಿದೆಯೆಂಬುದು ಈಗ ಸ್ಪಷ್ಟವಾಗುತ್ತಿದೆ.''

ಏನೂ ಇಲ್ಲದವರು ತಮ್ಮ ವಿಧಿಯನ್ನು ಒಪ್ಪಿಕೊಂಡು ಸಮಾಜದ ಪ್ರಗತಿಯ ದಾರಿಯಿಂದ ದೂರ ನಡೆಯೋದೇ ಒಳ್ಳೇದು ಅಂತ ಎಲ್ಲ ಚಿಂತಕರೂ ಹೇಳೋಕೆ ಶುರುಮಾಡಿದರು. 'ಒಳ್ಳೆಯ ನಾಳೆಗಳಿಗಾಗಿ ಇಂದು ಬಲಿದಾನ' 'ಬದುಕು ಕಷ್ಟ, ನನಗೆ ಸಾವೇ ಇಷ್ಟ' – ಈ ರೀತಿಯ ಘೋಷಣೆಗಳು ನಗರದ ಮುಖ್ಯ ಪ್ರದೇಶಗಳಲ್ಲಿ ಕಾಣಿಸಿಕೊಂಡವು.

ಇಂಥಾ ಕಾಯಿದೆ ತರೋದಕ್ಕೆ ಮತ್ತೊಂದು ಮುಖ್ಯ ಕಾರಣಾನೂ ಇತ್ತು – ಹೊಸ ತಂತ್ರಜ್ಞಾನದ ಫಲವಾಗಿ ಸರ್ಕಾರ ಅತಿ ಶಕ್ತಿವಂತವಾಗಿತ್ತು. ಅದನ್ನ ಎದುರಿಸಿ ನಿಲ್ಲಬಲ್ಲ ಜನ ಯಾರೂ ಇರಲಿಲ್ಲ. ಹರತಾಳಗಳು, ಮುಷ್ಕರಗಳು ಹಳೆಯಕಾಲದ ಮಾತಾಗಿದ್ದವು. ಈಗ ಪೊಲೀಸರ ಹತ್ತಿರವಿರೋ ಅತ್ಯಾಧುನಿಕ ಆಯುಧಗಳಿಂದ ಅದೆಂಥಾ ಚಳುವಳಿಯನ್ನೇ ಆಗಲಿ ಹತ್ತಿಕ್ಕೋದು ಸುಲಭವಾಗಿತ್ತು. ರಾಜಕೀಯ ನಾಯಕರು ತಮ್ಮ ಭಾಷಣಗಳಲ್ಲಿ ಬಡವರ ಬಗ್ಗೆ ಕಾಳಜಿಯೇನೂ ತೋರಿಸಬೇಕಾಗಿರಲಿಲ್ಲ. ಇಪ್ಪತ್ತು ವರ್ಷಗಳ ಹಿಂದೆ ತೆರಿಗೆದಾರರಿಗೆ ಮಾತ್ರ ಮತದಾನದ ಹಕ್ಕು ಅಂತ ಮಾಡಿದ್ದ ಕಾನೂನಿನಿಂದ ಮತದಾರರಲ್ಲದವರ ಬಗ್ಗೆ ಅವರು ಮಾತನಾಡೋ ಕೆಲಸವೇ ಇರಲಿಲ್ಲ.

ಹಣವಿದ್ದವರು ಮಾತ್ರ ತುಂಬಾ ಖುಷಿಯಾಗಿದ್ದರು. 'ಭೂಮಿಯ' ಕೊಳಕು ಅಂತ ಅವರು



ಕರೀತಿದ್ದ ಬಡವರು ಇನ್ನು ಮುಂದೆ ಕಾಣದೇ ಹೋಗಿಬಿಡ್ತಾರೆ ಅನ್ನೋದೇ ಅವರ ಸಂತೋಷಕ್ಕೆ ಕಾರಣವಾಗಿತ್ತು. ಎಲ್ಲೋ ಕೆಲವರು ಮಾತ್ರ ಇದು ತುಂಬಾ ಅಮಾನವೀಯ ಕಾಯಿದೆ ಅಂತ ಹೇಳಿದರೂ, ಇದರಿಂದ ದೇಶದ ಪ್ರಗತಿ ಸಾಧ್ಯವಾಗುತ್ತೆ ಅಂತ ಸರ್ಕಾರ ಹೇಳಿದಾಗ ಅವರೂ ಸುಮ್ಮನಾಗಿಬಿಟ್ಟರು. ದೇಶದ ಸರ್ವತೋಮುಖ ಅಭಿವೃದ್ಧಿ ಸಾಧ್ಯವಾಗಬೇಕಾದರೆ ಕೆಲವರು ತಮ್ಮ ಬೆಲ್ಟುಗಳನ್ನು ಬಿಗಿಗೊಳಿಸಬೇಕು ಅನ್ನೋ ಮಾತನ್ನು ಯಾರು ತಾನೆ ನಿರಾಕರಿಸೋಕೆ ಸಾಧ್ಯ ? 'ಬದುಕಬಹುದು' ಪಟ್ಟಿಯಲ್ಲಿ ಸೇರ್ತೀವಿ ಅನ್ನೋ ಖಾತ್ರಿ ಇರೋ ಜನಕ್ಕೆ ತಮ್ಮ ಬೆಲ್ಟುಗಳನ್ನ ಬಿಗಿಗೊಳಿಸಬೇಕಾಗಿಲ್ಲವಲ್ಲಾ ಅನ್ನೋದೇ ಸಂತೋಷದ ವಿಷಯವಾಗಿತ್ತು.

ಅದು ದೆಹಲಿಯ ಹೊರವಲಯದ ಸೋನೇಪಟ್. ಅಲ್ಲಿ ಒಂದು ಕೊಳೆಗೇರಿ. ಮಾಧವ ಅಲ್ಲಿರೋ ಸಾವಿರಾರು ಜನರಲ್ಲಿ ಒಬ್ಬ. ನಗರದ ಆ ತುದಿಯಲ್ಲಿನ ಒಂದು ಫ್ಯಾಕ್ಟರಿಯಲ್ಲಿ ಇತ್ತೀಚಿನವರೆಗೂ ಕಾವಲುಗಾರನಾಗಿದ್ದವನು ಒಂದು ವಾರದ ಕೆಳಗೆ ತನ್ನ ಕೆಲಸವನ್ನು ಕಳಕೊಂಡಿದ್ದ. ಸಂಬಳವೂ ಇಲ್ಲದೆ ಕೆಲಸ ಮಾಡೋದಕ್ಕೂ ಸಿದ್ಧ ಅಂತ ಅವನು ಎಷ್ಟೇ ಗೋಗರೆದರೂ ಆ ಫ್ಯಾಕ್ಟರಿ ಮಾಲೀಕನಿಗೆ ಅವನ ಮೇಲೆ ಕರುಣೆ ಹುಟ್ಟಲಿಲ್ಲ. ಹೀಗಾಗಿ ಮುಂದಿನ ವರ್ಷ 'ಸಾಯಬೇಕಾದವರು' ಪಟ್ಟಿಗೆ ಮಾಧವನೂ ಸೇರೋದು ಖಚಿತವಾಗಿತ್ತು.

ಆ ಕಾಯಿದೆಯ ಎಲ್ಲ ವಿವರಗಳನ್ನು ಅವನು ತಿಳ್ಕೊಂಡಿದ್ದ. ಕೆಲವರ ಪ್ರಕಾರ ಆಗಲೇ ಇಪ್ಪತ್ತೊಂದನೇ ಶತಮಾನ ಶುರುವಾಗಿದ್ದು ಕಳೆದ ಶತಮಾನದ ಕೊನೆಯಲ್ಲಿ ಮತ್ತು ಹೊಸ ಶತಮಾನದ ಪ್ರಾರಂಭದಲ್ಲಿ ಜಾರಿಗೆ ಬಂದ ಹೊಸ ನೀತಿಗಳು ಈ ಕಾಯಿದೆಗೆ ಆಧಾರವಾಗಿತ್ತೆಂದು ಎಲ್ಲರೂ ಹೇಳ್ತಿದ್ರು. ದೇಶದ ಅಭಿವೃದ್ಧಿಗೆ ಮುಖ್ಯವಾದ ಅಡ್ಡಿ ಬಡತನದ ರೇಖೆಯ ಕೆಳಗಿರೋ ಜನ. ಅವರ ಬಡತನವಂತೂ ನೀಗೋ ಅಂಥದಲ್ಲ, ಅವರೇ ಇಲ್ಲವಾದ್ರೆ ಪ್ರಗತಿ ಯಾವ ಅಡ್ಡಿಯೂ ಇಲ್ಲದೆ ಸುಲಭವಾಗಿ ಸಾಧ್ಯವಾಗುತ್ತೆ. ಅವರ ಏಳಿಗೆಗಾಗಿ ಅಂತ ಇದ್ದ ಯೋಜನೆಗಳ ಮೇಲೆ ವೃಥಾ ಹಣ ಖರ್ಚು, ಬದಲಾಗಿ, ಶ್ರೀಮಂತರಿಗೆ ಬೇಕಾದ, ಅವರಿಗೆ ಇಷ್ಟವಾದ ಎಕ್ಸ್‌ಪ್ರೆಸ್ ಹೆದ್ದಾರಿಗಳಂಥಾ ಯೋಜನೆಗಳಿಂದ ನಿಜವಾದ ಬೆಳವಣಿಗೆ ಸಾಧ್ಯ ಅಂತ ಎಲ್ಲರೂ ಒಪ್ತಿದ್ರು. 'ಯಾರಿಗೆ ಹಣ ಕೊಟ್ಟು ಕೊಳ್ಳೋಕಾಗೋದಿಲ್ವೋ ಅವರಿಗೆ ಏನೂ ಸಿಗಬೇಕಾಗಿಲ್ಲ' ಅನ್ನೋದು ಸರ್ವಸಮ್ಮತ ಸೂತ್ರ ಆಯ್ತು. ಸರ್ಕಾರಿ ಆಸ್ಪತ್ರೆಗಳು ಮುಚ್ಚಿ ಹೋಗಿದ್ದು ಅಥವಾ ಖಾಸಗಿಯವರಿಗೆ ವಂಚಿಸಿ ಕೊಡಲಾಗಿತ್ತು; ರೈಲು, ಬಸ್ಸು – ಹೀಗೆ ಪ್ರಯಾಣದ ಸಾಧನಗಳೂ ಖಾಸಗಿಯವರ ಪಾಲಾಗಿದ್ದವು. ಸಾಮಾನ್ಯರು ಹಣ ತೆತ್ತು ಔಷಧಿ ಕೊಳ್ಳೋಕಾಗೋಲ್ಲ; ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗೋ ಹಾಗೂ ಇರಲಿಲ್ಲ, ಕರೆಂಟು, ನೀರು – ಇವೆಲ್ಲ ಸಹ ಜಾಸ್ತಿ ಹಣ ಕೊಟ್ರೆ ಮಾತ್ರ ಸಿಗ್ತಿದ್ದವು.

ಆದ್ರೆ ಅದೆಲ್ಲಾ ಹಿಂದಿನ ಮಾತು, ಈ ಹೊಸ ಕಾಯಿದೆ ಈ ಎಲ್ಲ ಕ್ರಮಗಳನ್ನೂ ಮೀರಿ ಹೋಗಿತ್ತು. ಬದುಕು ಸಾವುಗಳಿಗೆ ಹೊಸದಾಗಿ ಒಂದು ವ್ಯಾಖ್ಯಾನ ಬಂದಿತ್ತು. ಆದರೂ ಎಷ್ಟಾದರೂ ಸರ್ಕಾರದಲ್ಲಿರೋರೂ ಮನುಷ್ಯರೇ ತಾನೇ – ಹಾಗಾಗಿ, 'ಸಾಯಬೇಕಾದವರು' ಸುಖವಾದ ಸಾವನ್ನು ಪಡೆಯಲಿ ಅನ್ನೋದು ಅವರ ಖಾತ್ರಿಯಾಗಿತ್ತು; ಅದಕ್ಕೆ ಬೇಕಾದ ವ್ಯವಸ್ಥೆ ಸಹ ಸಿದ್ಧವಾಗಿತ್ತು. ಒಂದು ಹೊಸ ಔಷಧಿ ಈಗಾಗಲೇ ನಾಯಿ, ಹಂದಿಗಳ ಮೇಲೆ ಪ್ರಯೋಗವಾಗಿದ್ದು ಅದನ್ನೇ ಇನ್ನೂ ಮುಂದೆ ಮನುಷ್ಯರ ಮೇಲೂ ಉಪಯೋಗಿಸಿ ಅವರಿಗೆ ಸುಖಮರಣ ಪ್ರಾಪ್ತವಾಗೋ ಖಾತ್ರಿಯಾಗಿತ್ತು.



ಪರಿ

ಬಯಲಾಟೆ

ಹಾಡುವ ಕೋಗಿಲೆ ಹಾಡದೆ
ಸುಮ್ಮನೆ ಕುಳಿತಿತ್ತು
ಹಾಡಲು ಬಾರದ ಮರಕುಟಿಗ ಒದರಾಡುತ್ತಿತ್ತು
ಹಣ್ಣು ತುಂಬಿದ ಮಾಮರ ಬಾಗಿ ನಿಂತಿತ್ತು
ಹಣ್ಣಿರದ ಬೋಳುಮರ ನೆಟ್ಟಗೆ ನಿಂತಿತ್ತು
ಬಂಡೆಗಲ್ಲಿನ ಕೆಳಗೆ ಗೊದಕಪ್ಪೆ
ದಿನವಿಡೀ ವಟಗುಟ್ಟುತ್ತಿತ್ತು
ಮುಳ್ಳು ಬೇಲಿಯ ಜಾತಿ ಸದ್ದಿಲ್ಲದೆ ಬೇಟೆ
ಮೆಲ್ಲುತ್ತಿತ್ತು
ಒಂದೇ ಒಂದು ಹೂ-ತೊಟ್ಟ ರಕ್ತಕೆಂಪಿನ ಮುಳ್ಳು
ಗುಲಾಬಿ ಗಿಡ
ಅಂಗಳದ ಮಧ್ಯೆ ಮೆರೆಯುತ್ತಿತ್ತು !
ಮೂಲೆಯಲಿ ಮುತ್ತುಮಲ್ಲಿಗೆ ಗಿಡದ ಮೈತುಂಬಾ
ಬೆಳ್ಳಗೆ ಬೆಳದಿಂಗಳು ಹರಡಿತ್ತು.

ಪ್ರಮೀಳಾ ಚೊಕ್ಕಾಡಿ
ಫ್ರಾಂಕೋವಿಲ್ಲ, ಚರ್ಚ್ ರಸ್ತೆ, ಬೆಳ್ತಂಗಡಿ -೫೭೭ ೨೧೪

ಇನ್ನೋ ಹನ್ನೊಂದು ತಿಂಗಳು, ಇಪ್ಪತ್ತು ದಿನಗಳಲ್ಲಿ ಮಾಧವ ಒಂದು ಸರಿಯಾದ ಕೆಲಸ ಸಂಪಾದಿಸಲೇಬೇಕಾಗಿತ್ತು. ಅದೇ ಯೋಚನೆಯಲ್ಲೇ ಅವನು ಪಾಳು ಬಿದ್ದ ಮನೆಯಂತಿದ್ದ ತನ್ನ ಕೋಣೆಯಲ್ಲಿ ಚಾವಣಿ ಮೂಲಕ ಬೆಳಗಿನ ನಕ್ಷತ್ರಗಳನ್ನು ನೋಡ್ತಾ ಮಲಗಿದ್ದ. ಇಂಥಾ ಭಯಂಕರ ಕಾಯಿದೆ ಮಾಡಿದ್ರೂನೂ ಯಾರೂ ಅದರ ವಿರುದ್ಧ ಚಕಾರ ಎತ್ತುತ್ತಲೇ ಇಲ್ವಲ್ಲಾ ಅನ್ನೋದು ಅರ್ಥವಾಗದ ವಿಷಯವಾಗಿತ್ತು. ಒಟ್ಟು ಜನಸಂಖ್ಯೆಯಲ್ಲಿ ಶೇಕಡ ಎಪ್ಪತ್ತರಷ್ಟು ಜನರನ್ನು ಇಲ್ಲವಾಗಿಸೋ ಕಾನೂನದು. ಸಾಯಬೇಕಾಗುತ್ತಲ್ಲ ಅನ್ನೋ ಭಯದ ಜತೆ ಜತೆಯೇ ತಮ್ಮ ಮೇಲೆ ಯಾವ ಪೊಲೀಸು ನಿಗಾವಹಿಸಿದಾನೋ ಅನ್ನೋ ಹೆದರಿಕೆ ಬೇರೆ. ಯಾರಾದರೂ ಸ್ವಲ್ಪ ದನಿ ಎತ್ತಿ ಮಾತನಾಡೋರು ಸಿಕ್ಕಿದರೆ ಅವರು ಮುಂದಿನ ವರ್ಷದವರೆಗೂ ಕಾಯಬೇಕಾಗಿರಲಿಲ್ಲ. ಅವತ್ತಿನಿಂದಲೇ ಅವರು ಕಾಣೆಯಾದವರಾಗಿಬಿಡ್ತಿದ್ದು. ಚಿತ್ರಹಿಂಸೆ ಕೊಟ್ಟು ಅವರನ್ನ ಸಾಯಿಸ್ತಿದ್ರು ಅಂತ ಎಲ್ಲೆಲ್ಲೂ ಸುದ್ದಿ. ಹೀಗಾಗಿ ಎಲ್ಲಿ ನೋಡಿದರೂ ಮೌನವೇ ಮೌನ.

ಬಿಟ್ಟಿಯಾಗಿ ಹೆಂಡ ಸಿಕ್ತಿದ್ದ ಸರ್ಕಾರಿ ಅಂಗಡಿಗಳಿಗೆ ಬಂದವರೂ ಯಾರೂ ಈ ಕಾಯಿದೇನ ಟೀಕಿಸೋ ಗೋಜಿಗೇ ಹೋಗ್ತಿರಲಿಲ್ಲ. – ಅಮಲು ನೆತ್ತಿಗೇರಿದಾಗಲೂ ಬದಲಾಗಿ ಎಲ್ಲರೂ ಅದನ್ನ ಹೊಗಳೋರೇ. ''ನಮ್ಮ ಪ್ರಧಾನಿಗಳು ಬಲು ಬುದ್ಧಿವಂತರು. ಅವರು ಏನೇ ಮಾಡಿದ್ರೂ ದೇಶಕ್ಕೋಸ್ಕರವೇ ಮಾಡ್ತಾರೆ. ದೇಶಕ್ಕೋಸ್ಕರ ನಾವೆಲ್ಲಾ ತ್ಯಾಗಮಾಡಬೇಕು ಅಂತ ಕೇಳ್ಕೊಂಡಿದಾರೆ. ನಾವು ಅವರ ಮಾತಿನಂತೆ ನಡೀಬೇಕು ಅಷ್ಟೆ.'' ಎಲ್ಲರಿಂದಲೂ ಇಂಥವೇ ಮಾತುಗಳು ಕೇಳಿ ಮಾಧವನಿಗೆ ಸೋಜಿಗವಾಗಿತ್ತು. ಅದು ಯಾಕೆ ಎಲ್ಲರೂ ಹೀಗೆ ಮರುಮಾತಾಡದೆ ಬಲಿಗೆ ಈಡಾಗೋ ಕುರಿಗಳ ಥರ ಸಾಯೋಕೆ ಸಿದ್ಧರಾಗ್ತಿದಾರೆ ಅನ್ನೋದು ಪೂರ್ತಿ ಅರ್ಥವಾಗ್ತಿರಲಿಲ್ಲ. ಆದರೆ ಆ ಅಂಗಡಿಗಳಲ್ಲಿ ಸಿಗ್ತಾ ಇದ್ದ ಬಿಟ್ಟಿ ಹೆಂಡದಲ್ಲಿ ಅದೆಂಥದೋ ಪದಾರ್ಥ ಬೆರೆಸಿರೋದ್ರಿಂದ ಅದನ್ನು ಕುಡಿದ ಜನರು ಪ್ರತಿರೋಧದ ಗುಣವನ್ನೇ ಕಳೆದುಕೊಳ್ತಾರೆ ಅನ್ನೋದು ಈಗಾಗಲೇ ಎಲ್ಲ ಕಡೆ ತಿಳಿದಿತ್ತು. ಆ ಮಾತು ಮಾಧವನಿಗೆ ತಲುಪಿತ್ತು. ಆದರೆ ಆ ಪದಾರ್ಥ ಆ ಜನರ ಮನಸ್ಸಿನೊಳಗಿನ ಸಾವಿನ ಭಯವನ್ನು ಮಾತ್ರ ಹೊರದಬ್ಬಿರಲಿಲ್ಲ.

ಹೊಸ ಕಾಯಿದೆಯ ಬಗ್ಗೆ ಸರ್ಕಾರದ ಪ್ರಕಟಣೆ ಹೊರ ಬಂದಾಗಿನಿಂದ ಮಾಧವ ಅದೇನೋ ಅಂತೂ ಕುಡಿಯೋದನ್ನು ಬಿಟ್ಟಿದ್ದ. ಆದರೆ ಅದೇನು ಅಷ್ಟು ಸುಲಭದ ಕೆಲಸ ಆಗಿರಲಿಲ್ಲ. ತೆರಿಗೆ ಕೊಡದ ಜನರೆಲ್ಲಾ ಇಂತಿಷ್ಟು ಕುಡಿಲೇಬೇಕು ಅನ್ನೋ ಕಾನೂನು ಇತ್ತು. ಅದಕ್ಕೆ ಮಾಧವ ಬಾರ್‌ಗೇನೋ ಹೋಗ್ತಿದ್ದ. ಆದರೆ ಅಲ್ಲಿ ಕುಡಿದಂತೆ ನಾಟಕ ಮಾಡ್ತಿದ್ದ. ಅಮಲೇರಿದವನಂತೆ ಮಾತಾಡ್ತಿದ್ದ. ಹಿಂದಿನ ದಿನ ಅವನ ನೆರೆಯ ಕನ್ನಯ್ಯ ಕುಡಿತದ ಮಧ್ಯ ಹೇಳಿದ್ದ ''ಮಾಧವಾ ! ವಿಷಯ ಗೊತ್ತಾಯ್ತ! ಇನ್ನು ಕೇವಲ ಐದೇ ವರ್ಷದಲ್ಲಿ ನಮ್ಮ ದೇಶ ಅತಿ ಶ್ರೀಮಂತ ದೇಶ ಆಗುತ್ತಂತೆ. ಅಮೆರಿಕಾಗಿಂತಲೂ ಹಣವಂತ ದೇಶ ! ಅಷ್ಟು ಹೊತ್ತಿಗೆ ಇಲ್ಲಿನ ಜನಸಂಖ್ಯೆ ೧೯೫೦ರಲ್ಲಿ ಎಷ್ಟಿತ್ತೋ ಅಷ್ಟಕ್ಕೆ ಇಳಿಯುತ್ತಂತೆ. ಆಗ ಎಲ್ಲರೂ ಎಷ್ಟು ಸುಖವಾಗಿರಬಹುದು ಅಲ್ವಾ !'' ಮಾಧವ ಏನೂ ಮಾತಾಡದೆ ಸುಮ್ಮನೆ ತಲೆಯಾಡಿಸಿದ್ದ. ಕನ್ನಯ್ಯ ಈ ಮಾತುಗಳನ್ನು ಹೇಳೋವಾಗ ಆ ಕಡೆ ಈ ಕಡೆ ನೋಡ್ತಾಲೇ ಇದ್ದ. ಯಾರಾದರೂ ಪೊಲೀಸ್ ಅಲ್ಲೇ ಮಫ್ತಿಯಲ್ಲಿದ್ದು, ತನ್ನ ಮಾತು ಕೇಳಿಸಿಕೊಂಡು, ತನ್ನ ವಿಷಯ ಮೇಲಧಿಕಾರಿಗಳಿಗೆ ತಿಳಿಸಿದರೆ ಆಗ ತಾನು 'ಬದುಕಬಹುದು' ಪಟ್ಟಿಗೆ

ಸೇರಬಹುದು ಅನ್ನೋ ಆಸೆ ಅವನಿಗೆ. ಈ ವಿಷಯ ಮಾಧವನಿಗೂ ಗೊತ್ತಿದ್ದರಿಂದ ಕನ್ನಯ್ಯನ ಜತೆ ವಾದ ಮಾಡಿ ಅವನು ಹೇಳೋದೆಲ್ಲಾ ಸುಳ್ಳು ಅಂತ ಹೇಳೋಣ ಅನ್ನಿಸಿದರೂ, ತನ್ನ ಮಾತು ಅದೇ ಮಫ್ತಿ ಪೋಲೀಸರ ಕಿವಿಗೆ ಬೀಳಬಹುದು ಅಂತ ಹೆದರಿ ಸುಮ್ಮನಾದ.

ಎಲ್ಲರ ಕರ್ತವ್ಯವಾದ ಕುಡಿತದಲ್ಲಿ ತಾನು ಭಾಗವಹಿಸದೇ ಇದ್ದದ್ದರಿಂದ ತನಗೆ ಸರಿಯಾಗಿ ಯೋಚನೆ ಮಾಡೋದಕ್ಕೆ ಸಾಧ್ಯವಾಗ್ತಿದೆ ಅನ್ನೋದನ್ನ ಮಾಧವ ಕಂಡುಕೊಂಡ. ಹೀಗೆ ಯೋಚನೆ ಮಾಡಿದ್ರಿಂದ ಈ ಕಾಯಿದೆ ಅವನ ನೆನಪಿಗೆ ಬಂದಾಗಲೆಲ್ಲಾ ಅವನಿಗೆ ಮೈ ಉರೀತಿತ್ತು. ಅಷ್ಟೇ ಅಲ್ಲ, ತನ್ನ ಸುತ್ತಲೂ ಇದ್ದ ಇಷ್ಟೊಂದು ಜನ ಅದರ ಬಗ್ಗೆ ಏನೂ ಹೇಳದೇ ತಲೆಬಗ್ಗಿಸೋದನ್ನ ಕಂಡರೆ ಆಶ್ಚರ್ಯವೂ ಆಗ್ತಿತ್ತು.

ಮೇಲ್ನೋಟಕ್ಕೆ ಏನೂ ಕಾಣಿಸದಿದ್ರೂ ಎಲ್ಲಾ ಗೊಂದಲಮಯವಾಗಿತ್ತು. ಆ ಕೊಳೆಗೇರಿಯ ಹೆಚ್ಚು ಜನರು ಸಣ್ಣಪುಟ್ಟ ಕೆಲಸಗಳನ್ನ ಮಾಡಿಕೊಂಡಿದ್ದವರೇ. ಯಾರಿಗೂ ಸರಿಯಾದ ಕೆಲಸ ಇರಲಿಲ್ಲ. ಅವು ಅವರನ್ನ ಸಾವಿನ ದವಡೆಯಿಂದ ಪಾರುಮಾಡೋ ಕೆಲಸಗಳಾಗಿರಲಿಲ್ಲ. ಅವರಿಗೆ ಯಾರಾದರೂ ಕೆಲಸ ಕೊಟ್ಟು ಅವರನ್ನ ಉಳಿಸೋದಕ್ಕೆ ಪ್ರಯತ್ನಪಟ್ಟರೆ, ಅವರ ಮೇಲೆ ಒಂದು ತೆರಿಗೆ ಹಾಕಲಾಗ್ತಿತ್ತು. ಹೀಗಾಗಿ ಯಾರೂ ಖಾಯಂ ಕೆಲಸ ಪಡೆಯೋ ಹಾಗೇ ಇರಲಿಲ್ಲ. ಇಂಥಾ ಹಂಗಾಮಿ ಕೆಲಸಗಾರರೆಲ್ಲಾ ಸಾಯೋದಂತೂ ಖಚಿತವಾಗಿದ್ದು ಅವರಿಗೆ ತಾವು ಉಳಿಯೋದು ಹೇಗೆ ಅನ್ನೋದೇ ಉತ್ತರವಿಲ್ಲದ ದೊಡ್ಡ ಪ್ರಶ್ನೆಯಾಗಿತ್ತು.

ಒಂದು ಸಂತೋಷದ ಸಂಗತಿ ಎಂದರೆ ಮಾಧವನಿಗೆ ಮದುವೆಯಾಗಿರಲಿಲ್ಲ. ಮೊದಲೇ ಮದುವೆ ಬಗ್ಗೆ ಹೆಚ್ಚು ಯೋಚನೆ ಮಾಡದ ಮಾಧವ, ಐದು ವರ್ಷಗಳ ಹಿಂದೆ ತೆರಿಗೆದಾರರು ಮಾತ್ರ ಮದುವೆಯಾಗಿ ಮಕ್ಕಳನ್ನು ಪಡೆಯಬಹುದು ಅಂತ ಕಾನೂನು ಬಂದಮೇಲೆ ಅದರ ಯೋಚನೆ ಪೂರ್ತಿ ಬಿಟ್ಟ. ಆದರೆ ಅದರಿಂದ ಮದುವೆಯಾಗದವರೆಲ್ಲಾ ಮೈ ಸುಖದಿಂದ ದೂರವಿರಬೇಕಿತ್ತು ಅಂತೇನೂ ಇಲ್ಲ. ಸರ್ಕಾರವೇ ವೇಶ್ಯಾವಾಟಿಕೆಯನ್ನು ನಡೆಸ್ತಿತ್ತಾದ್ದರಿಂದ ಅವರಿಗೆ ಬೇಕಾದಾಗ ಆ ಸುಖ ಪಡೆಯಬಹುದಾಗಿತ್ತು – ಅದೂ ಬಿಟ್ಟಿಯಾಗಿ. ಕೊಳೆಗೇರಿ ಜನ ಮರ್ಯಾದಸ್ಥರ ಮನೆಗಳ ಹೆಂಗಸರ ಮೇಲೆ ಕಣ್ಣು ಹಾಕದಿರಲಿ ಅಂತ ಸರ್ಕಾರವೇ ಈ ವ್ಯವಸ್ಥೆ ಮಾಡಿತ್ತು.

ಬೇರೆ ಏನೂ ಇಲ್ಲದಿದ್ದರೂ, ಹೆಂಡ, ಮೈ ಸುಖ ಎರಡೂ ಬಿಟ್ಟಿಯಾಗಿ ಸರ್ಕಾರದ ಖರ್ಚಿನಲ್ಲಿ ಸಿಗ್ತಿತ್ತು. ಆದರೆ ಊಟ, ನೀರು ಮತ್ತು ಔಷಧಿಗಳು ಮಾತ್ರ ವಿಪರೀತ ಬೆಲೆ. ಹಣವಿದ್ದರೆ ಆರೋಗ್ಯ ಅಂತ ಅರ್ಧಶತಮಾನದ ಹಿಂದೆ ಕೆಲವರು ವೈದ್ಯರು ಶುರು ಮಾಡಿದ ಪದ್ಧತಿ ಈಗ ರಾಷ್ಟ್ರೀಯ ನೀತಿ ಆಗಿತ್ತು. ಖಾಯಿಲೆ ಎಷ್ಟು ಗಂಭೀರ ಅನ್ನೋದರ ಮೇಲೆ ಎಷ್ಟು ಖರ್ಚು ಅನ್ನೋದು ನಿಗದಿಯಾಗ್ತಿತ್ತು. ಅದರಲ್ಲಿ ಬಡವರು, ಶ್ರೀಮಂತರು ಅನ್ನೋ ಭೇದವಿರಲಿಲ್ಲ. ಹಾಗೇನೇ ನೀರು ಬೇಕಾದವರು ಬೀದಿಯಲ್ಲಿದ್ದ ಒಂದು ಸೀಳಿನಲ್ಲಿ ಇಂತಿಷ್ಟು ಹಣ ಅಂತ ಸಿಕ್ಕಿಸಿದರೆ ಮಾತ್ರ ನೀರು ಬರ್ತಿತ್ತು, ಇಲ್ಲದಿದ್ರೆ ಇಲ್ಲ. ಉಸಿರಾಡೋ ಗಾಳಿ ಮಾತ್ರ ಇನ್ನೂ ಬಿಟ್ಟಿಯಾಗಿ ಸಿಗ್ತಿತ್ತು. ಆದರೆ ಇನ್ನು ಒಂದು ವರ್ಷದಲ್ಲಿ ಆ ಗಾಳಿ ಉಸಿರಾಡೋ ಎಷ್ಟೋ ಜನ ಸಾಯೋದ್ರಿಂದ ಅದು ಇದ್ದೂ ಪ್ರಯೋಜನ ಏನು ಅಂತ ಮಾಧವ ಯೋಚನೆ ಮಾಡ್ತಿದ್ದ.

ಯಾರು ಏನೇ ಹೇಳಲಿ ಅವನಿಗಂತೂ ಸಾಯೋಕೆ ಇಷ್ಟ ಇರಲಿಲ್ಲ. ಹೇಗಾದ್ರೂ ಮಾಡಿ ಬದುಕಬೇಕು – ಅದಕ್ಕೆ ಒಂದು ಕೆಲಸ ಬೇಕು. ಆದರೆ ಅಂಥ ಕೆಲಸ ಸಿಗೋದೇ ಈಗ ಸಮಸ್ಯೆ ಆಗಿ ಕೂತಿದೆ. ಅವನ ಓದಿಗೆ ಸರಿಯಾದ ಕೆಲಸ ಸಿಗೋದು ಸಾಧ್ಯವೇ ಇರಲಿಲ್ಲ. ಹಾಗಂತ ಅವನಿಗೆ ಓದು ಬೇಕಾಗಿರಲಿಲ್ಲ ಅಂತ ಅಲ್ಲ. ತೆರಿಗೆದಾರರ ಮಕ್ಕಳು ಮಾತ್ರ ಹೆಚ್ಚು ಓದಬಹುದು ಅಂತ ಕಾನೂನೇ ಇದ್ದದ್ದರಿಂದ ಅವನು ಓದೋಕೇ ಆಗಲಿಲ್ಲ. ಅವನ ತಂದೆಗೆ ತೆರಿಗೆ ಕಟ್ಟೋ ಅಷ್ಟು ಸಂಪಾದನೆ ಇರಲಿಲ್ಲ. ಹಣವಿಲ್ಲದವರ ಬುದ್ಧಿಮಟ್ಟನೂ ಕಡಿಮೆ ಅನ್ನೋದು ಸರ್ಕಾರದ ಚಿಂತನೆ ಆಗಿತ್ತು.

ಇದೆಲ್ಲಾ ಗೊತ್ತಿದ್ರೂ ಸಹ ಹೇಗಾದರೂ ಮಾಡಿ ಬದುಕಲೇ ಬೇಕು ಅನ್ನೋ ಇಚ್ಛೆ ಮಾತ್ರ ಉತ್ಕಟವಾಗಿತ್ತು. ತನಗೆ ಸಿಗೋ ಹಂಗಾಮೀ ಕೆಲಸಗಳು ತನ್ನನ್ನು 'ಸಾಯಬೇಕಾದವರು' ಪಟ್ಟಿಯಿಂದ ಪಾರುಮಾಡೋದಿಲ್ಲ ಅಂತ ಗೊತ್ತಿದ್ರೂ ಬದುಕಬೇಕು ಅನ್ನೋ ಆಸೆ ಮಾತ್ರ ಅವನನ್ನ ಬಿಡಲಿಲ್ಲ. 'ನಾನು ಸಾಯೋದಿಲ್ಲ, ಏನಾದ್ರೂ ಮಾಡಿ ಬದುಕೇ ಬದುಕ್ತೀನಿ' ಅಂತ ಅವನು ಪ್ರತಿರಾತ್ರಿ ಮಲಗೋಕೆ ಮುಂಚೆ ತನಗೆ ತಾನು ಹೇಳಿಕೊಳ್ತಿದ್ದ.

* * *

ಸೋನೇಪಟ್‌ನಿಂದ ಐವತ್ತು ಮೈಲಿ ದೂರದಲ್ಲಿ ಇನ್ನೊಂದು ಊರಿನಲ್ಲಿದ್ದ ವಿಕ್ಟರ್ ಜಾರ್ಜ್ ಕುಟ್ಟಿಗೆ ತನ್ನದೇ ಆದ ಸಮಸ್ಯೆಗಳು. ಅವನನ್ನು ಎಲ್ಲರೂ ವಿ.ಜಿ.ಕೆ. ಅಂತ ಕರೀತಿದ್ರು. ಕೆಲವೇ ತಿಂಗಳುಗಳ ಹಿಂದಿನವರೆಗೂ ಅವನ ಜೀವನ ಸುಖಮಯವಾಗಿತ್ತು. ಅವನು ನಡೆಸ್ತಾ ಇದ್ದ ಹುಡುಗಿಯರ ದಂಧೆ ಚೆನ್ನಾಗೇ ನಡೀತಿತ್ತು. ಆದರೆ ಅದೇ ಬೀದಿಯಲ್ಲಿ ಇನ್ನಿಬ್ಬರು ಅದೇ ವ್ಯಾಪಾರ ಶುರುಮಾಡಿದ ಮೇಲೆ ಆ ಸ್ಪರ್ಧೆಯಲ್ಲಿ ಇವನು ಸೋತು, ಸುತ್ತಲೂ ಸಾಲಗಳೂ ಹೆಚ್ಚಾಗಿ ಜೀವನ ಕಷ್ಟವಾಯ್ತು.

ಇದರಿಂದಾಗಿ ಅವನ ಪರಿಸ್ಥಿತಿಯೂ ಮಾಧವನ ಥರದ್ದೇ ಆಯ್ತು, ಯಾವುದೇ ಸಮಯದಲ್ಲಿ 'ಸಾಯಬೇಕಾದವರು' ಪಟ್ಟಿಗೆ ಸೇರೋ ಹಾಗೆ. ಅವನ ಸ್ನೇಹಿತರು ಯಾರೂ ಹತ್ತಿರ ಸುಳಿಯಲಿಲ್ಲ. ಅವನಿಗಾಗದವರು, ಪ್ರತಿಸ್ಪರ್ಧಿಗಳು ಅವನ ಪರಿಸ್ಥಿತಿಯ ಬಗ್ಗೆ ಸರ್ಕಾರಕ್ಕೆ ದೂರು ಕೊಟ್ಟಿದ್ದು ಅವನೂ ಸಾವಿನಿಂದ ತಪ್ಪಿಸಿಕೊಳ್ಳೋದು ಕಷ್ಟ ಅಂತ ಅನ್ನಿಸೋಕೆ ಶುರುವಾಯ್ತು.

'ಸಾಯಬೇಕಾದವರು' ಪಟ್ಟಿಗೆ ಸೇರಿದ ತಕ್ಷಣವೇ ತಾನು ಇರ್ತಿದ್ದ ಅಪಾರ್ಟ್‌ಮೆಂಟ್ ಖಾಲಿ ಮಾಡಿ ಯಾವುದೋ ಒಂದು ಕೊಳೆಗೇರಿ ಸೇರಬೇಕಾಗಿತ್ತು. ತನ್ನ ವಿದೇಶಿ ಹೆಂಡದ ಪರವಾನಗಿ ಕಳಕೊಂಡು ಇನ್ನು ಮೇಲೆ ಸರ್ಕಾರ ಬಿಟ್ಟಿಯಾಗಿ ಕೊಡೋ ಹೆಂಡಾನೇ ಕುಡಿಯೋದು ಕಲಿಬೇಕಾಗುತ್ತೆ.

ಒಂದು ಸಲ ಕೆಳ ಮೆಟ್ಟಿಲು ಸೇರಿದವನು ಮತ್ತೆ ಮೇಲೆ ಹೋಗೋದು ಸಾಧ್ಯವೇ ಇರಲಿಲ್ಲ. ಸರ್ಕಾರದ ನಿಯಮಗಳ ಪ್ರಕಾರವೇ ಶ್ರೀಮಂತರು ತಮ್ಮ ಆದಾಯ ಹೆಚ್ಚುಮಾಡಿಕೊಳ್ಳೋದಕ್ಕೆ ಯಾವ ಅಡ್ಡೀನೂ ಇರಲಿಲ್ಲ. ಆದರೆ ಬಡವರು ಮಾತ್ರ ತಮ್ಮ ಆರ್ಥಿಕ ಪರಿಸ್ಥಿತಿ ಉತ್ತಮಪಡಿಸಿಕೊಳ್ಳೋದಕ್ಕೆ ನಿಯಮಗಳು ಒಪ್ತಿರಲಿಲ್ಲ. ಬೇಕಾದರೆ ಅವರು ಇನ್ನೂ ಹೆಚ್ಚು ಬಡವರಾಗಬಹುದು, ಶ್ರೀಮಂತರು ಹೆಚ್ಚು ಶ್ರೀಮಂತರಾಗೋ ಹಾಗೆ. ಬಡತನದ ಪಟ್ಟಿಯಲ್ಲಿರೋವರೆಲ್ಲಾ ಈಗಿನ ಕಾಯಿದೆಯ ಪ್ರಕಾರ ಸಾಯಬೇಕಾದವರೇ ಆಗ್ತಾರೆ. ಈ ಪರಿಸ್ಥಿತಿಯಿಂದ ತಪ್ಪಿಸಿಕೊಳ್ಳೋಕೆ ವಿ.ಜಿ.ಕೆ.ಗೆ ಇದ್ದದ್ದು ಒಂದೇ ದಾರಿ – ಎಲ್ಲಾದರೂ ಸರಿಯಾದ ಒಂದು ಕೆಲಸ ಸಂಪಾದಿಸೋದು ಇಲ್ಲದಿದ್ರೆ, ಇನ್ನು ಹನ್ನೊಂದು ತಿಂಗಳ ನಂತರ ಸಾವಿರಾರು ಇತರರ ಥರ ಇವನೂ ಇಲ್ಲವಾಗ್ತಾನೆ.

ತಾನು ಮಾಡಿದ ಸಾಲದ ಬಗ್ಗೆ ಬ್ಯಾಂಕಿನಿಂದ ನೋಟೀಸ್ ಆಗ್ಲೇ ಬಂದಿತ್ತು. ಇನ್ನು ಹದಿನೈದು ದಿನಗಳಲ್ಲಿ ಅವನ ಅಂಗಡಿ ಹರಾಜಾಗುತ್ತೆ. ಮಿಕ್ಕ ಎಲ್ಲ ವಸ್ತುಗಳೂ ಮಾರಲೇ ಬೇಕಾಗುತ್ತೆ. ಮನೆ ಕೈ ಬಿಡುತ್ತೆ. ಕ್ರೆಡಿಟ್ ಕಾರ್ಡ್‌ಗಳನ್ನ ಕಳಕೊಳ್ತಾನೆ. ಹೀಗೆ ಒಮ್ಮೆ ಒಂದೇ ಹೆಜ್ಜೆಯಲ್ಲಿ ಎರಡನೆ ದರ್ಜೆ ಪ್ರಜೆ ಆಗಿ ನಂತರ ಸಾವಿಗೀಡಾಗೋ ದೃಶ್ಯ ಅವನ ಕಣ್ಮುಂದೆ ಪ್ರತಿಕ್ಷಣವೂ ಹಾದು ಹೋಗ್ತಿತ್ತು.

ಇಷ್ಟೆಲ್ಲಾ ಆದರೂ ಅವನಿಗೆ ಸಾಯೋಕೆ ಇಷ್ಟ ಇರಲಿಲ್ಲ. ಹೇಗಾದ್ರೂ ಮಾಡಿ ಉಳೀಬೇಕು ಅಂತ ಪ್ರಯತ್ನ ಪಡ್ತಾಲೇ ಇದ್ದ. ತನ್ನ ಸಮಸ್ಯೆಗಳ ಬಗ್ಗೆ ತನ್ನ ಅಂಗಡಿಯಲ್ಲಿನ ಇಬ್ಬರು ಸಹಾಯಕರ ಹತ್ರ ಮಾತಾಡ್ತಾ ಇದ್ದ, ತನ್ನ ಆಸೆ ಏನೂ ಅನ್ನೋದನ್ನೂ ಹೇಳ್ತಿದ್ದ. ಸಂತೋಷದ ವಿಷಯ ಅಂದರೆ, ಮಾಧವನ ಹಾಗೆ ಇವನೂ ಬ್ರಹ್ಮಚಾರಿಯೇ ಆಗಿದ್ದ. ಹೆಂಡತಿ ಮಕ್ಕಳು ಇದ್ದು ತಾನೇನಾದ್ರೂ ಹೀಗೆ 'ಸಾಯಬೇಕಾದವರು' ಪಟ್ಟಿಗೆ ಸೇರಿದ್ರೆ ತನ್ನ ಜತೆ ಅವರೂ ಸಾಯಬೇಕಾಗಿ ಬರ್ತಿತ್ತು.

ಉಳಿದ ಎರಡು ವಾರಗಳಲ್ಲಿ 'ಸಾಯಬೇಕಾದವರು' ಪಟ್ಟಿಯಿಂದ ಬಚಾವಾಗೋದಕ್ಕೆ ವಿ.ಜಿ.ಕೆ. ಬಹಳಷ್ಟು ಪ್ರಯತ್ನ ಪಟ್ಟ. ಆದರೆ ಯಾವ ಪ್ರಯತ್ನವೂ ಕೈಗೂಡಲಿಲ್ಲ. ಎಲ್ಲೂ ಸರಿಯಾದ ಕೆಲಸ ಸಿಗಲಿಲ್ಲ, ಸಾಲವೂ ಸಿಗಲಿಲ್ಲ. ಅವನಿಗೆ ಸಹಾಯ ಮಾಡೋ ಸ್ಥಿತಿಯಲ್ಲಿಯೂ ಯಾರೂ ಇರಲಿಲ್ಲ. ಎಲ್ಲರಿಗೂ ಅವರವರ ಜೀವದ್ದೇ ಚಿಂತೆ. ಸರ್ಕಾರದ ನೀತಿಗಳು, ಮುಖ್ಯವಾಗಿ ಈ ಹೊಸ ಕಾಯಿದೆ ಮನುಷ್ಯರ ಮಧ್ಯೆ ಇರುವ, ಇರಬೇಕಾದ ಎಲ್ಲ ಸಂಬಂಧಗಳನ್ನೂ ಹಾಳುಮಾಡೋದರಲ್ಲಿ ಯಶಸ್ವಿಯಾದವು ಅನ್ನೋದಕ್ಕೆ ಇದೂ ಒಂದು ಸಾಕ್ಷಿ. ವಿಚಿತ್ರ ಅಂದರೆ, ಅವನು ಹೆಣ್ಣಿನ ದಂಧೆ ನಡೆಸ್ತಿದ್ದರೂ ಹೆಣ್ಣಿನ ಗೀಳನ್ನು ಜಾಸ್ತಿ ಹಚ್ಚಿಕೊಂಡಿರಲಿಲ್ಲ. ಆಗಾಗ ಸರ್ಕಾರ ನಡೆಸ್ತಿದ್ದ 'ಸುಖಮಂಟಪ'ಕ್ಕೆ ಭೇಟಿ ಕೊಡ್ತಿದ್ದ ಅಷ್ಟೇ. ಅಲ್ಲೂ ಕೇರಳದ ಒಬ್ಬ ಹುಡುಗಿ ಜತೆ ಹರಟೆ ಹೊಡೆಯೋದ್ರಲ್ಲೇ ಹೆಚ್ಚುಕಾಲ ಕಳೀತಿದ್ದ. ಅವಳ ಹೆಸರು ಅಮ್ಮು. ಅವನಿಗೆ ಅವಳ ಜಾಣತನ, ಅವಳಿಗೆ ಅವನ ಹಾಸ್ಯಪ್ರಜ್ಞೆ ಮೆಚ್ಚುಗೆಯಾಗಿ ಇಬ್ಬರೂ ಒಳ್ಳೆಯ ಸ್ನೇಹಿತರಾದರು.

ಹಿಂದಿನ ಸಲ ವಿ.ಜಿ.ಕೆ. ಅವಳ ಹತ್ತಿರ ಹೋದಾಗ 'ಇನ್ನೇನು ನಾನು ಬಹಳ ದಿನ ಉಳಿಯೋ ಹಾಗೆ ಕಾಣೋಲ್ಲ, ನನ್ನ ಚೆನ್ನಾಗಿ ನೋಡಿಕೋ' ಅಂತ ಹೇಳಿದ್ದ. ಈ ಥರ ತಮಾಷೆಯಾಗಿ ಮಾತನಾಡ್ತಿದ್ದರಿಂದಲೇ ಅಮ್ಮುವಿಗೆ ಅವನು ಇಷ್ಟಾನೂ ಆಗಿದ್ದ. ಅಷ್ಟೇ ಅಲ್ಲದೆ ಅವನೊಬ್ಬ ತೆರಿಗೆದಾರನಾಗಿದ್ದ, ಯಾರೋ ಒಬ್ಬ ಸಾಮಾನ್ಯನಾಗಿರಲಿಲ್ಲ. ಅವಳ

ಸ್ಥಿತಿಯಲ್ಲಿದ್ದ ಹಲವು ಹುಡುಗಿಯರು ತಮ್ಮ ಮನಸ್ಸುಗಳನ್ನೇ ಕಳಕೊಂಡು ಕೇವಲ ಗಿರಾಕಿಗಳ ಮೈತೀಟೆ ತೀರಿಸೋ ಯಂತ್ರಗಳಾಗಿದ್ದರು. ಆದರೆ ಆಶ್ಚರ್ಯಕರವಾಗಿ ಅಮ್ಮು ಮಾತ್ರ ತನ್ನ ಬುದ್ಧಿ, ಮನಸ್ಸುಗಳನ್ನು ಇನ್ನೂ ಕಾಪಾಡಿಕೊಂಡು ಬಂದಿದ್ದಳು.

ವಿ.ಜಿ.ಕೆ. ತನ್ನ ಹತ್ತಿರ ಸಾವಿನ ಮಾತಾಡಿದಾಗ ಅವಳು ಹಣ ಕಳ್ಕೊಂಡು ಸಾವು ಹತ್ತಿರ ಬರುತ್ತೆ ಅನ್ನಿಸಿದ್ದಾಗ 'ನಿನ್ನ ಬುದ್ಧಿಗೂ ಬರ ಬರುತ್ತೇನು' ಅಂತ ಅವನನ್ನು ಛೇಡಿಸಿದಳು.

ಬಡವನ್ನ ಕೇಳೋರು ಯಾರಿದಾರೆ ಹೇಳು ? ಅವನು ಎಷ್ಟೇ ಬುದ್ಧಿವಂತನಾದರೂ ಪ್ರಯೋಜನವೇನಿದೆ ? ಅವನ ಬಗ್ಗೆ ಚಿಂತೆ ಮಾಡೋರೇ ಇಲ್ವಲ್ಲಾ?

''ಆದ್ರೇ ನಾನಿದೀನಿ, ಅಷ್ಟೇ ಅಲ್ಲ; ನಿನ್ನ ಪರಿಸ್ಥಿತೀಲಿ ಸಿಕ್ಕಿ ಹಾಕ್ಕೊಂಡು ಅದರಿಂದ ಹೊರಬರಬೇಕು ಅಂತ ಯೋಚನೆ ಮಾಡ್ತಾ ಇರೋರು ಬಹಳಷ್ಟು ಜನ ಇದಾರೆ.'' ಅಮ್ಮು ಈ ಮಾತು ಹೇಳಿದಾಗ ಯಾವುದೋ ಆವೇಶಕ್ಕೆ ಒಳಗಾದ ಹಾಗಿತ್ತು.

''ಯೋಚನೆ ಮಾಡಿ ಮಾಡೋದೇನಿದೆ ? ಈ ಸರ್ಕಾರಾನ ಎದುರಿಸೋಕಾಗುತ್ತೇನು ?''

''ನೀನೂ ಬೇರೆಯವರ ಥರಾನೇ ಅಂತ ಆಯ್ತು. ಸರ್ಕಾರ ನೀನು ಕೆಲಸಕ್ಕೆ ಬರದವನು ಅಂತ ಹೇಳುತ್ತೆ. ನೀನು ಒಬ್ಬ ದಡ್ಡನ ಥರ ಅದನ್ನು ಒಪ್ಪಿಕೊಳ್ತೀಯಾ; ಅಷ್ಟೇ ಅಲ್ಲ, ನನ್ನನ್ನ ಮುಗಿಸಿಬಿಡಿ ಅಂತ ನಿನ್ನ ಕತ್ತನ್ನೂ ಕೊಡ್ತೀಯ.''




''ಹಾಗಾದ್ರೆ ಈ ರೀತಿ ಯೋಚನೆ ಮಾಡ್ತಾಯಿರೋರು ಇದಾರೆ ಅಂದಿಯಲ್ಲಾ! ಯಾರವರು ?'' ವಿ.ಜಿ.ಕೆ. ಸಂತೋಷ, ಭಯ – ಎರಡನ್ನೂ ಒಂದೇ ಸಮಯದಲ್ಲಿ ಅನುಭವಿಸಿದ.

''ಅವರು ಬೇರೇ ಯಾರೂ ಅಲ್ಲ. ಎಲ್ಲಾ ಇಲ್ಲಿಗೆ ಬರೋವ್ರೇನೇ. ಎಲ್ಲರೂ ಕಂಗಾಲಾಗಿದಾರೆ. ಆದ್ರೆ ಪ್ರತಿಯೊಬ್ಬನೂ ತನ್ನ ಪರಿಸ್ಥಿತಿಯ ಬಗ್ಗೆ ಮಾತ್ರ ಯೋಚಿಸ್ತಿದಾನೆ. ಎಲ್ಲರೂ ಒಬ್ಬರಿಗೊಬ್ಬರು ಸಂಬಂಧವಿಲ್ಲವೇನೋ ಅನ್ನೋ ಥರ ಬದುಕ್ತಿದಾರೆ.''

''ನಾನು ಅವರನ್ನ ನೋಡಬೇಕಲ್ಲಾ.''

''ನಾಳೆ ಸಂಜೆ ಇಲ್ಲಿಗೆ ಬಾ. ಅವರೆಲ್ಲಾ ಸಿಗ್ತಾರೆ.''

ವಿ.ಜಿ.ಕೆ.ಗೆ ಸಂಭ್ರಮವೋ ಸಂಭ್ರಮ. ಈ ಹದಿನೆಂಟು ವರ್ಷದ ಹುಡುಗಿ ತನ್ನ ಜೀವನದ ಗತಿಯನ್ನೇ ಬದಲಿಸೋ ರೀತಿ ಕಾಣ್ತಿದ್ದಳು. ಆಗ ಅವನಿಗೆ ಅಮ್ಮುವಿಗೂ ಬೇರೆ ಹಲವು ಹೆಂಗಸರಿಗೂ ಇರೋ ವ್ಯತ್ಯಾಸ ಏನು ಅಂತ ಸ್ಪಷ್ಟವಾಯ್ತು. ಕೊನೆಯವರೆಗೂ ಹೋರಾಡೋ ಕಿಚ್ಚು ಅವಳ ವಿಲಕ್ಷಣ ಗುಣ.

'ಸುಖ ಮಂಟಪ' ಅಂತ ಹೆಸರಿದ್ದ ಆ ಕೆಂಪು ದೀಪದ ಪ್ರದೇಶದಿಂದ ಹೊರಟಾಗ ವಿ.ಜಿ.ಕೆ. ಒಬ್ಬ ಹೊಸ ಮನುಷ್ಯನಾಗಿದ್ದ. ಸ್ವಲ್ಪ ಸಮಯದ ಹಿಂದೆ ತಾನು 'ಸಾಯಬೇಕಾದವರು' ಪಟ್ಟಿಯಲ್ಲಿ ಸೇರದಿರಬೇಕಾದ್ರೆ ಏನು ಮಾಡಬೇಕು ಅಂತ ಯೋಚನೆ ಮಾಡ್ತಿದ್ದವನು, ಈಗ ಸರ್ಕಾರದ ಈ ಅನ್ಯಾಯದ ಕಾಯಿದೆಯ ವಿರುದ್ಧ ಹೋರಾಡೋದು ಹೇಗೆ ಅಂತ ತಲೆಕೆಡಿಸ್ಕೊಳ್ತಿದ್ದ. ಮುಂದಿನ ದಾರಿ ಸ್ಪಷ್ಟ ಆಗದೇ ಇದ್ರೂ ಯಾವ ದಿಕ್ಕಿನಲ್ಲಿ ನಡೀಬೇಕು ಅನ್ನೋದು ನಿರ್ಧಾರ ಮಾಡಿ ಆಗಿತ್ತು. ತನ್ನ ಈ ಹೊಸ ನಿರ್ಧಾರಕ್ಕೆ ಸ್ಫೂರ್ತಿ, ತನಗಿಂತ ಹದಿನೈದು ವರ್ಷ ಚಿಕ್ಕವಳಾದ ಆ ಹುಡುಗಿ ಅಮ್ಮು.

ಅವನು ಇದುವರೆಗೂ ಯಾರಿಂದ್ಲೂ ಇಷ್ಟು ಪ್ರಭಾವಿತನಾಗಿರಲಿಲ್ಲ. ಒಂದು ಹೊಸ ರೀತಿಯಲ್ಲಿ ಯೋಚನೆ ಮಾಡೋದಕ್ಕೆ ತನಗೆ ಸಾಧ್ಯ ಆಗ್ತಾ ಇರೋದು ಅಮ್ಮುವಿನ ಮಾತುಗಳಿಂದಲೇ ಅನ್ನೋದು ವಿ.ಜಿ.ಕೆ.ಗೆ ಸ್ಪಷ್ಟವಾಗಿ ತಿಳಿದಿತ್ತು. ಅವಳ ಯೋಚನೆ ಹಾಗೂ ಮಾತುಗಳಿಗೆ ಒಂದು ಅಯಸ್ಕಾಂತದ ಗುಣವಿದೆ. ಅವಳ ಪ್ರಶ್ನೆ ಇಷ್ಟೇ : ''ಎಲ್ಲರೂ ಸಾಯೋದೋ, ಬದುಕೋದೋ ಅಂತ ಯೋಚಿಸ್ತಿದಾರೆ. ಆದ್ರೆ ಸಾಯೋದಿಲ್ಲ, ಬದುಕ್ತೇವೆ ಅಂತ ಧೈರ್ಯವಾಗಿ ಯಾರೂ ಹೇಳ್ತಾಯಿಲ್ಲವಲ್ಲ ಯಾಕೆ ?'' ಸುಖ ಮಂಟಪದಿಂದ ವಾಸಿಸುವ ಮನೆಗೆ ನಡೆಯುವಾಗ ಅವನನ್ನೂ ಈ ಪ್ರಶ್ನೆ ಕಾಡ್ತಿತ್ತು. ಆದ್ರೆ ಆ ಪ್ರಶ್ನೆ ಅವನಿಗೆ ಹೊಳೆದದ್ದು ಮಾತ್ರ ಅಮ್ಮುವಿನ ಹತ್ರ ಮಾತನಾಡಿದ ನಂತರವೇ ಅನ್ನೋದು ಅವನಿಗೂ ಗೊತ್ತಿತ್ತು.

ಮಾರನೆಯ ದಿನ ಬೆಳಗ್ಗೆ ನಿದ್ದೆಯಿಂದ ಎದ್ದಾಗ ಅವನ ಚಹರೇನೇ ಬದಲಾಗಿತ್ತು. .ತುಂಬಾ ಲವಲವಿಕೆಯಿಂದ ಓಡಾಡ್ತಿದ್ದ. ಕೆಲವು ದಿನಗಳಿಂದ ಅವನ ಹೊಸ ಕಷ್ಟದ ಬಗ್ಗೆ ತಿಳಿದಿದ್ದ ನೆರೆಹೊರೆಯವರೂ ಆಶ್ಚರ್ಯಪಡೋ ಅಷ್ಟು ಲವಲವಿಕೆ. ಇವನು ಏನೋ ಮಾಡಿ 'ಬದುಕಬಹುದು' ಪಟ್ಟಿಗೆ ಸೇರಿರಬೇಕು ಅಂತ ಅಂದುಕೊಂಡರು; ಯಾಕೆಂದರೆ ಆ ಪಟ್ಟಿಯಲ್ಲಿರೋ ಜನರ ಮುಖದ ಮೇಲೆ ಮಾತ್ರ ಅಂಥ ಸಂತೋಷ ಕಾಣ್ತಿತ್ತು.

ಅವನು ತನ್ನ ಅಂಗಡಿಗೆ ಹೋದಾಗಲೂ ಅಷ್ಟೇ. ಯಾರಿಗೂ ಅರ್ಥವಾಗದ ಆನಂದದಲ್ಲಿ ಮುಳುಗಿದ್ದ. ''ಏನು ಎಲ್ಲಾದ್ರೂ ಸಾಲಗೀಲ ಸಿಕ್ತೇನು?'' ಅಂತ ಅವನ ಸಹಾಯಕರು ಕೇಳಿದ ಪ್ರಶ್ನೆಗೂ ಏನೂ ಉತ್ತರ ಕೊಡದೇ ತನ್ನ ಹತ್ತಿರ ಉಳಿದಿದ್ದ ಹಣವನ್ನು ಎಲ್ಲರಿಗೂ ಹಂಚೋದರಲ್ಲೇ ಕಾಲ ಕಳೆದ.

ಸಂಜೆ ಅಂಗಡಿ ಮುಚ್ಚೋ ಹೊತ್ತಿಗೆ ಅವನ ಜೇಬು ಪೂರ್ತಿ ಖಾಲಿ. ಇನ್ನೊಂದು ವಾರದಲ್ಲಿ ಅವನೂ 'ಸಾಯಬೇಕಾದವರು' ಪಟ್ಟಿಗೆ ಸೇರೋದಂತೂ ಖಚಿತವಾಯ್ತು. ಆದರೆ ಅವನು ಮೌನವಾಗಿ ಆ ಸೋಲನ್ನು ಒಪ್ಪಿಕೊಳ್ಳೋದಕ್ಕೆ ಸಿದ್ಧವಾಗಿರಲಿಲ್ಲ. ಆ ಕಾಯಿದೆಯ ವಿರುದ್ಧ ಹೋರಾಟ ಮಾಡ್ಲೇಬೇಕು ಅಂತ ನಿರ್ಧರಿಸಿದ್ದ. ಸಾಯೋದೇನಿದ್ರೂ ಕೊನೆಯ ಮಾತು.

'ಸುಖ ಮಂಟಪ'ಕ್ಕೆ ಹೋಗೋ ದಾರಿಯಲ್ಲಿ ಅಮ್ಮುವಿನದೇ ಯೋಚನೆ. ಅವಳ ವಿಚಾರ ಅವತ್ತಿನ ಎಲ್ಲ ಚಿಂತಕರ ಬುದ್ಧಿಜೀವಿಗಳ ವಿಚಾರಗಳಿಗಿಂತ ಗಟ್ಟಿಯಾದದ್ದು ಅಂತ ಅನ್ನಿಸ್ತು. ಎಲ್ಲ ಜನರೂ ಸಾಧಾರಣವೆಂದು ಬಿಟ್ಟದ್ದೇ ಅತಿ ಶ್ರೇಷ್ಠ ಅಂತ ಮಾನ್ಯತೆ ಪಡೀತಾ ಇದ್ದ ಆ ಸಂದರ್ಭದಲ್ಲಿ ಸ್ವಲ್ಪ ಭಿನ್ನವಾದ ಯಾವುದೇ ಯೋಚನೆ ಸರ್ಕಾರ ವಿರೋಧಿ ಯಾದ್ದು ಹಣೆಪಟ್ಟಿ ಪಡೀತಿತ್ತು. ಈಗ ಅವಳು ವಿ.ಜಿ.ಕೆ.ಗೆ ಹೇಳಿರೋ ವಿಷಯ ಸಹ ಅಂಥದೇ ಆಗಿತ್ತು.

ಒಬ್ಬ ಸರ್ಕಾರಿ ಬುದ್ಧಿಜೀವಿ ಹೇಗೆ ಅತಿ ಸಾಧಾರಣ ವಿಷಯವನ್ನೇ ದೊಡ್ಡದು ಮಾಡಿ ಅತಿ ಶ್ರೇಷ್ಠವಾದದ್ದು ಅಂತ ಹೊಗಳ್ತಾ ಬರೆದಿದ್ದ ಒಂದು ಲೇಖನ ವಿ.ಜಿ.ಕೆ.ಗೆ ನೆನಪು ಬಂತು. ಆ ಲೇಖನ ೧೯೯೦ರಿಂದ ೨೦೪೦ರವರೆಗೂ ನಡೆದ ಚಿಂತನೆಯ ಜಾಡನ್ನು ಗುರ್ತಿಸಿತ್ತು. ಕಲೆಗೆ ಒಂದು ಹೊಸ ವಿವರಣೆ ಕೊಡಲಾಗಿತ್ತು. ಮಸಾಲೆ ತುಂಬಿದ ಸಿನೆಮಾಗಳಿಗೆ ಸಾಹಿತ್ಯಕ ಮನ್ನಣೆ ಸಿಕ್ತು. ಸಿನಿಮಾ ಸಂಗೀತ ಅತ್ಯುತ್ತಮ ಕಲಾ ಮಾಧ್ಯಮ ಅಂತ ಅನ್ನಿಸಿಕೊಳ್ತು. ರೋಚಕ ಕಥೆಗಳನ್ನು ಬರೆಯೋರು ಶ್ರೇಷ್ಠ ಲೇಖಕರು ಅಂತ ಹೆಸರು ಪಡೆದರು.

ಅದಕ್ಕೂ ಹಿಂದೆ ೧೯೮೦ರ ಸುಮಾರಿನಲ್ಲಿ ಮೂಲಭೂತ ವಿಜ್ಞಾನದಿಂದ ಏನೂ ಪ್ರಯೋಜನ ಇಲ್ಲ ಅನ್ನೋದನ್ನ ಒಪ್ಪಿಕೊಳ್ಳಲಾಗಿತ್ತು. ಮುಂದೆ ೨೦೦೫ರಲ್ಲಿ ಆ ಕ್ಷೇತ್ರದಲ್ಲಿನ ಎಲ್ಲಾ ಸಂಶೋಧನೇನೂ ವ್ಯರ್ಥ ಹಣ ಖರ್ಚು ಅಂತ ನಿಷೇಧಿಸ ಲಾಗಿತ್ತು. ಚರಿತ್ರೆ ಪುನರ್ರಚಿತವಾಗಿ ಅದರಲ್ಲಿ ಮಹಾತ್ಮ ಗಾಂಧಿ, ಭಗತ್ ಸಿಂಗ್,

ಸುಭಾಷ್ ಚಂದ್ರ ಬೋಸ್ ಮುಂತಾದವರ ಹೆಸರುಗಳೇ ಕಾಣೆಯಾಗಿದ್ದು ಅವರ ಜಾಗದಲ್ಲಿ ಹಣ ಮಾಡಿದ ದೊಡ್ಡ ಉದ್ಯಮಿಗಳು ಕಾಣಿಸಿಕೊಂಡರು; ಅವರ ಶ್ರೀಮಂತಿಕೆಯ ಆಧಾರದ ಮೇಲೆ ಅವರಿಗೆ ಬಿರುದುಗಳನ್ನು ಕೊಟ್ಟು ಅವರ ಭಾವ ಚಿತ್ರಗಳೇ ಸಾರ್ವಜನಿಕ ಪ್ರದೇಶಗಳಲ್ಲಿ ರಾರಾಜಿಸ್ತಾ ಇದ್ದವು.




ಇವುಗಳ ಬಗ್ಗೆ ಎಲ್ಲಾ ಯೋಚಿಸ್ತಾ ಇದ್ರೆ ಅಮ್ಮು ಹೇಳಿದ ಎಷ್ಟೋ ವಿಷಯಗಳಲ್ಲಿದ್ದ ಸತ್ಯ ಅವನಿಗೆ ತಿಳೀತಾ ಇತ್ತು. ಅವಳ ಮಾತುಗಳಿಗೆ ಆಧಾರ ಇದ್ದದ್ದು ಹಿಂದಿನ ಕಾಲದಲ್ಲೇ ಆದರೂ ಅವು ತನ್ನ ಕಾಲಕ್ಕೂ ಪ್ರಸ್ತುತವಾಗಿದ್ದವು. ಅದರಲ್ಲೂ ತನಗೆ ಈ ತಿಳುವಳಿಕೆ ಒಬ್ಬ ಹೆಂಗಸಿನಿಂದ ಬಂದದ್ದು ಅವನಿಗೆ ಆಶ್ಚರ್ಯ ಮೂಡಿಸಿತ್ತು. ಒಂದು ಶತಮಾನದ ಹಿಂದೆ ಹೆಣ್ಣು ಅಂದ್ರೆ ಕೇವಲ ಭೋಗವಸ್ತು ಅಲ್ಲ, ಎಲ್ಲ ರಂಗಗಳಲ್ಲೂ ಪುರುಷನಿಗೆ ಸಮಾನವಾಗಿ ಇರಬಲ್ಲಳು ಅನ್ನೋ ಯೋಚನೆ ಶುರುವಾಗಿತ್ತು. ಆದರೆ ೨೦೧೫ರ ಹೊತ್ತಿಗೆ ಪರಿಸ್ಥಿತಿ ಬದಲಾಗಿತ್ತು. ಆಗ ಬಂದ ಹೊಸ ಸಂವಿಧಾನದ ಪ್ರಕಾರ 'ಎಲ್ಲ ಹೆಣ್ಣುಗಳೂ ಗಂಡಸರಿಗೆ ಸುಖ ನೀಡುವವರು ಮಾತ್ರ' ಅಂತ ಗುರ್ತಿಸಲಾಗಿತ್ತು. ಸ್ತ್ರೀವಾದಿಯರನ್ನೆಲ್ಲಾ ಮಾಟಗಾತಿಯರು ಅಂತ ಕರೆಯಲಾಯಿತು. ಅಡುಗೆ ಮಾಡಿ ಗಂಡನಿಗೆ ಊಟ ಬಡಿಸುವುದರಲ್ಲಿದ್ದ ಅನನ್ಯ ಸುಖದ ಬಗ್ಗೆ ಪ್ರಚಾರ ಭಾಷಣಗಳು ನಡೆದವು. ಹಳೇ ಧಾರ್ಮಿಕ ಆಚರಣೆಗಳ ಜಾಗವನ್ನು ಉಪಭೋಗ ಸಂಸ್ಕೃತಿ ಆಕ್ರಮಿಸಿಕೊಂಡಿತ್ತು. ದೇವದೇವತೆಗಳ ಜಾಗದಲ್ಲಿ ಹಣದ ಮೂರ್ತಿಗಳು ಆದರೆ, ಸತಿ ಸಾವಿತ್ರಿ ಮುಂತಾದ ಪತಿವ್ರತಾ ಶಿರೋಮಣಿಯರ ಕಥೆಗಳೂ, ಮನುವಿನ ಸೂತ್ರಗಳೂ ಪ್ರಚಾರದಲ್ಲಿದ್ದು ಹೆಣ್ಣು ಹೇಗಿರಬೇಕು ಅನ್ನೋದಕ್ಕೆ ಮಾದರಿಯಾದವು.

ಹೆಣ್ಣು ಮಕ್ಕಳು ಶಾಲೆಗೆ ಹೋಗೋ ಹಾಗೇ ಇರಲಿಲ್ಲ. ಸರ್ಕಾರ ನೇಮಿಸಿದ ಒಂದು ಸಮಿತಿ ಯಾವ ಹೆಣ್ಣು ಸುಖಮಂಟಪದಲ್ಲಿ ಸೇರಿ ಗಂಡಸರಿಗೆ ಸುಖ ಕೊಡಬೇಕು, ಯಾರು ಒಬ್ಬ ತೆರಿಗೆದಾರನ ಹೆಂಡತಿ ಆಗಬಹುದು ಅನ್ನೋದನ್ನ ನಿರ್ಧರಿಸ್ತಿತ್ತು. ಇಂಥ ಒಂದು ಸಮಿತಿಯ ಸಭೆಯಲ್ಲೇನೇ ಅಮ್ಮು ಆ ಸಮಿತಿಯ ಒಬ್ಬ ಸದಸ್ಯನ ಬಟ್ಟೆ ಒದ್ದೆ ಮಾಡಿದ್ದು.

ಆ ವಿಷಯಾನ ವಿ.ಜಿ.ಕೆ.ಗೆ ಅಮ್ಮು ಕೋಪದಿಂದಲೇ ನಗ್ತಾ ಹೇಳಿದ್ದಳು. ''ಆಗ ನನಗಿನ್ನೂ ಎರಡು ವರ್ಷ. ಆ ಸಮಿತಿಯನ್ನು ಕಂಡ್ರೆ ಆಗ್ಲೇ ನನಗೆ ಹೇಸಿಗೆ ಆಯ್ತು ಅಂತ ಕಾಣುತ್ತೆ.'' ಅವಳ ತಾಯಿ ಮಾತ್ರ ಆಗಾಗ ''ಯಾವಾಗ ಯಾರ ಮೇಲೆ ಉಚ್ಚೆ ಹೊಯ್ಯಬೇಕು ಅನ್ನೋದನ್ನ ಮಕ್ಕಳು ಅರ್ಥಮಾಡಿಕೊಂಡರೆ ಒಳ್ಳೇದು'' ಅಂತ ಹೇಳ್ತಿದ್ದಳು.

ಸುಖಮಂಟಪ-೪೫ರಲ್ಲಿ ನೆರೆಯುತ್ತಿದ್ದವರ ಜೀವನ ಯಾಂತ್ರಿಕವಾಗಿತ್ತು. ಹಾಗೆ ನೋಡಿದರೆ ಅಲ್ಲಿದ್ದ ಎಲ್ಲಾ ಕೋಣೆಗಳಲ್ಲೂ ಜೀವನ ಒಂದೇ ಥರಾನೇ ಇತ್ತು. ಏಡ್ಸ್‌ಗೆ ಔಷಧಿ ಕಂಡುಹಿಡಿದ ಮೇಲಂತೂ ಮೈ ಸುಖದ ಅನುಕೂಲವನ್ನ ಸರ್ಕಾರ ತನ್ನ ಖರ್ಚಿನಲ್ಲೇ ಎಲ್ಲಾ ಸಾಮಾನ್ಯ ಜನರಿಗೂ ಕಲ್ಪಿಸಿಕೊಟ್ಟಿತ್ತು. ಅಲ್ಲಿನ ಹೆಣ್ಣುಗಳಿಗೆ ದೇಹದ ಯಾವ ಭಾಗದಲ್ಲೂ ನೋವು ಅನುಭವಕ್ಕೆ ಬರದೇ ಇರೋ ರೀತಿಯಲ್ಲಿ ಯಾವುದೋ ಔಷಧಿ ಕೊಡ್ತಿದ್ರು. ವಿಕೃತ ಕಾಮ ಬೇಕಾದವರು ಅದನ್ನ ತಮ್ಮ ಹೆಂಡತಿಯರು ಅಥವಾ ಮನೆಗೆಲಸದವರಿಂದ ಪಡೆಯಬಹುದಿತ್ತು.

ಗಂಡಸಿನ ಜತೆ ಸೇರಿದ್ದಾಗ ತನಗೆ ಎಂದೂ ಸುಖವಾಗಲಿ, ತೃಪ್ತಿಯಾಗಲಿ ಸಿಕ್ಕೇ ಇಲ್ಲ ಅಂತ ಅಮ್ಮು ಹೇಳಿದಾಗ ವಿ.ಜಿ.ಕೆ.ಗೆ ಅರ್ಥವಾಗಲಿಲ್ಲ. ಅವಳು ನುಂಗ ಬೇಕಾದ ಮಾತ್ರೆಗಳು ಅವಳ ದೇಹವನ್ನ ಒಂದು ಕೊರಡಿನ ಹಾಗೆ ಮಾಡಿಟ್ಟಿದ್ದವು. ಅವಳ ದೇಹ ಗಿರಾಕಿಗೆ ಬೇಕಾದ ಹಾಗೆ ಸ್ಪಂದಿಸ್ತಾ ಇದ್ದದ್ದರಿಂದ, ಅವನಿಗೆ ಈ ವಿಷಯ ಗೊತ್ತಾಗುತ್ತಲೇ ಇರಲಿಲ್ಲ.

ಇತ್ತೀಚೆಗಂತೂ ವಿ.ಜಿ.ಕೆ. ಅವಳ ಹತ್ತಿರಕ್ಕೆ ಮೈಸುಖಕ್ಕಾಗಿ ಹೋಗಿದ್ದೇ ಕಡಿಮೆ. ''ಹಾಗಾದ್ರೆ ನೀನು ನನ್ನ ಬುದ್ಧಿನ ಕೆಡಿಸೋಕೆ ಬರ್ತಿ ಅನ್ನು'' ಅಂತ ಅಮ್ಮು ತಮಾಷೆ ಸಹ ಮಾಡಿದ್ದಳು. ಅವಳ ಜತೆ ಮಲಗೋಕಿಂತ ಮಾತಾಡ್ತಾ ಇರೋದೇ ಅವನಿಗೆ ಪ್ರಿಯವಾಗಿತ್ತು. ಹೊಸ ಆಲೋಚನೆಗಳ ಬಗ್ಗೆ ಮಾತನಾಡೋದು ಈ ವ್ಯವಸ್ಥೆಯಲ್ಲಿ ಸಾಧ್ಯವೇ ಇರಲಿಲ್ಲ– ಅವಳ ಜತೆ ಇದ್ದಾಗ ಹೊರತುಪಡಿಸಿ.

ಸುಖಮಂಟಪ ಹತ್ತಿರವಾಗ್ತಿರಬೇಕಾದ್ರೆ, ಅವನಿಗೆ ಹೊಸದೇನೋ ಅನುಭವ ಆದ ಹಾಗಾಯ್ತು. ತನ್ನೊಳಗೇ ಹೊಸ ಉತ್ಸಾಹ ಕಟ್ಟೆ ಹರಿದು ಉಕ್ಕೋ ಸ್ಥಿತಿಯಲ್ಲಿತ್ತು. ಸುಖಮಂಟಪ - ೪೫ ಅವನಿಗೆ ಭವಿಷ್ಯತ್ತಿನ ಸ್ವಾತಂತ್ರ್ಯ ಮಂಟಪ ಅಂತ ಕಾಣಿಸೋಕೆ ಶುರುವಾಯ್ತು. ಅಲ್ಲಿ ಅಮ್ಮುವೇ ನಾಯಕಿ, ಎಲ್ಲರಿಗೂ ಸ್ಫೂರ್ತಿಯ ಚಿಲುಮೆ. ತಾನು ಅವಳ ಶಿಷ್ಯರಲ್ಲಿ ಒಬ್ಬ – ಆದರೆ ಪ್ರಮುಖನಾದವನು. ''ಕೊನೆಗೂ ಉಳಿಯೋದು ಜನರ ಮಾತು ಮಾತ್ರ'' – ಅಮ್ಮುವಿನ ಮಾತು ಅವನಲ್ಲಿ ಮತ್ತೆ ಮತ್ತೆ ಧ್ವನಿಸ್ತಿತ್ತು.

ವಿ.ಜಿ.ಕೆ. ಸುಖಮಂಟಪದ ಕಾಂಪೌಂಡಿನ ಒಳಕ್ಕೆ ಕಾಲಿಟ್ಟಾಗ ಅಲ್ಲಿ ಒಂದು ಗುಂಪು ನಿಂತಿದ್ದನ್ನು ಕಂಡ. ಅವರೆಲ್ಲಾ ಅವನಿಗಾಗೇ ಕಾಯ್ತಿದ್ರು. ಆ ಗುಂಪಿನ ಹಿಂದೆ ಎತ್ತರದಲ್ಲಿ ಅಮ್ಮು ನಿಂತಿದ್ದಳು; ಮೊದಲನೆಯ ಸಾಲಿನಲ್ಲಿ ನಿಂತಿದ್ದವರಲ್ಲಿ ಮಾಧವನೂ ಒಬ್ಬ.

**ಕನ್ನಡಕ್ಕೆ : ನಗರಗೆರೆ ರಮೇಶ್**
೩೬೬, ೮ನೇ ಅಡ್ಡ ರಸ್ತೆ, ೮ನೇ ಮುಖ್ಯ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

---

*೧೬ನೇ ಪುಟದಿಂದ*

ಮಕ್ಕಳಿಗೆ ಸರಳ ರೀತಿಯಲ್ಲಿ ಅರ್ಥವಾಗುವ ಪುಸ್ತಕಗಳನ್ನು ಓದಲು ಕೊಡುವುದರಿಂದ ಅವರ ಪರಿಪೂರ್ಣ ಬೆಳವಣಿಗೆ ಹಾಗೂ ವ್ಯಕ್ತಿತ್ವ ವಿಕಾಸಕ್ಕೆ ದಾರಿ ಮಾಡಿಕೊಟ್ಟಂತಾಗುವುದು, ಚಿಕ್ಕ ವಯಸ್ಸಿನಲ್ಲಿಯೇ ಮಕ್ಕಳಿಗೆ ಪುಸ್ತಕಗಳನ್ನು ಸಂಗ್ರಹಿಸುವ ಹಾಗೂ ಕೊಂಡು ಓದುವ ಹವ್ಯಾಸ ಮೂಡಿಸಿದಂತಾಗುವುದು.

ಪುಸ್ತಕವೆಂದರೆ ಮನುಷ್ಯನ ಆರನೆಯ ಇಂದ್ರಿಯ ಇದ್ದಂತೆ. ದೈನಂದಿನ ಚಟುವಟಿಕೆಗಳ ಹಲವಾರು ಸಂದರ್ಭಗಳಲ್ಲಿ ಮನುಷ್ಯ ನಿರಾಶನಾಗಿ ಗೊಂದಲಕ್ಕೀಡಾದಾಗ, ದುಃಖಿತನಾದಾಗ ಉತ್ತಮ ಪುಸ್ತಕಗಳನ್ನು ಓದುವುದರಿಂದ ಮನಸ್ಸಿಗೆ ನೆಮ್ಮದಿ ಮೂಡುತ್ತದೆ. ಒಂಟಿತನ, ಜಿಗುಪ್ಸೆ, ಕೀಳರಿಮೆಗಳನ್ನು ಹೋಗಲಾಡಿಸುವ ಶಕ್ತಿ ಪುಸ್ತಕಗಳಿಗಿದೆ. ಓದುವ ಹವ್ಯಾಸದಿಂದ ವಿಶಾಲ ಮನೋಭಾವ ಬೆಳೆಯುತ್ತದೆ. ಈ ಪುಟ್ಟ ಜಗತ್ತು ಎಷ್ಟೊಂದು ಆಳ, ಎತ್ತರ, ವಿಶಾಲ ಎಂಬುದರ ಜೊತೆಗೆ ಪ್ರತಿಯೊಬ್ಬರನ್ನೂ ಪ್ರೀತಿಸುವ ಮನೋಭಾವ ಬೆಳೆಯುತ್ತದೆ.

ವೈವಿಧ್ಯಮಯ ಪುಸ್ತಕಗಳ ಜೊತೆಜೊತೆಗೆ ದಾರಿ ತಪ್ಪಿಸುವ ಪುಸ್ತಕಗಳೂ ಇರುತ್ತವೆ. ನಮ್ಮನ್ನು ಗೊಂದಲಕ್ಕೀಡುಮಾಡುವ ರಾಶಿ ರಾಶಿ ಪುಸ್ತಕಗಳೂ ಇಂದು ಲಭ್ಯವಿವೆ.

ಒಟ್ಟಾರೆ ದೃಶ್ಯ ಮಾಧ್ಯಮಗಳ ಆಟಾಟೋಪ ದಿನೇ-ದಿನೇ ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ ಪುಸ್ತಕಗಳನ್ನು ಪ್ರೀತಿಸುವುದು, ಅವುಗಳನ್ನು ಓದಿ ಸಂಗ್ರಹಿಸಿಟ್ಟು ಕೊಳ್ಳುವುದು ಮಾನಸಿಕ ಸ್ವಾಸ್ಥ್ಯಕ್ಕೆ ಬೇಕೇಬೇಕಾದ ಅಗತ್ಯ ಎಂಬುದನ್ನು ಎಲ್ಲರೂ ಮನಗಾಣಬೇಕಿದೆ. ಕೇವಲ 'ಪುಸ್ತಕ ದಿನ'ವನ್ನು ಹೆಸರಿಗೆ ಮಾತ್ರ ಆಚರಿಸಿದರೆ ಸಾಲದು. ಸಾಮಾನ್ಯ ಜನರಲ್ಲಿ ಪುಸ್ತಕ ಪ್ರೀತಿ ಹೆಚ್ಚಿಸುವಂತಹ ಕೆಲಸ ನಮ್ಮ ನಿಮ್ಮದಾಗಬೇಕು. ಅಂದಾಗ ಮಾತ್ರ ವಿಶ್ವ ಪುಸ್ತಕ ದಿನ ಅರ್ಥಪೂರ್ಣವಾಗುತ್ತದೆ.

**ಜಗನ್ನಾಥ ಅ. ಸಣ್ಣೂರ**
ಮನೆ ನಂ. ಎಫ್-೧೭/೪, ವಾಸವದತ್ತಾ ಸಿಮೆಂಟ್ ಕಾಲೋನಿ
ಸೇಡಂ - ೫೮೫ ೨೨೨, ಗುಲಬರ್ಗಾ ಜಿಲ್ಲೆ

# ಒಂದೇ ಬಣ್ಣದ ಹಕ್ಕಿಗಳು

ಮಕ್ಕಳ ನಾಟಕ

ಆರ್ ವಿ. ಭಂಡಾರಿ

[ಧರ್ಮರಾಯ ಪ್ರಸನ್ನ ಹಾಟೆಲ್‌ನ ಒಂದು ರೂಮು. ಅದೇ ಹಾಟೆಲ್‌ನಲ್ಲಿ ಕೆಲಸ ಮಾಡುತ್ತಿರುವ ಮಕ್ಕಳು ಆರೇಳು ಜನ. ಹಸನ್ ಎಂಬುವನ ವಯಸ್ಸು ಸುಮಾರು ಏಳು ವರ್ಷ. ಉಳಿದವರು ೧೦-೧೨ರ ಸರಣಿಯವರು. ರಾತ್ರಿ ಗಂಟೆ ಒಂಬತ್ತು, ಮಕ್ಕಳು ತಮಾಷೆಯಲ್ಲಿ ತೊಡಗಿದ್ದಾರೆ. ಹಸನ್ ಮಧ್ಯದಲ್ಲಿದ್ದು ಸುತ್ತ ಹುಡುಗರು ಕುಣಿಯುತ್ತಾರೆ]

ದೃಶ್ಯ-೧

ಬೊಂಡ ಬೊಂಡ ಕಾಯ್‌ಬೊಂಡ
ಕಾಯ್‌ಬೊಂಡಲ್ಲ ಕೊಳಕ ಬೊಂಡ
ಅದಕಿಂತ ದೊಡದು ತಲೆಬೊಂಡ
ಯಾರ್ ತಲೆ ಆಯ್‌ಬೊಂಡ
ಹಸನ್ ತಲೆ ಆಯ್‌ಬೊಂಡ
ಯಾರ್‌ತಲೆ ಆಯ್‌ಬೊಂಡ
ಯಾರ್‌ತಲೆ ಕೊಳಬೊಂಡ
ಹಸನ್‌ನ ತಲೆ ಕೊಳಬೊಂಡ
ಯಾರ್‌ತಲೆ ಬರಿಬೊಂಡ
ಹಸನ್ ತಲೆ ಬರಿಬೊಂಡ
ಹಸನ್ ತಲೆ ದೊಡಬೊಂಡ
ದೊಡಬೊಂಡ ದೊಡಬೊಂಡ
ಹಸನ್ ತಲೆಬೊಂಡSSSS

**ಹಸನ್** : (ಸಿಟ್ಟಿನಿಂದ) ನಿಂದು ತಲೆಬೊಂಡ (ಪ್ರತಿಯೊಬ್ಬರನ್ನು ತೋರಿಸುತ್ತ) ನಿನದು ಬರಿಬೊಂಡ, ನಿನದು ದೊಡಬೊಂಡ, ಮೇನೇಜರ್ ಹತ್ರ ಹೇಳತೇನೆ. ನಿಮನೆಲ್ಲ ಹೊರಹಾಕತಾರೆ.

**ನಾಗೇಶ** : (ವ್ಯೆಯಾರದ ನಟನೆ ಮಾಡಿ) ಆಹSS ಅSSಹ. ಮೇನೇಜರರ ಹತ್ತಿರ ಹೇಳತೀಯಾ ?

**ರಮೇಶ** : ಮೊನ್ನೆ ಏನು ಹೇಳಿದೆ ?

**ಕೋಸ್ತ** : ಮೇನೇಜರ್ ಕಾಳಪ್ಪ ಕೊಳಬೊಂಡ ಅಂತಾನೆ. (ಹಸನ್‌ನ ಹಾಗೆ ನಟನೆ)

**ನಾಣಿ** : ಮೇನೇಜರ ಏನು ಹೇಳಿದರು.

**ಚಂದ್ರು** : ಹೋಗ್ ಹೋಗ್ ಆಕಡೆ. ಬಂದ್ಬಿಟ್ಟ ಅಲ್ವೇನ್ ಮತ್ತೆ ನಿನ್ನ ತಲೆ ಕೊಳಬೊಂಡ ?

**ಎಲ್ಲರೂ** : (ದೊಡ್ಡದಾಗಿ) ಬೊಂಡSSS

**ಹಸನ್** : (ಅಳುತ್ತ) ಅಯ್ಯಯ್ಯೋ..! ನೀವೆಲ್ಲ ನೀವೆಲ್ಲ ಸತ್ತೇ ಹೋಗಿ

[ಎಲ್ಲರೂ ನಾ ಸತ್ತಪ್ಪೋ ನಾಸತ್ತೇ ಎಂದು ಒಬ್ಬರ ಮೇಲೆ ಒಬ್ಬರು ಸತ್ತಂತೆ ಬೀಳುವುದನ್ನು ನೋಡಿ ಹಸನ್ ನಗುವನು.]

**ಹಸನ್** : ಗರುಡಣ್ಣ ಬರಲಿ ಎಲ್ಲಾ ಹೇಳಕೊಡತೇನೆ.

**ನಾಗೇಶ** : (ಎದ್ದು) ಏನು ಹೇಳತಿ ?

**ರಮೇಶ** : (ಎದ್ದು) ಏನ್ ಹೇಳತಿ ? ನನ್ನ ಬಗ್ಗೆ ಏನ್ ಹೇಳತಿಯಾ? ಬೇಡೋ, ಕೈ ಮುಗಿತೇನೆ.

**ಕೋಸ್ತ** : (ಎದ್ದು) ಹೇಳಕೊಟ್ಟು ಏನ್ ಮಾಡ್ತಿ?

**ಹಸನ್**: ಹೊಡೆಸತ್ತೇನೆ.

**ನಾಣಿ** : ಮತ್ತೇನ ಹೇಳ್ಕೊಡ್ತಿ?

**ಹಸನ್** : ನನಗೆ.... ನನಗೆ...

**ಚಂದ್ರು** : ಏನು ಹೇಳಿದರು ?

**ಹಸನ್** : ನನಗೆ..... ನನಗೆ ಕೊಳಬೊಂಡ ಎಂದು ಅಂದ್ರು.....

**ಎಲ್ಲರೂ** : (ಎದ್ದು ಅವರಲ್ಲಿ ಒಬ್ಬ) ಏನು ಹೇಳಿದರು ?

**ಉಳಿದವರು** : ಕೊಳಬೊಂಡ, ತಲೆಬೊಂಡ (ಗುಪ್ಪ ಹಾಕಿ ಕುಣಿಯುವರು)

**ಚಂದ್ರು** : ಅರೆರೇ ಅಲ್ಲಿ ನೋಡಿರೋ. ಆ ಮರವನ್ನು ನೋಡಿ. (ಎಲ್ಲರೂ ಇಣುಕುವರು)

**ನಾಣಿ** : ಏನು ಏನಾಗಿದೆ ?

**ಕೋಸ್ತ** : ಹಕ್ಕಿಗಳು. ಎಷ್ಟೊಂದು ಹಕ್ಕಿಗಳು !

**ರಮೇಶ** : ಹೌದಲ್ಲ, ಏನು ಕೂಗುತವೆ, ಚಿಲಿಪಿಲಿ, ಚಿಲಿಪಿಲಿ

**ನಾಗೇಶ** : ಬನ್ನಿರೋ, ಬನ್ನಿರಿ ನೋಡಿ ಬರೋಣ (ಎಲ್ಲರೂ ಮೆಟ್ಟಿಲು ಇಳಿದು ಹೋಗುವರು. ಹಸನ್ ಕೂಡ ಸಾವಕಾಶ ಅವರನ್ನು ಹಿಂಬಾಲಿಸುತ್ತಾನೆ.)

ದೃಶ್ಯ-೨

[ದೊಡ್ಡದೊಂದು ಮರ, ಮರದ ಹತ್ತಿರ ಟ್ಯೂಬ್‌ಲೈಟ್. ಮರದ ಮೇಲೆ ಹಕ್ಕಿಗಳು ಚಿಲಿಪಿಲಿಗುಡುತ್ತಿವೆ]

**ನಾಗೇಶ** : ಎಷ್ಟು ದೊಡ್ಡ ಮರ !

**ರಮೇಶ** : ಇದೆಂಥ ಮರ ? ನಮ್ಮೂರಲ್ಲಿ ಇಂಥ ನೂರಾರು ಮರಗಳಿವೆ. ಒಂದೊಂದು ದಿನ ಐವತ್ತು ಅರವತ್ತು ಕೋಡಗಳು (ಕೋಡಗ) ಬರುತ್ತವೆ. ಹೀSಗೆ ತಲೆ ಮೇಲೆತ್ತಿ ನೋಡಿದರೆ ಕಿರು ಕಿರು ಎಂದು ನಮ್ಮನ್ನೇ ಅಣಕಿಸುತ್ತವೆ !

**ಕೋಸ್ತ** : ನಮ್ಮೂರಲ್ಲಿ ಹೊಳೆ ಇದೆ. ಶಾಲೆಗೆ ರಜೆ ಇದ್ದಾಗೆಲ್ಲ ನಾವು ದೋಣಿ ಆಟ ಆಡುತ್ತಿದ್ದೆವು.

**ನಾಣಿ** : ಅದಿರಲಿ, ಇಲ್ಲಿ ನೋಡು ಹಕ್ಕಿಗೂಡು... ಒಂದು

**ಚಂದ್ರು** : ಇಲ್ಲಿ, ಇಲ್ಲಿ ನೋಡಿರಿ ಎರಡು... ಮೂರು... ಅರರೇ ನಾಲಕು, ನಾಲಕುS !

**ನಾಗೇಶ** : ಎಲ್ಲಿಂದ ಬಂದವೊ ಮಾರಾಯ ಇಷ್ಟೊಂದು ಹಕ್ಕಿಗಳು !

**ರಮೇಶ** : ನಮ್ಮೂರಿಂದಲೇ ಇರಬೇಕು.

**ಕೋಸ್ತ** : ನಮ್ಮೂರಿಂದಲೂ ಬಂದಿರಬೇಕು. ನೋಡು ನೋಡು ಆ ಬಣ್ಣದ ಹಕ್ಕಿ ಉಂಟಲ್ಲ ಅದು ನಮ್ಮೂರಿಂದು.

**ನಾಣಿ** : ಅಽಹ, ನಿಮ್ಮೂರಿಂದು, ಅದರ ಮೇಲೆ ಹೆಸರು ಬರೆದಿದೆಯಾ ?

**ಚಂದ್ರು** : ಇದು ದೇವರಾಣೆ ಕೋಸ್ತನ ಊರಿಂದಲ್ಲ, ನಮ್ಮೂರಿಂದು. ನಮ್ಮ ಮನೆಯ ಮುಂದಿನ ಮರದಲ್ಲಿ ಇಂಥದ್ದೇ ಇತ್ತು. ಅದೇ ಇದು. ನಾನೇ ನೋಡಿದ್ದೇನೆ.

**ಹಸನ್** : ಇಲ್ಲಿದೆ ನೋಡಿ ನಮ್ಮೂರಿಂದು. ನನ್ನ ಕಡೆಗೇ ತಲೆ ಕುಣಿಸುತ್ತಿದೆ.

**ಎಲ್ಲರೂ** : ಅಹಹ ಬಂದಬಿಟ್ಟ ಕೊಳಬೊಂಡ, ತಮ್ಮೂರಿಂದಂತೆ, ನಿಮ್ಮೂರಲ್ಲಿ ಮರವಾದರೂ ಇದೆಯಾ? ಬಂದುಬಿಟ್ಟ ದೊಡ್ಡ ತಲೆ ಹೊತಕೊಂಡು - ತಲೆ ಕುಣಸತದಂತೆ...

**ರಮೇಶ** : ಬಿಡಿರೊ ಅವನ್ನ. ನೋಡಿ ಎಷ್ಟೊಂದು ಹಕ್ಕಿ ಗೂಡ. ಬನ್ನಿ ಯಾರು ಕಲ್ಲು ಹೊಡೆದು ಹಕ್ಕಿಗೂಡು ಉದುರಿಸುತ್ತಾರೋ ಅವರಿಗೆ ಬಹುಮಾನ.

**ಕೋಸ್ತ** : ಬಹುಮಾನ ? ಯಾವುದಾದರೂ ಅಂಗಡಿ ಮೇಲೆ ಬಿದ್ದರೆ... ಬಹುಮಾನ ನಾಳೆ ಮೇನೇಜರರಿಂದ...

**ನಾಣಿ** : ನಾಳೆ ಏನು, ಈಗಲೇ ... ಗಸ್ತು ತಿರುಗುವ ಪೊಲೀಸ್ ಕಂಡರೆ ಸಾಕು, ಲಾಟಿ ಕುಣಿಯತೊಡಗುತ್ತದೆ.

**ಹಸನ್** : ಏ ಏ, ಆ ಗೂಡಿಗೆ ಹೊಡೆಯಬೇಡಿ, ಮರಿಹಕ್ಕಿ ಇದ್ದೀತು.

**ಎಲ್ಲರೂ** : ಅಪಶಕುನ ಮಾಡತೀಯಲ್ಲೋ-ಬೊಂಡ..

**ಹಸನ್** : ನೋಡಿ ಹಾಗೆ ಹೇಳಿದರೆ ನನಗೆ ಸಿಟ್ಟು ಬರತ್ತದೆ.

**ಎಲ್ಲರೂ** : ಸಿಟ್ಟು ಬರತದಾ ? ಯಾದರಿಂದ ?

**ರಮೇಶ** : ಯಾದರಿಂದ ?

**ನಾಗೇಶ** : ಅಲ್ಲಲ್ಲ, ಈ ಈ ದಾರಿಂದಾನಾ ?

**ಕೋಸ್ತ** : ಅಥವಾ ಆ ದಾರಿಂದಾನಾ ?

**ನಾಣಿ** : ಮತ್ತೆ ಯಾವ ದಾರಿಂದಪ್ಪಾ ?

**ಹಸನ್** : (*ಮೋರೆ ಸೊಟ್ಟಗೆ ಮಾಡಿಕೊಳ್ಳುತ್ತಾನೆ*)

**ಎಲ್ಲರೂ** : ಓ ಹೊ ಹೊ ಸಿಟ್ಟು ಬರತದಾ ? ಹೇಗಿರತದಪ್ಪ ಸಿಟ್ಟು ?

**ರಮೇಶ** : ಹೀಗಿರತದಾ ? (*ಕಣ್ಣು ಕೆರಳಿಸುತ್ತಾನೆ*)

**ನಾಗೇಶ** : ಹೀಗಿರತದಾ (*ಸೆಟೆದು ನಿಲ್ಲುತ್ತಾನೆ*)

**ಕೋಸ್ತ** : ಹೀಗಿರತದಾ ? (*ಕಣ್ಣೀರು ಸುರಿಸುತ್ತಾನೆ*) ಎಲ್ಲರೂ ನಗುತ್ತಾರೆ

**ನಾಣಿ** : ಅಲ್ಲ, ಹೀಗಿರತದಾ ? (*ಮುಷ್ಟಿ ಬಿಗಿದು ಕೈ ಎತ್ತುತ್ತಾನೆ*)

**ಹಸನ್** : ನೋಡು ಮತ್ತೆ (*ಅವನನ್ನು ಗುದ್ದುತ್ತಾನೆ*)

**ಚಂದ್ರು** : ಹೇ ಸುಮ್ಮನಿರಿರೋ, ಅವನ ತಂಟೆಗೆ ಹೋಗಬೇಡಿ. ಆದರೆ ಒಂದು ಷರತ್ತು. ನಾವೆಲ್ಲರೂ ನಮ್ಮ ನಮ್ಮ ಹೆಸರನ್ನು ಹೇಳಿಕೊಳ್ಳಬೇಕು. ನಿಲ್ಲಿರಿ ಸಾಲಾಗಿ... ನನ್ನ ಹೆಸರು ಚಂದ್ರು.

**ಕೋಸ್ತ** : ನಾನು ಕೋಸ್ತ.

**ನಾಣಿ** : ನಾನು ಮಾಣಿ ಅಲ್ಲ ಅಲ್ಲ ನಾಣಿ.

**ನಾಗೇಶ** : ನಾನು ನಾಗೇಶ

**ರಮೇಶ** : ನಾನು ರಮೇಶ

**ಹಸನ್** : ನಾನು ಹಚನ್

**ಎಲ್ಲರೂ** : ಹಚನ್, ಆಹಹ... ಹಚನ್, ಬೊಂಡ ಅಲ್ಲ, ಹಚನ್ ಅಲ್ಲಲ್ಲ ಹಸನ್ ಅಯ್ಯ ಗೆಳೆಯಾ ಹಸನ್ ಅಲ್ಲಲ್ಲ ಅಚನ್ ಆ ಗೂಡು ಹೋಗಲಿ ಈ ಗೂಡನ್ನು ಉದುರಿಸೋಣವೇ ?

**ಹಸನ್** : ಅದರಲ್ಲಿ, ಆ ದೊಡ್ಡ ಗೂಡಿನಲ್ಲಿ ಗರುಡ, ದೊಡ್ಡ ಗರುಡ ಇದೆ. ಅದಕ್ಕೆ ಸಿಟ್ಟು ಬಂದು ಹಾರಿಬಂದು ನಿಮ್ಮ ತಲೆಯನ್ನು ಕುಟುಕ್ ಕಟುಕ್ ಎಂದು ಕುಟ್ಟುತ್ತದೆ.

**ಎಲ್ಲರೂ** : ಹೌದಾ ?

**ನಾಗೇಶ** : ಹಾಗಾದರೆ ಒಂದು ಉಪಾಯ ಮಾಡುವ. ಹಸನ್‌ನನ್ನು ಎಲ್ಲರೂ ಎತ್ತಿ ಮರ ಹತ್ತಿಸುವ. ಅವನು ಹೋಗಿ ಒಂದು ಹಕ್ಕಿಯನ್ನು ಹಿಡಿದು ತರಲಿ. ಹೇಗೂ ಇವನ ತಲೆಯೂ ಹಕ್ಕಿ ತಲೆ ಹಾಗೆ ಕುಂಬಳಕಾಯಿ... ಅಲ್ಲಲ್ಲ... ರವುಂಡ್ ಆಗಿದೆ. ತನ್ನದೆ ತಲೆಯವನೆಂದು ಹಕ್ಕಿ ತಿಳಿದು ಸುಮ್ಮನುಳಿಯುತ್ತದೆ.

**ಹಸನ್** : ಅಯ್ಯಯ್ಯೋ ! ನನಗೆ ಹೆದರಿಕೆಯಪ್ಪಾ. ನಾನು ಕೆಳಗೆ ಬಿದ್ದು ಸತ್ತೇ ಹೋಗುತ್ತೇನೆ.

**ಎಲ್ಲರೂ** : ಹಿಡಿರೋ (*ಎಲ್ಲರೂ ಸೇರಿ ಆತನನ್ನು ಎತ್ತುತ್ತಾರೆ*)

**ಹಸನ್** : ಅಯ್ಯಯ್ಯೋ, ಸತ್ತೇ ಮಾ-ಬಾಪ್, ಹಂ ಮರಗಯಾ...

[*ಗರುಡ ಎಂಬ ಹುಡುಗ ಬರುತ್ತಾನೆ. ಆತ ಕೂಡ ಅದೇ ಹೊಟೆಲ್‌ನ ಕಾರ್ಮಿಕ. ವಯಸ್ಸು ೧೩-೧೪.* ]

**ಗರುಡ** : ಏ, ಏನರೋ ಅದು ? ಕೆಳಗೆ ಬಿಡಿರಿ ಅವನನ್ನ. ಬೇರೆ ಕೆಲಸ ಇಲ್ಲ ನಿಮಗೆ ? ಯಾಕೆ ಯಾವಾಗ ನೋಡಿದ್ರೂ ಅವನನ್ನು ಗೋಳು ಹೊಯ್ಸಕೋತೀರಿ. (*ಹಸನ್‌ನ್ನು ಬಿಡುವರು. ಆತ ಓಡಿ ಹೋಗಿ ಗರುಡನ ಬಳಿ ಸೇರುವನು.*)

**ಹಸನ್** : ಗರುಡಣ್ಣ, ಗರುಡಣ್ಣ, ನೀ . ಎಲ್ಲಿ ಹೋಗಿದ್ದೆ ? ದಿನದಕಿಂತ ತಡ ?

**ಗರುಡ** : ಮರಿ, ನಾನು ಶಾಲೆಗೆ ಹೋಗಿದ್ದೆ.

**ಎಲ್ಲರೂ** : ಶಾಲೆಗೆ !

**ಗರುಡ** : ಹೌದು, ನನಗೆ ಶಾಲೆಗೆ ಹೋಗುವ ಆಶೆ ಮೊದಲಿನಿಂದಲೂ ಇತ್ತು. ಆದರೆ ಆಗಲೇ ಇಲ್ಲ.

**ರಮೇಶ** : ನನಗೂ ಹಾಗೇ ಎರಡನೆಯ ತರಗತಿ ಓದುತ್ತಿದ್ದಾಗ ನನ್ನ ಅಪ್ಪ ಸತ್ತು ಹೋದ.

**ಹಸನ್** : ಆಂ, ಹೇಗೆ ಸತ್ತ ?

**ರಮೇಶ** : ಅವನು ಕೂಲಿಗೆ ಹೋಗತಿದ್ದ. ಒಂದು ದಿನ ಸಂಜೆ ಗದ್ದೆಪಾಳಿ ಮೇಲೆ ನಡೆದು ಬರುತ್ತಿರುವಾಗ ಒಂದು ಸರ್ಪ ಕಚ್ಚಿಬಿಟ್ಟಿತು. ಕೂಗುತ್ತಲೇ ಮನೆಗೆ ಓಡಿಬಂದ. ಅಷ್ಟರಲ್ಲಿ ವಿಷ ಏರಿಬಿಟ್ಟಿತ್ತು. ಸತ್ತು ಹೋದ. ನಮಗೆ ಬೇರೆ ಜಮೀನೂ ಇದ್ದಿರಲಿಲ್ಲ. ಮನೆಯಲ್ಲಿ ಇನ್ನೂ ಮೂರು ಜನ ಇದ್ದರು. ಯಾರದೋ ಮುಖಾಂತರ ನಾನು ಇಲ್ಲಿ ಬಂದೆ.

**ಚಂದ್ರು** : ನಾನು ಇಲ್ಲಿ ಬರುವ ಮೊದಲು ಬೇರೊಬ್ಬರ ಮನೆಯಲ್ಲಿ ಕೆಲಸಕ್ಕಿದ್ದೆ. ಅದಕ್ಕೂ ಮೊದಲು ಶಾಲೆಗೆ ಹೋಗುತ್ತಿದ್ದೆ. ಶಾಲೆ ಬಿಟ್ಟುಬಿಟ್ಟೆ ನಾನು ಕೆಲಸಕ್ಕೆ ಸೇರಿದ ಮನೆಯಲ್ಲಿ ಗಂಡ-ಹೆಂಡತಿಯಿಬ್ಬರೂ ನೌಕರಿ ಮಾಡುವವರಾಗಿದ್ದರು. ಮನೆಯಲ್ಲಿ ಒಂದು ಚಿಕ್ಕ ಮಗು. ಅವಳು ಬಾಲವಾಡಿಯಿಂದ ಬಂದ ಮೇಲೆ ಅವಳನ್ನು ಆಡಿಸಿಕೊಂಡಿದ್ದರಾಯಿತು. ನನಗೂ ಚಿತ್ರ ಬಿಡಿಸುವ ಹುಚ್ಚು. ಅವಳಿಗೆ ಆಡಲು ನಮನಮೂನೆಯ ಬಣ್ಣದ ಖಡು ತಂದು ಕೊಡುತ್ತಿದ್ದರು. ಒಂದು ದಿನ ನಾನು ಅವಳ ಎಲ್ಲಾ ಖಡು ತೆಗೆದುಕೊಂಡು ಎಲ್ಲಾ ಗೋಡೆಯ ಮೇಲೆ ಚಿತ್ರ ಬಿಡಿಸಿದ್ದೇ ಬಿಡಿಸಿದ್ದು.

**ಹಸನ್** : ಅರರೇ, ನನಗಾದರೂ ನಾಲ್ಕು ಬಣ್ಣದ ಖಡು ತರಬೇಕಾಗಿತ್ತು.

**ಚಂದ್ರು** : ಸುಮ್ಮನುಳಿಯೋ ಬೊಂಡ. ಖಡು ಅಂತೆ ಖಡು. ನನ್ನ ಗತಿ ಏನಾಯ್ತು ಬಲ್ಲೆಯಾ ?

**ಗರುಡ** : ಹೇಳು ಮಾರಾಯ ಹೇಳು.

**ಚಂದ್ರು** : ತಕ್ಕೊ ಅಕ್ಕೋರು ಮನೆಗೆ ಬಂದದ್ದೆ ಒಂದು ಸಪೂರಿ ಬೆತ್ತ ತಗೊಂಡು ಬಡದಿದ್ದೇ ಬಡದದ್ದು.

**ಹಸನ್** : ಸಽರಿ ಆಯ್ತು ನನಗೆ ಬಯತಿದ್ದಿಯಲ್ಲಾ ?...

**ಗರುಡ** : ಹಸನ್ ಚುಪ್‌ರಹೋ.

**ಚಂದ್ರು** : ಬಡದದ್ದು ಮಾತ್ರ ಅಲ್ಲ, ಮನೆಗೆ ಹೋಗು ಎಂದು ಕಳ್ಳದನಾನ ತೌರಿದ ಹಾಗೆ ತೌರಿದರು.

**ಗರುಡ** : ನಾಗೇಶ ನೀನು ಯಾಕೆ ಹೊಟೆಲ್ ಕೆಲಸಕ್ಕೆ ಬಂದೆ ?

**ನಾಗೇಶ** : ನಾನು... ನಾನು... ಹೀಗೆ-ನಿಮ್ಮಾಗೇ.

**ನಾಣಿ** : ನಿಮ್ಮಾಗೇ ಅಲ್ಲ; ನನಗೆ ಗೊತ್ತು. ಆತ ಖದೀಮ.

**ಗರುಡ** : ಹಾಗಂದ್ರೆ

**ಕೋಸ್ತ** : ನಾ ಹೇಳತೆ. ಇವನು ಶಾಲೆಗೆ ಹೋಗತಿದ್ದ. ಆಗ ಏನು ಉಪಾಯ ಮಾಡಿದ ಅಂದರೆ...

**ನಾಗೇಶ** : ಸುಮ್ಮನುಳಿಯೋ ಹುಚ್ಚ.

**ಕೋಸ್ತ** : ದಿನಾಲು ಶಾಲೆಗೆ ಹೋಗತೇನೆ ಎಂದು ಮನೆಯಿಂದ ಹೊರಡುವುದು (*ಅವನನ್ನು ನೋಡಿ ಕಣ್ಣು ಕೊಂಕಿಸುತ್ತ*) ದಾರಿಯಲ್ಲಿ ಎಲ್ಲಾದರೂ ಅಡಗಿಕೊಳ್ಳುವುದು. ಶಾಲೆ ಬಿಟ್ಟ ಮೇಲೆ ಮನೆಗೆ ಬಂದುಬಿಡುವುದು - ಸಂಭಾವಿತ ಪೋರನ ಹಾಗೆ.

**ಹಸನ್** : ವಾ, ವಾ ಅಚ್ಚಾ ಅಚ್ಚಾ ಹೈ.

**ಗರುಡ** : ಹಸನ್...

**ನಾಣಿ** : ಮುಂದೆ ನಾ ಹೇಳಲೆ, ಮಜಾ ಇದೆ.

**ನಾಗೇಶ** : ಏ, ಏ,....

**ನಾಣಿ** : ಒಂದಿನ ಈ ಗುಟ್ಟು ಮಾಸ್ತರರಿಗೆ ತಿಳೀತು. ಅವರು ಒಂದುಪಾಯ ಮಾಡಿದರು. ನಾಳೆ ಸರಕಾರದವರು ಎಲ್ಲರಿಗೂ ಶಾಲೆಯಲ್ಲಿ ನಾಲ್ಕು ನಾಲ್ಕು ಲಾಡು ಕೊಡುತ್ತಾರೆ. ಎಲ್ಲರೂ ಶಾಲೆಗೆ ಬನ್ನಿ ಎಂದು ಹೇಳಿ ಕಳಿಸಿದರು. ಆ ದಿನ ನಾಗೇಶ ಒಳ್ಳೆ ಗಮ್ಮತ್ತಿನಿಂದ ಶಾಲೆಗೆ ಹೋದ.

**ರಮೇಶ** : ಆಗ ಮಾಸ್ತರು ಈತನನ್ನು ಹಿಡಿದುಕೊಂಡು ಬೆನ್ನಮೇಲೆ ಲಾತಾ ಹಾಕಿದ್ದೇ ಹಾಕಿದ್ದು. ಲಾಡು ಬೇಕಾ, ನಾಲ್ಕು ನಾಲ್ಕು ಲಾಡು ಖದೀಮ [*ಎಲ್ಲರೂ ನಗೆಯಾಡುವರು. ಹಸನ್ ಅಚ್ಚಾ ಅಚ್ಚಾ ಎಂದು ಕುಣಿಯುವನು.*]

**ಕೋಸ್ತ** : ನನ್ನದು ಹಾಗಲ್ಲ, ನಾನಾಗಿಯೇ ಕೆಲಸಕ್ಕೆ ಬಂದೆ. ನನಗೆ ಹಸಿವು ಜಾಸ್ತಿ. ಮನೆಯಲ್ಲಿ ಸಾಕಷ್ಟು ತಿನ್ನಲು ಸಿಕ್ಕುತಿರಲಿಲ್ಲ. ಹಾಗಾಗಿ ನಾನಾಗೇ ಒಂದಿನ ಮನೆಬಿಟ್ಟು ಓಡಿಬಂದುಬಿಟ್ಟೆ ಆಮೇಲೆ ಮನೆಗೆ ಸುದ್ದಿ ಮುಟ್ಟಿಸಿದೆ. ನನಗೆ ಒಂದು ಆಲೋಚನೆ ಇದೆ...

**ಗರುಡ** : ಏನದು ?

**ಕೋಸ್ತ** : ಈಗ ಬರುವ ಸಂಬಳದಲ್ಲಿ ಅರ್ಧ ಮನೆಗೆ ಕಳಿಸುತ್ತಿದ್ದೇನೆ. ಇನ್ನರ್ಧ ಹಾಗೇ ಇಡುತ್ತಿದ್ದೇನೆ. ಎರಡು ವರ್ಷ ಆದ ಮೇಲೆ ಎಲ್ಲ ದುಡ್ಡು ಕೂಡಿಸಿ ಒಂದು ಗೂಡಂಗಡಿ ಮಾಡಬೇಕೆಂದಿದ್ದೇನೆ.

**ಚಂದ್ರು** : ಶೇಖಮಹ್ಮದನ ಆಲೋಚನೆ.

**ಗರುಡ** : ಯಾಕೆ ಶೇಖಮಹ್ಮದನ ಕತೆ ? ಆಲೋಚನೆ ಸರಿಯಾಗೇ ಇದೆ. ಹಾಗೆ ಮನಸ್ಸಿಗೆ ಒಂದು ಗುರಿ

ಇರಬೇಕು. ಆ ಗುರಿಯ ಸಾಧನೆಗಾಗಿ ದುಡಿಯಬೇಕು. ಅಂದರೇ ಖುಶಿ ಇರತದೆ. ಅದೇ ಚೆಂದ.

**ಕೋಸ್ತ** : ನಾನು ಒಂದು ಸಿನೇಮಾಕ್ಕೂ ಹೋಗುವುದಿಲ್ಲ. ಒಂದು ಕೊಟ್ಟೆನೂ ತಿನ್ನುವುದಿಲ್ಲ.

**ಗರುಡ** : ಏನು ಕೊಟ್ಟೆ?

**ಕೋಸ್ತ** : ಕೊಟ್ಟೆ ಎಂದರೆ ಗುಟ್ಕ. ನಾಗೇಶ, ನಾಣಿ ಎಲ್ಲಾ ತಿಂತಾರೆ. ದಿನಕ್ಕೆ ನಾಲ್ಕು ಐದು.

**ಹಸನ್** : ನನ್ನ ಹತ್ತಿರಾನೂ ತಿನ್ನು ಮಜಾ ಆಗತದೆ ಅಂತಾರೆ.

**ಗರುಡ** : ತಿನ್ನಬಾರದು. ಮೊದಮೊದಲು ಒಂಥರ ಗಮ್ಮತ್ ಅನಿಸತೆ. ಆಮೇಲೆ ಅದೇ ಚಟ ಆಗತದೆ. ದಿನಕ್ಕೆ ನಾಲ್ಕೂ ಐದು ಅಲ್ಲ, ಹತ್ತೂ ಇಪ್ಪತ್ತೂ ಆಗತದೆ. ಅದರಿಂದ ದುಡಿದ ದುಡ್ಡೆಲ್ಲ ಚಟಕ್ಕೇ ಹೋಗತದೆ. ಅಷ್ಟಲ್ಲದೆ ಬಾಯಿಗೆ ಕ್ಯಾನ್ಸರ್ ಆಗತದೆ. ಕ್ಯಾನ್ಸರ್ ಭಯಂಕರ ರೋಗ, ಸತ್ತೇ ಹೋಗತಾರೆ.

**ಹಸನ್** : ಖರೇ ?

**ಗರುಡ** : ಖರೇ ಎಂದರೆ ಖರೆ. ನಾವು ನಮ್ಮ ಆರೋಗ್ಯವನ್ನು ಚೆನ್ನಾಗಿ ಕಾಪಾಡಿಕೊಳ್ಳಬೇಕು. ಹೆಲ್ತ್ ಈಸ್ ವೆಲ್ತ್.

**ಹಸನ್** : ಏನದು ಗರುಡಣ್ಣ ಹೆಲ್ತಿಂದರೆ ? (ಎಲ್ಲರೂ ನಗುವರು.)

**ಗರುಡ** : ಹೆಲ್ತ ಎಂದರೆ, ಹೇಲ್ತಿಂದರೆ ಅಲ್ಲವೋ ಚೋಟೂ, ಹೆಲ್ತ ಈಸ್ ವೆಲ್ತ ಎಂದರೆ ಆರೋಗ್ಯವೇ ಭಾಗ್ಯ. ನಮ್ಮ ಆರೋಗ್ಯ ಚೆನ್ನಾಗಿದ್ದರೆ ನಾವು ಎಲ್ಲಿಯಾದರೂ, ಎಷ್ಟೇ ಕಷ್ಟಪಟ್ಟಾದರೂ ಬದುಕಬಹುದು. ಹೋಗಲಿ ಇಷ್ಟೆಲ್ಲಾ ಕಷ್ಟಪಟ್ಟಿದ್ದೀರಿ ! ಒಬ್ಬೊಬ್ಬರದು ಒಂದೊಂದು ಥರ.

**ನಾಗೇಶ್** : ಒಂದೊಂದು ಥರಾನೇ. ಈ ನಾಣಿ ತಾ ದೊಡ್ಡ ಸಂಭಾವಿತನ ಹಾಗೆ ಮಾತಾಡತಾನೆ ತನ್ನದು ಮಾತ್ರ ಯಾರಿಗೂ ತಿಳಿಯದು ಅಂದುಕೊಂಡಿದ್ದಾನೆ.

**ಗರುಡ** : ಏನದು ?

**ನಾಗೇಶ್** : ಈತ ಆದಿತ್ಯವಾರ ಬಿಡುವಿನಲ್ಲಿ ಪೇಟೆಗೆ ಹೋಗಿ ಯಾರಿಗೂ ಕಾಣದ ಹಾಗೆ....

**ನಾಣಿ** : ಸುಳ್ಳು, ಸುಳ್ಳೇ ಸುಳ್ಳು.

**ನಾಗೇಶ್** : ಓಸಿ ಆಡತಾನೆ.

**ಗರುಡ** : ಹೌದೇನೋ ನಾಣಿ ! ನೋಡಪಾ ನೀನು ಬಂದದ್ದು ಯಾಕೆ? ಪ್ರತಿ ತಿಂಗಳು ಮನೆಗೆ ಹಣ ಕಳಿಸ್ತೀಯೋ ಇಲ್ಲವೋ ? ಓಸಿ ಆಡಿ ದೊಡ್ಡದೊಡ್ಡವರೇ ದಿವಾಳಿ ಆಗಿಹೋಗಿದ್ದಾರೆ. ಇವೆಲ್ಲ ಕೆಟ್ಟ ಚಟ, ಅಡ್ಡಕಸುಬಿನಿಂದ ಹಣ ಗಳಿಸಲು ಮನಸ್ಸು ಮಾಡಬಾರದು. ನೀವೆಲ್ಲಾ ಒಂದೊಂದು ಬಗೆಯಿಂದ ಕಷ್ಟಪಟ್ಟಿದ್ದೀರಿ. ನೀವೆಲ್ಲ ಯಾಕೆ ಶಾಲೆ ಕಲಿಯಬಾರದು.

**ಎಲ್ಲರೂ** : (*ಹಸನ್ ಹೊರತುಪಡಿಸಿ*) ನಾವಾ ? ಶಾಲೆ ?

**ಗರುಡ** : ಹೌದು, ಯಾಕೆ ಆಗಬಾರದು ? ನಾನು ಶಾಲೆ ಬಿಟ್ಟವನೇ. ಎಂಟನೆಯ ತರಗತಿಯಲ್ಲಿ ಓದುತ್ತಿದ್ದಾಗಲೇ ಶಾಲೆ ಬಿಟ್ಟೆ.

**ಎಲ್ಲರೂ** : ಯಾಕೆ ಶಾಲೆ ಬಿಟ್ಟೆ?

**ಗರುಡ** : ನಿಮ್ಮ ಹಾಗೇ ಒಬ್ಬೊಬ್ಬರಿಗೆ ಒಂದೊಂದು. ಒಟ್ಟಾರೆ ಹೊಟ್ಟೆಗೆ ಇದ್ದಿರಲಿಲ್ಲ.

**ಹಸನ್** : ಈಗ ?

**ಗರುಡ** : ಈಗ ನೀವೇ ನೋಡುತ್ತೀರಲ್ಲ ನಿಮ್ಮೊಟ್ಟಿಗೇ ಕೆಲಸ ಮಾಡುತ್ತೇನೆ. ನಿಮ್ಮೊಟ್ಟಿಗೇ ಊಟ.

**ಎಲ್ಲರೂ** : ಮತ್ತೆ ಶಾಲೆ ?

**ಗರುಡ** : ಅದೇ ಹೇಳತೇನೆ. ಇಲ್ಲಿಂದ ತುಸು ದೂರ ನಗರದಲ್ಲಿ ನಮ್ಮಂಥವರಿಗೆ ಅನುಕೂಲವಾಗಲೆಂದು ನಡೆಸುವ ರಾತ್ರಿ ಶಾಲೆಗಳಿವೆ. ಅಲ್ಲಿಗೆ ಹೋಗುತ್ತೇನೆ. ನನ್ನ ದುಡಿತದಿಂದ ಬಂದ ಅರ್ಧ ಭಾಗ ಹಣ ಅದಕ್ಕೇ ಖರ್ಚಾಗುತ್ತದೆ. ಆದರೆ ನನ್ನ ಮನಸ್ಸು : ಇನ್ನು ಮೂರು ವರ್ಷದಲ್ಲಿ ಎಸ್‌ಎಸ್‌ಎಲ್‌ಸಿ ಪರೀಕ್ಷೆ ಪಾಸುಮಾಡುತ್ತೇನೆ. ಹಾಗೇ ಪಿಯುಸಿ. ಹಾಗೇ ಹಾಗೇ ದೊಡ್ಡ ವಕೀಲ ಆಗಬೇಕೆಂದಿದ್ದೇನೆ.

**ಹಸನ್** : ಅರೇ ಅಲ್ಲಾ, ವಕೀಲ, ಮೈಭೀ ಚಾಹತಾ ಹೂಂ. ವಕೀಲ (ಎಲ್ಲರೂ ನಗುತ್ತಾರೆ)

**ರಮೇಶ** : ವಕೀಲಂತೆ ವಕೀಲ. ರಾತ್ರಿ ಹಸೆಯಲ್ಲಿ ಮಲಗಿದರೆ ಬೆಳಿಗ್ಗೆ ಏಳುವಾಗ ತಲೆಬೊಂಡ ಪೂರ್ವದಿಂದ ಪಶ್ಚಿಮಕ್ಕೆ ಇರುತ್ತದೆ.

**ಗರುಡ** : (*ನಗುತ್ತ*) ಅಂದರೆ ಭೂಮಿ ಹನ್ನೆರಡು ತಾಸಿಗೆ ಅರ್ಧ ಸುತ್ತು ತಿರುಗುತ್ತದೆ ಎನ್ನುವುದು ಸರೀ ಆಯ್ತು.

**ಹಸನ್** : ಏನು, ಭೂಮಿ ತಿರಗತದಾ ?

**ಗರುಡ** : ಹೌದು.

**ಹಸನ್** : ಅರೆ ಅಲ್ಲಾ, ಅದ ಹೇಗೆ ಭೂಮಿ ತಿರಗತೆ ?

**ಗರುಡ** : ಹೌದು ಹಸನ್, ಭೂಮಿ ತನ್ನ ಸುತ್ತ ತಿರುಗುತ್ತ ಸೂರ್ಯನ ಸುತ್ತ ತಿರುಗುತ್ತದೆ. ತನ್ನ ಮೈಸುತ್ತನ್ನ ತಿರುಗಲು ಅದಕ್ಕೆ ಇಪ್ಪತ್ನಾಲ್ಕು ತಾಸು ಬೇಕು. ಅದರಿಂದಲೇ ರಾತ್ರಿ - ಬೆಳಗು ಆಗುತ್ತದೆ. ಆದ್ದರಿಂದ ರಾತ್ರಿ ಹನ್ನೆರಡು ತಾಸು, ಹಗಲು ಹನ್ನೆರಡು ತಾಸು .

**ಹಸನ್** : ಅದು ಹೇಗೆ ನಿನಗೆ ಗೊತ್ತಾಯಿತು ?

**ಗರುಡ** : ಶಾಲೆಗೆ ಹೋಗಿ ಕಲಿತರೆ ಎಲ್ಲಾ ಗೊತ್ತಾಗುತ್ತದೆ.

**ಹಸನ್** : ಹಾಗಾದರೆ ನಾನೂ ಶಾಲೆಗೆ ಬರತೇನೆ. ನನ್ನ ಕರಕೊಂಡು ಹೋಗತೀಯಾ ?

**ಗರುಡ** : ಮುದ್ದಾಮ್ ಕರಕೊಂಡುಹೋಗತೇನೆ. ನಿನ್ನೊಬ್ಬನನ್ನೇ ಯಾಕೆ, ಇವರೆಲ್ಲ ಬರತ್ನೇನೆ ಎಂದರೆ ಎಲ್ಲರನ್ನೂ ಕರಕೊಂಡು ಹೋಗತೇನೆ. ಬರ್ತಿರೇನಪ್ಪಾ ?

**ಹಸನ್** : ನಾನು ಬರತೇನೆ.

**ಗರುಡ** : ನೀನು ಇನ್ನೂ ಚಿಕ್ಕವನು. ಇನ್ನೊಂದು ವರ್ಷ ಹೋಗಲಿ. ಆಗ ಇಲ್ಲಿಗೆ ಸಮೀಪವೇ ಒಂದು ಶಾಲೆಗೆ ನಿನ್ನ ಪರಿಚಯ ಮಾಡಿಕೊಡತೇನೆ.

**ಹಸನ್** : ಅಲ್ಲಿ ಮತ್ತೆ ಯಾರ್ಯಾರು ಇರತಾರೆ ?

**ಗರುಡ** : ನಿನ್ನ ಹಾಗೇ ಇದ್ದವರು. ಅನಾಥರು. ಆದರೂ ಒಳ್ಳೆಯದಾಗಬೇಕೆಂಬ ಮನಸ್ಸು ಉಳ್ಳವರು. ಹತ್ತಾರು ಜನರು. ಅರೆ, ಮಾತಾಡುತ್ತಾ ರಾತ್ರಿಯಾದುದೇ ತಿಳಿಯಲಿಲ್ಲ. ಮುಂಜಾನೆ ಬೇಗ ಏಳಬೇಕಲ್ಲ? ಗಸ್ತಿಯ ಮೇಲಿದ್ದ ಪೊಲೀಸ ಬಂದರೆ ಪಜೀತಿ. ಏಳಿ.

[*ಹಾಡು ಸಮೀಪಿಸುತ್ತದೆ. ಹಿಂದಿನಿಂದ ಧ್ವನಿ*]

**ಎಲ್ಲರೂ** : ಯಾರೋ ಹಾಡುತ್ತಾ ಬರುತ್ತಿದ್ದಂತಿದೆ.

**ಹಾಡು** : *ಚಿಂದಿ ಹೆಕ್ಕುವ ಮಕ್ಕಳು ನಾವು*
*ಮಲಗಲು ಇಲ್ಲ ತಾವು*
*ಗಲ್ಲಿ ಗಲ್ಲಿಗೆ ತಿರುಗುವೆವು*
*ಚಿಂದಿ ಆರಿಸಿ ತೆಗೆಯುವೆವು*

ಮೂರು ಕಾಸಿಗೆ ಮಾರುವೆವು
ಮರದಡಿ ರಾತ್ರಿ ಮಲಗುವೆವು
ಕಂಡರೆ ಪೋಲೀಸ್ ಒದೆಯುವರು.

*[ಗರುಡ ಮೊದಲಾದವರು ಕೂಡಿಕೊಳ್ಳುತ್ತಾರೆ. ಮರದ ಸುತ್ತ ತಿರುಗುತ್ತಾರೆ.]*

ಹಾಟೆಲ್‌ದಲ್ಲಿಯ ಮಕ್ಕಳು ನಾವು
ಮಾಲಿಕರೇ ನಮ್ಮಯ ಪಾಲಕರು
ಬಗೆಬಗೆ ಬಣ್ಣದ ಬೆಡಗಿನ ಹಕ್ಕಿ
ಉದ್ದಕೊಕ್ಕಿನ ಸಪೂರ ಹಕ್ಕಿ
ಸಣ್ಣ ಕಣ್ಣಿನ ದೊಡ್ಡದು ಹಕ್ಕಿ
ರೇಶಿಮೆ ಪುಚ್ಛದ ಬೆಡಗಿನ ಹಕ್ಕಿ
ಚಿಲಿಪಿಲಿ ಚಿಲಿಪಿಲಿ ಎನ್ನುವ ಹಕ್ಕಿ
ಎಲ್ಲಿಂದೆಲ್ಲಿಗೆ ಬಂದವು ಹಾರಿ
ಹಕ್ಕಿಗಳೆಲ್ಲವು ಮರವನು ಸೇರಿ
ಇರುಳಲಿ ಕನಸನು ಕಾಣುವರು
ಬೆಳಗಾಗಲು ಕೂಳಿಗೆ ಹೊರಡುವವು
ಕೂಳಿಗೆ ಹೊರಡುವವು ಹೊರಡುವವು.

ದೃಶ್ಯ – ೩

''ಧರ್ಮರಾಯ ಪ್ರಸನ್ನ ಹಾಟೆಲ್''

*[ಭರದಿಂದ ಕೆಲಸ ನಡೆಯುತ್ತಿದೆ. ಕೆಲಸಗಾರರು ಸಮವಸ್ತ್ರ ಧರಿಸಿದ್ದಾರೆ. ಕೌಂಟರ್ ಮೇಲೆ ಮೇನೇಜರ್ ಕುಳಿತಿದ್ದಾನೆ. ಹಸನ್ ಮೇಜು ಒರಸುವವ. ದೊಗಳೆ ಅಂಗಿ, ಮೊಣಕಾಲ ಕೆಳವರೆಗಿರುವ ಚೆಡ್ಡಿ. ಅದನ್ನು ಒಂದು ದಾರದಿಂದ ಬಿಗಿದು ಕಟ್ಟಿದ್ದಾನೆ. ಅಳತೆ ಮೀರಿದ ಪ್ಲಾಸ್ಟಿಕ್ಕಿನ ಬುಟ್ಟಿ ಇನ್ನೊಂದು ಕೈಯಲ್ಲಿ ಒರಸುವ ಬಟ್ಟೆ ತಲೆ ಬೋಳು. ಯಾವಾಗಲೂ ಗರುಡನ ಹತ್ತಿರ ನಿಲ್ಲುತ್ತಾನೆ. ಮುಂದಿನ ಟೇಬಲ್ಲಿನ ಮೇಲೆ ಚಹ-ತಿಂಡಿ ಚೆಲ್ಲಿದೆ.]*

**ಮೇನೇಜರ್** : ಯಾರ್‍ರೋ ಅದು, ಏನು ನೋಡತಾ ನಿಂತಿದ್ದೀರ ? ಗಿರಾಕಿ ಬರುವುದು ಕಾಣೂದಿಲ್ಲೇನು ? ಆ ಟೇಬಲ್ ಚೊಕ್ಕಮಾಡಿ. ಎಲ್ಲೋದ ಬೊಂಡ ? (ಎಲ್ಲರೂ ನಗುತ್ತಾರೆ)

*[ಹಸನ್ ಮೇಜನ್ನು ಸ್ವಚ್ಛಗೊಳಿಸುತ್ತಾನೆ. ಮೇಜು ಉದ್ದ ಇದ್ದುದರಿಂದ ಮೇಜಿನ ಕೆಳಬದಿಯ ಅಡ್ಡಪಟ್ಟಿ ಹತ್ತಿ ಒರಸುತ್ತಾನೆ. ಗಿರಾಕಿಯೊಬ್ಬ ಹಸನ್‌ನ ತಲೆಯನ್ನು ಬೋಳೈಸಿ ನಗುತ್ತಾನೆ. ಹಸನ್ ಸಿಟ್ಟು ಮಾಡಿಕೊಂಡು ಗರುಡನ ಹತ್ತಿರ ಬಂದು ನಿಲ್ಲುತ್ತಾನೆ. ಮತ್ತೊಬ್ಬ ಹುಡುಗ ಹಸನ್ನನ ಕಿವಿ ಹತ್ತಿರ ಬಂದು ಸಣ್ಣದಾಗಿ ನಗುತ್ತಾನೆ, ಓ ಎನ್ನುತ್ತಾನೆ. ಹಸನ್ ಸಿಟ್ಟುಮಾಡಿಕೊಂಡು ಕೌಂಟರ್ ಹತ್ತಿರ ಬರುತ್ತಾನೆ.]*

**ಹಸನ್** : ನೋಡಿ, ಮೇನೇಜರ್, ನಾಗೇಶ ನಗೆಯಾಡುತ್ತಾನೆ.

**ಮೇನೇಜರ್** : ಹೋಗೋ ಹೋಗೋ, ಕೆಲಸ ಮಾಡು, ಬಂದಬಿಟ್ಟ ಬೊಂಡ ಹೊತ್ಕೊಂಡು (ಎಲ್ಲಾ ನಗೆಯಾಡುತ್ತಾರೆ - ಹಸನ್ ಸಿಟ್ಟುಮಾಡುತ್ತಾನೆ)

**ಹಸನ್** : (ನಾಗೇಶನಿಗೆ) ಖದೀಮ. *[ಗರುಡನ ಬಳಿಗೆ ಹೋಗುತ್ತಾನೆ. ಗರುಡ ಆತನನ್ನು ತನ್ನ ಬಳಿಗೆ ಎಳೆದುಕೊಂಡು ನಿಲ್ಲುತ್ತಾನೆ. ಗಿರಾಕಿಗಳು ಬರುತ್ತಾರೆ. ಹಸನ್‌ನ ವಯಸ್ಸಿನ ಮಕ್ಕಳು ಬರುತ್ತಾರೆ. ಮಿರಿಮಿರಿ ಬಟ್ಟೆ ಹಾಕಿಕೊಂಡಿದ್ದಾರೆ. ತಂದೆ-ತಾಯಿಗಳು ಅವರನ್ನು ಸಂಬಾಳಿಸುತ್ತಾರೆ. ಹಸನ್ ಅವರನ್ನೇ ನೋಡುತ್ತ ತನ್ನನ್ನು ಮರೆಯುತ್ತಾನೆ. ಗರುಡ ಗಿರಾಕಿಯ ಆರ್ಡರ್ ಪಡೆದು ಒಳಗೆ ಹೋಗುತ್ತಾನೆ. ಸಾವಕಾಶ ಆ ಮಕ್ಕಳ ಕಡೆಗೆ ಚಲಿಸುತ್ತಾನೆ. ಅವರಲ್ಲಿ ಒಬ್ಬ ''ಅಮ್ಮ ಅಮ್ಮ ನೋಡು ಅವನ ಚೆಡ್ಡಿ ಎನ್ನುತ್ತಾನೆ. ಹಸನ್‌ನೂ ನಗುತ್ತಾನೆ. ಹಾಗೇ ಮುಂದುವರಿದು ಮೇಜಿನ ಮೇಲೆ ಕೈ ಇಡುತ್ತಾನೆ.]*

**ಹಸನ್** : ಜಿಲೇಬಿ ಬೇಕಾ ?

**ಮೇನೇಜರ್** : ಏನದು ಬೊಂಡ ? ನಡೆ ಆ ಕಡೆ.

*[ಗರುಡ ಅವರಿಗೆ ಜಿಲೇಬಿ, ಖಾರಾ ಸಪ್ಲೈ ಮಾಡಿ ತನ್ನ ಸ್ಥಾನಕ್ಕೆ ತಿರುಗಿ ಹೋಗುತ್ತಾನೆ. ಹಸನ್ ಅವನ ಹತ್ತಿರ ನಿಲ್ಲುತ್ತಾನೆ. ಗಿರಾಕಿ ತಿಂಡಿ ತಿಂದು ಚಹಾ ಕುಡಿದು ಹೋಗುತ್ತಾರೆ. ಹಸನ್ ಮೇಜು ಸ್ವಚ್ಛಗೊಳಿಸಲು ಹೊರಡುತ್ತಾನೆ. ಆ ಮಕ್ಕಳು ಈತನ ಕಡೆಗೇ ನೋಡುತ್ತಾರೆ. ಹಸನ್ ಮಲಿನ ಬಟ್ಟೆಯನ್ನೇ ಎತ್ತಿ ಟಾಟಾ ಮಾಡುತ್ತಾನೆ. ಅಷ್ಟರಲ್ಲಿ ಮತ್ತೊಬ್ಬ ಗಿರಾಕಿ ಅಲ್ಲಿ ಬಂದು ಕೂಡ್ರುತ್ತಾನೆ. ಹಸನ್ ಆ ಮೇಜಿಗೆ ಓಡಿ ಸ್ವಚ್ಛ ಮಾಡತೊಡಗುತ್ತಾನೆ. ಮಲಿನ ನೀರು ಗಿರಾಕಿಯ ಮೈಗೆ ಸಿಡಿಯುತ್ತದೆ.]*

**ಗಿರಾಕಿ** : (*ಹಸನ್‌ಗೆ ಒಂದು ಪೆಟ್ಟು ಹಾಕಿ*) ಹೇ ಬಾಡ್ಕಾ, ಎಚ್ಚರ ಅದೇನೋ ಇಲ್ಲೋ ಬದ್ಮಾಷ್ ? (*ಮತ್ತೆ ಹೊಡೆಯಲು ಕೈ ಎತ್ತುತ್ತಾನೆ. ಗರುಡ ಬಂದು ತಡೆಯುತ್ತಾನೆ*)

**ಗರುಡ** : ಸಮಾಧಾನ ಮಾಡಿಕೊಳ್ಳಿ ರಾಯರೇ.

**ಗಿರಾಕಿ** : ಸಮಾಧಾನ ? ನೀ ಯಾವ ಗೆಂಡೆಯಯ್ಯ ಸಮಾಧಾನ ಹೇಳಲು ? ನಿನಗೇನು ಕಣ್ಣು ಕಾಣತದಾ, ವಸ್ತ್ರಕ್ಕೆ ನೀರು ಸಿಡಿದದ್ದು ? ಮೇನೇಜರನನ್ನು ಕರೆಯಲಾ ?

**ಗರುಡ** : ರಾಯರೇ, ಶಾಂತರಾಗಿ. ನೋಡಿ ಆತನ ಮೋರೆ, ಅವನ ಆಕಾರ, ಎಷ್ಟು ಚಿಕ್ಕವ ನೋಡಿ. ಇದು ಕೆಲಸ ಮಾಡುವ ವಯಸ್ಸಾ ? ಈತ ನಿಮ್ಮ ತಮ್ಮನೋ, ಮಗನೋ ಅಥವಾ ಇನ್ನೇನೋ ಆಗಿದ್ದರೆ ಈಗ ಶಾಲೆಗೆ ಹೋಗುತ್ತಿರುತ್ತಿದ್ದನಲ್ಲ? ತಾಯಿಯ ಕೈಯಿಂದ ಹಟ ಮಾಡುತ್ತ ತಾನು ತಿಂದ ತಿಂಡಿಯ ಪ್ಲೇಟನ್ನು ತಾಯಿಯ ಕೈಯಿಂದಲೇ ಯಾವಾಗಲೂ ತೊಳೆಸುತ್ತ ಮುದ್ದು ಮಾಡಿಸಿ ಕೊಳ್ಳಬಹುದಾದ ವಯಸ್ಸು, ಅಲ್ಲವೇ ? ಸ್ವಲ್ಪ ತಡೆಯಿರಿ ಸ್ವಚ್ಛ ಮಾಡಿಕೊಡುತ್ತೇನೆ. *[ಗಿರಾಕಿ ಗರುಡನನ್ನೇ ಮಿಕಮಿಕ ನೋಡುತ್ತ ತನ್ನ ತಾನೇ ಒರೆಸಿಕೊಳ್ಳುತ್ತಾನೆ]*

**ಗರುಡ** : ತಿಂಡಿ ಏನು ತರಲಿ ?

**ಗಿರಾಕಿ** : ಏನೂ ಬೇಡ.




**ಗರುಡ** : (*ಮುಗುಳು ನಗುತ್ತ*) ಹಾಗೆ ಹೇಳಬೇಡಿ. ಆರ್ಡರ್ ಕೊಡಿ. ನೀವು ಹಾಗೆ ಹಟ ಹಿಡಿದರೆ ಮೇನೇಜರ ನಿಂದ ಈ ಚಿಕ್ಕ ಮಗುವಿಗೆ ಲಾತಾ ಬೀಳುತ್ತದೆ.

**ಗಿರಾಕಿ** : ನಿನ್ನ ತಮ್ಮ ?

**ಗರುಡ** : ತಮ್ಮನ ಹಾಗೇ.

**ಗಿರಾಕಿ** : ಕ್ಷಮಿಸು.

**ಗರುಡ** : ಇಲ್ಲಿಲ್ಲ, ನೀವೇನೂ ತಪ್ಪು ಮಾಡಲಿಲ್ಲ. ಕ್ಷಮಿಸಬೇಕಾದವರು ನೀವು.

**ಗಿರಾಕಿ** : ಸಿಟ್ಟಿನಲ್ಲಿ...

**ಗರುಡ** : ಮರೆತುಬಿಡಿ ಸರ್.

**ಗಿರಾಕಿ** : ತುಂಬ ಚಿಕ್ಕವ.

**ಗರುಡ** : ಆದರೂ ಹೊಟ್ಟೆ ಉಂಟಲ್ಲ ?

**ಮೇನೇಜರ್** : ಏನದು ಗರುಡ, ಗಿರಾಕಿ ಬಂದುದು ಕಾಣತಿಲ್ಲೇನು ? ದಿನ ದಿನ ಮೈಗಳ್ಳರಾಗತಿದ್ದೀರಿ.

**ಗಿರಾಕಿ** : ಒಂದು ಚಹ.

**ಗರುಡ** : (*ಚಕ್ಕನೆ ಆರ್ಡರ್ ಕೂಗಿ ಬೇರೆ ಕಡೆ ಹೊರಳುತ್ತಾನೆ.*)

ದೃಶ್ಯ - ೪

*[ರವಿವಾರ ಮುಂಜಾನೆ ಹಾಟೆಲ್ ಮುಂದಿನ ಮರದ ಕೆಳಗೆ ಅತ್ತಿತ್ತ ತಿರುಗಾಡುತ್ತ ಹಸನ್‌ನ ನಿರೀಕ್ಷೆಯಲ್ಲಿದ್ದಾನೆ. ]*

**ಹಸನ್** : ಗರುಡಣ್ಣ (*ಇಬ್ಬರೂ ತಬ್ಬಿಕೊಳ್ಳುತ್ತಾರೆ. ಇಬ್ಬರಿಗೂ ಅಳು ಉಕ್ಕಿಬರುತ್ತದೆ. ಗರುಡನಿಗೂ ಕಣ್ಣು ಮಂಜಾಗುತ್ತದೆ*)

**ಗರುಡ** : ಹಸನ್, ಸಮಾಧಾನ ಮಾಡಿಕೊ, ಎದುರಿಗೇ ಇದ್ದೇನಲ್ಲ ?

**ಹಸನ್** : ಐದು ವರ್ಷ ! ನಿನ್ನನ್ನು ಕಾಣಲು ಎಷ್ಟೊಂದು ಹಂಬಲಿಸಿದ್ದೆ. ಎಷ್ಟು ಸಲ ಸ್ವಪ್ನದಲ್ಲಿ ನೋಡಿ ಮಾತಾಡಿದೆ !

**ಗರುಡ** : ಹೌದು, ನನಗೂ ಹಾಗೇ, ಮೊನ್ನೆಯೂ ಸಹ ನಿನ್ನನ್ನು ಸ್ವಪ್ನದಲ್ಲಿ ನೋಡಿದೆ. ಆದರೆ ಅಲ್ಲಿ ನೀನು ಮೊದಲಿನಷ್ಟೇ ಚಿಕ್ಕವನಾಗೇ ಇದ್ದೆ. ಈಗ ನೋಡಿದರೆ ಮೊದಲಿನ ಎರಡು ಪಟ್ಟು ಬೆಳೆದಿದ್ದೀಯಾ. ಮೊದಲಿನ ಹಾಗೆ ಮೋರೆಯ ಮೇಲೆ ಅಸಹಾಯಕತೆಯ ಅಳಕು ಇಲ್ಲ ಗಂಭೀರವಾಗಿದ್ದೀಯಾ. ಹೇಳು, ಎಲ್ಲ ಮಾತಾಡು. ರಮೇಶ ಏನು ಮಾಡುತ್ತಾನೆ ?

**ಹಸನ್** : ರಮೇಶ ಇಲ್ಲಿಯೇ ಇದ್ದಾನೆ. ಈಗ ಆತನೇ ನಮ್ಮ ದೇಖರೇಖಿ ನೋಡುವವ. ಹೊಸದಾಗಿ ಬರುವವರಿಗೆ ಮಾರ್ಗದರ್ಶಿ.

**ಗರುಡ** : ಈಗಲೂ ಬೊಂಡ....... (ಇಬ್ಬರೂ ನಗೆಯಾಡುವರು).

**ಹಸನ್** : ಇಲ್ಲ, ಇಲ್ಲ, ಈಗ ಆತನೇ ನನ್ನ ರಕ್ಷಕ.

**ಗರುಡ** : ಮತ್ತೆ ಕೋಸ್ತ ?

**ಹಸನ್** : ಕೋಸ್ತ, ನಗರದ ಇನ್ನೊಂದು ಬದಿಯಲ್ಲಿ ಒಂದು ಗೂಡಂಗಡಿ ಇಟ್ಟಿದ್ದಾನೆ. ಈಗ ಆತ ಜಿಲೇಬಿ ಸ್ಪೆಶಲಿಸ್ಟ್. ಆಫೀಸು, ಕಾರಖಾನೆ ಬಿಟ್ಟ ಸಮಯದಲ್ಲಿ ಗಿರಾಕಿಗಳು ಮುಗಿಬೀಳುತ್ತಾರೆ. ಈಗ ಅವನ ಸಂಬಂಧಿಕರೂ ಅವನನ್ನು ಗುರುತಿಸುತ್ತಾರೆ. ಮದುವೆಗೂ ಒತ್ತಾಯಿಸುತ್ತಾರಂತೆ. (ಇಬ್ಬರೂ ನಗುತ್ತಾರೆ) ಅದೋ ನಾಗೇಶ ಬಂದ. ಬಾರಯ್ಯ ಖದೀಮ ಅಣ್ಣ ಕಾಯುತ್ತಿದ್ದಾನೆ.

**ನಾಗೇಶ** : ಗರುಡಣ್ಣ (ಇಬ್ಬರೂ ತಬ್ಬಿಕೊಳ್ಳುತ್ತಾರೆ) ಹೇಳು, ಏನು ಮಾಡುತ್ತಿದ್ದೀಯಾ ? ಎಲ್ಲಿದ್ದೀಯಾ ?

**ಗರುಡ** : ನಿನ್ನದು ಹೇಳಯ್ಯ.

**ನಾಗೇಶ** : ನನ್ನದು ದೊಡ್ಡ ಕತೆ. ಒಂದಿನ ತಿಂಡಿ ಸಪ್ಲೈ ಮಾಡುವಾಗ ಎದುರಿನವನಿಗೆ ಡಿಕ್ಕಿ ಹೊಡೆದು ಪ್ಲೇಟು ಬಿದ್ದು ನೆಲವೆಲ್ಲಾ ರಾಡಿಯಾಗಿಬಿಟ್ಟಿತು. ಜನರ ಮುಂದೆ ತಣ್ಣಗೆ ಇದ್ದ ಸಾಹುಕಾರ ರಾತ್ರಿ ಎಲ್ಲಾ ಹುಡುಗರ ಮುಂದೆಯೇ, ಆಗ ಮೂರು ಜನ ಹೊಸದಾಗಿ ಬಂದಿದ್ದರು. ಅವರೆಲ್ಲರೆದುರೇ ಹಿಂದೆ ಮುಂದೆ ನೋಡದದೆ ಹೊಡೆದ. ನನಗೆ ಸಿಟ್ಟು ತಡೆಯಲಿಕ್ಕಾಗದೆ ಅವನ ಕೈ ಹಿಡಿದು ಕಚ್ಚಿದೆ. ತಪ್ಪಿಸಿಕೊಂಡು ಒಳ ಹೋದ ಮನುಷ್ಯ ಒಳಗಿನಿಂದ ಸರಸರನೆ ಬಂದು ಬಿಸಿಯಾದ ದೋಸೆ ಸಟಗವನ್ನು ಬೆನ್ನಿನ ಮೇಲೆ ಇಟ್ಟ. ಮತ್ತು ಅದೇ ರಾತ್ರಿ ಹೊರಡು ಎಂದು ಹೊರದೂಡಿದ. ಮತ್ತೆ ಆ ಕಡೆ ಮುಖ ತಿರುಗಿಸಲಿಲ್ಲ. ಅಲೆಯುತ್ತ ಅಲೆಯುತ್ತ ಒಂದು ಕಡೆಗೆ ಕೆಲಸ ಹಿಡಿದೆ. ಅದು ಒಗ್ಗದಾಗ ಒಬ್ಬ ಮೆಕ್ಯಾನಿಕ್‌ನ ಹತ್ತಿರ ಕೆಲಸಕ್ಕೆ ಸೇರಿದೆ. ಆರು ತಿಂಗಳ ತನಕ ಪಗಾರು ಇಲ್ಲ. ಆ ಮೇಲೆ ತುಸು ಕೊಡಲು ಶುರುಮಾಡಿದ. ಎರಡು ವರ್ಷ ಅಲ್ಲಿ ಕೆಲಸ ಮಾಡಿದೆ. ಈಗ ಮೋಟರ್ ಬೈಕ್ ದುರಸ್ತಿಯ ನನ್ನದೇ ಆದ ಒಂದು ಶಾಪು ಇಟ್ಟಿದ್ದೇನೆ.

**ಗರುಡ** : ಶಹಭಾಸ್, ಖದೀಮ ಎಂದರೆ ಖದೀಮ. ಸ್ವಂತ ದುಡಿಮೆ. ಸ್ವತಂತ್ರ ಜೀವನ. ನನಗೆ ಯಾವಾಗಲೂ ಸಾಹಸದ ಜೀವನ ಎಂದರೆ ಪ್ರೀತಿ. ಶಹಭಾಸ್... ನಾಣಿ ?

**ಹಸನ್** : ನಾಣಿ, ಒಸಿ ಆಟ ಬಿಡಲೇ ಇಲ್ಲ. ತನ್ನ ಸಂಬಳದ ಎಲ್ಲ ದುಡ್ಡನ್ನು ಹಾಳುಮಾಡಿದ. ಯಾವಾಗಲೂ ಆಲೋಚನೆ ಮಾಡುತ್ತ ಒಸಿ ಲೆಕ್ಕ ಹಾಕುತ್ತ ಕೆಲಸ ನಿರ್ಲಕ್ಷ್ಯ ಮಾಡುತ್ತಿದ್ದ. ಒಂದ್ಸಲ, ಕೌಂಟರ್‌ದಿಂದಲೇ ಹಣ ಹಾರಿಸಲು ಪ್ರಯತ್ನಿಸಿ ಸಿಕ್ಕಿಬಿದ್ದ. ಕೆಲಸದಿಂದ ತೆಗೆದುಹಾಕಿದರು.

**ನಾಗೇಶ** : ಆಮೇಲೂ ಒಳ್ಳೆಯದಾಗಲಿಲ್ಲವೆಂದು ತೋರುತ್ತದೆ. ಪಿಕ್‌ಪಾಕೆಟ್ ಮಾಡಲು ಶುರು ಮಾಡಿದ ನಂತೆ. ಅವನ ಫೋಟೋ ಪೇಪರಿನಲ್ಲಿ ಬಂದಿತ್ತು. ಜೈಲಿಗೆ ಹೋದ. ನಿಮ್ಮ ಗ್ಯಾಂಗನ್ನು ತೋರಿಸು ಎಂದು ಪೋಲೀಸರು ಹೊಡೆದು ಹೊಡೆದು ಕೊಂದು ಹಾಕಿದರೆಂದು ಸುದ್ದಿ.

**ಗರುಡ** : ಛೇ, ಎಂಥಾದ್ದಾಗಿಹೋಯಿತು ! ನನಗೆ ತುಂಬ ವ್ಯಥೆಯಾಗುತ್ತದೆ.

**ಉಳಿದವರು** : ನಮಗೂ ವ್ಯಥೆಯಾಯಿತು.

**ಗರುಡ** : ನಾನು ಹೋಗುವ ಹೊತ್ತಿಗೆ ಒಬ್ಬ ಹುಡುಗ, ಮೊದಲಿನ ಹಸನ್‌ನಂಥವ ಬಂದಿದ್ದನಲ್ಲ?

**ಹಸನ್** : ಅದೊಂದು ದೊಡ್ಡ ಕತೆ. ಆತ ಮಾಲಿಕರ ಹತ್ತಿರ ಮಾತಾಡತ ಒಲೆಯ ಮುಂದೆ ಕೂತುಕೊಂಡಾಗ ಅಂಗಿಗೆ ಬೆಂಕಿ ಹತ್ತಿಕೊಂಡಿತು. ಆತನಿಗೆ ತಿಳಿಯಲಿಲ್ಲ. ಮೈಗೆ ಹತ್ತಿಕೊಂಡಿತು. ಮೈಯೆಲ್ಲಾ ಗಾಯವಾಯಿತು. ಆಸ್ಪತ್ರೆಗೆ ಹಾಕಿದರು. ಆದರೂ ಗುಣವಾಗಲಿಲ್ಲ. ಸತ್ತುಹೋದ.

**ಗರುಡ** : ಅಯ್ಯೋ ಗತಿಯೇ ! ಇರಲಿ ಹಸನ್ ನೀನು ಹೇಗಿದ್ದಿ? ಏನು ಮಾಡಬಯಸುತ್ತಿ?

**ಹಸನ್** : ಗರುಡಣ್ಣಾ, ನಿನ್ನ ದಾರಿಯೇ ನನ್ನ ದಾರಿ. ನೀನು ತಮ್ಮ ಎಂದು ಸಾಕಿದೆ. ನೀನು ಹೇಳಿದ ದಾರಿಯನ್ನು ಬಿಡುತ್ತೇನೆಯೇ ? ನಾನು ಈಗಲೂ ರಾತ್ರಿ ಶಾಲೆಗೆ ಹೋಗುತ್ತಲೇ ಇದ್ದೇನೆ. ಹಾಟೆಲ್‌ನಲ್ಲಿ ಅಚ್ಚುಕಟ್ಟಾಗಿ ಕೆಲಸ ಮಾಡಿ ಮೇನೇಜರ್‌ರ ಕೃಪೆ ಗಳಿಸಿಕೊಂಡಿದ್ದೇನೆ. ಈ ವರ್ಷವೇ ಏಳನೇ ತರಗತಿ ಪರೀಕ್ಷೆ ಕಟ್ಟುತ್ತೇನೆ. ಈಗ ಮೊದಲಿನಂತೆ (ನಗುತ್ತ) ನಿದ್ದೆ ಮಾಡುವುದಿಲ್ಲ. ನನ್ನ ಬೊಂಡದಲ್ಲಿ ಹೆಚ್ಚು ಸಾಮಾನು ತುಂಬುತ್ತಿದ್ದೇನೆ. ನಿನ್ನದು ಹೇಳು.

(ಗರುಡ ಆತನನ್ನು ಆಲಂಗಿಸಿ ತಲೆ ಮೂಸುತ್ತಾನೆ)

**ಗರುಡ** : ಹಸನ್, ನಿಮ್ಮನ್ನೆಲ್ಲ ಅದರಲ್ಲೂ ನಿನ್ನನ್ನು ಬಿಟ್ಟು ಇಲ್ಲಿಂದ ಹೋಗಲು ತುಂಬ ಬೇಸರವಾಯಿತು. ಆದರೂ ಮನಸ್ಸು ಗಟ್ಟಿ ಮಾಡಿದೆ. ಯಾವಾಗಲೂ ಕಷ್ಟಪಡದ ಹೊರತು ಇಷ್ಟಾರ್ಥ ಸಿದ್ಧಿಸಲಾರದು. ನನಗೆ ಅಭ್ಯಾಸಕ್ಕೆ ಹೆಚ್ಚು ಸಮಯ ಬೇಕಾಗಿತ್ತು. ಆದ್ದರಿಂದ ಇಲ್ಲಿ ಇಡೀ ದಿನ ಕೆಲಸ ಮಾಡಿ ಶಾಲೆಗೆ ಹೋಗಲು ತೊಂದರೆಯಾಗುತ್ತಿತ್ತು. ಹೀಗಾಗಿ ಬೇರೆ ಕಡೆ ಪಾಳಿಯ ಮೇಲೆ ಕೆಲಸ ಮಾಡುವಲ್ಲಿ ಸೇರಿದೆ. ದೊಡ್ಡ ಪರೀಕ್ಷೆ, ಈಗ ನಾನು ಪಿ.ಯು.ಸಿ. ಪರೀಕ್ಷೆ ಕಟ್ಟುತ್ತಿದ್ದೇನೆ. ಮೊದಲ ವರ್ಗದಲ್ಲಿ ಪಾಸಾಗಬೇಕು ಎಂಬುದು ನನ್ನ ಛಲ.

**ಹಸನ್** : ಮುಂದೆ ?

**ಗರುಡ** : ಮುಂದೆ ಬಿ. ಎ., ಎಂ. ಎ.

**ಹಸನ್** : ಮತ್ತೆ ವಕೀಲ ಆಗತೇನೆ ಎಂದಿದ್ದಿ ?

**ಗರುಡ** : ಈಗ ಮನಸ್ಸು ಬದಲಿಸಿದ್ದೇನೆ. ದೊಡ್ಡ ಪತ್ರಿಕಾಕರ್ತನಾಗಬೇಕು ಎಂದುಕೊಂಡಿದ್ದೇನೆ. ಪತ್ರಿಕೆಯಲ್ಲೂ ಸಮಾಜದಲ್ಲಿ ನಿರ್ಲಕ್ಷ್ಯಕ್ಕೊಳಗಾದವರ ಬಗ್ಗೆ ಬರೆಯಬೇಕು. ಜನರಲ್ಲಿ ಜಾಗೃತಿ ಮೂಡಿಸಬೇಕು. ದೊಡ್ಡ ಚಳವಳವನ್ನೇ ಹುಟ್ಟುಹಾಕಬೇಕು. ಅದಕ್ಕೇ ಪತ್ರಿಕೆ ದೊಡ್ಡ ಸಾಧನ. ಮತ್ತೆ ನೀನು ?

**ಹಸನ್** : ನಾನು ನಿನ್ನ ಹಾದಿಯಲ್ಲಿ, ಆದಷ್ಟು ಪರಿಶ್ರಮ ಪಟ್ಟು ಓದುತ್ತೇನೆ. ದೊಡ್ಡ ಸ್ಪರ್ಧೆಯನ್ನು ಎದುರಿಸುತ್ತೇನೆ. ಜಿಲ್ಲಾಧಿಕಾರಿಯಾಗಬೇಕೆಂದುಕೊಂಡಿದ್ದೇನೆ. ಅದರಿಂದ ಬಡವರಿಗೆ, ದೀನದಲಿತರಿಗೆ ಬಹಳಷ್ಟು ಸಹಾಯ ಮಾಡಬಹುದಂತೆ.

**ಗರುಡ** : ಗುರಿ ದೊಡ್ಡದೇ ಇರಲಿ. ಆದರ ಸಾಧನೆಗಾಗಿ ಸತತವಾಗಿ ಪರಿಶ್ರಮಿಸುವ. ಅಷ್ಟೊಂದು ಸಾಧಿಸಲಾಗದಿದ್ದರೂ ಅದರ ಸಮೀಪಕ್ಕಾದರೂ ತಲುಪಬಹುದು.

**ನಾಗೇಶ-ಕೋಸ್ತ** : ಆಗಲಿ, ದೊಡ್ಡವರಾಗಿ, ಆದರೆ ನಮ್ಮನ್ನೆಲ್ಲ ಮರೆಯಬೇಡಿ.

**ಗರುಡ** : ನಾಗೇಶ, ಇದು ನಮ್ಮ ಕನಸು. ಆದರೆ ಆ ಕನಸಿನಲ್ಲೂ ನೀವು ಇದ್ದೇ ಇರುತ್ತೀರಿ. ನಾವೆಲ್ಲ ಒಂದೇ ಬಳಗದವರು. ನಾವು ಮಾತ್ರವಲ್ಲ; ದೇಶದಲ್ಲಿ ನಮ್ಮಂಥ ಅನಾಥರು ಲಕ್ಷಾಂತರ ಇದ್ದಾರೆ. ನಾವೆಲ್ಲಾ ಸಮಾನ ದುಃಖಿಗಳು. ನಾವೆಲ್ಲರೂ ವಿಮೋಚನೆ ಹೊಂದಬೇಕು. ನಾವೆಲ್ಲ ಒಂದಾಗಿ ಬಲೆಯಲ್ಲಿ ಸಿಕ್ಕಿದ್ದು ತಿಳಿಯದೇ ಅಕ್ಕೀ ಕಾಳು ಹೆಕ್ಕುವ ಹಕ್ಕಿಗಳು ಎಚ್ಚೆತ್ತು ಒಂದೇ ಸಲ ಹಾರಿ ಬಲೆಯನ್ನೇ ತೆಗೆದುಕೊಂಡು ಹೋದ ಹಕ್ಕಿಯ ಕತೆಯಂತೆ ನಾವೂ ವಿಮೋಚನೆ ಹೊಂದಬೇಕು.

ನಾವು ಹೋಗುತ್ತಿರುವ ಶಾಲೆಯಲ್ಲಿ ದೊಡ್ಡ ದೊಡ್ಡ ಕನಸು ಕಟ್ಟಿಕೊಂಡಿರುವ ಅನೇಕರು ಇದ್ದಾರೆ. ಅವರೆಲ್ಲ ಬೇರೆ ಬೇರೆಯ ಕೆಲಸ ಮಾಡುತ್ತಿದ್ದಾರೆ. ಅವರಲ್ಲಿ ಅನೇಕರು ವಕೀಲಿ ಓದುತ್ತಿದ್ದಾರೆ. ಕೆಲವರು ಶಿಕ್ಷಕರಾಗಲು, ಅಧಿಕಾರಿಯಾಗಲು, ಉದ್ಯೋಗಸ್ಥರಾಗಲು ಕನಸು ಕಾಣುತ್ತಿದ್ದಾರೆ. ಏನೇ ಆದರೂ ನಾವು ಒಂದೇ ಮೂಲದಿಂದ ಬಂದವರು, ಬಡವರಾಗಿದ್ದವರು ಎಂಬುದನ್ನು ಮರೆಯಬಾರದು. ಪ್ರತಿಜ್ಞೆ ಮಾಡಿಕೊಂಡಿದ್ದೇವೆ. ನಾವು ಯೂನಿಯನ್ ಮಾಡಿಕೊಂಡಿದ್ದೇವೆ.

**ಹಸನ್** : ಆದರೆ, ಆದರೆ, ಅದು ಸಾಧ್ಯಾನಾ, ಗರುಡಣ್ಣ ?

**ಗರುಡ** : ಯಾಕೆ ಸಾಧ್ಯವಾಗದು ? ತಕ್ಷಣ ಆಗಲಿಕ್ಕಿಲ್ಲ. ದೇಶದಲ್ಲಿ ಲಕ್ಷಾಂತರ ಶಾಲೆ ತಪ್ಪಿಸಿಕೊಂಡ ಬಾಲ ಕಾರ್ಮಿಕರಿದ್ದಾರೆ. ಬೇರೆ ಬೇರೆ ಕಡೆ ಬೇರೆ ಬೇರೆ ಉದ್ಯೋಗ ಮಾಡುತ್ತಿದ್ದಾರೆ. ಆದರೆ ಎಲ್ಲರ ಸ್ಥಿತಿ ಮಾತ್ರ ಒಂದೇ – ಶೋಷಣೆಯದು. ಕೆಲ ಹಿರಿಯರು ನಮ್ಮ ಪರ ಇದ್ದಾರೆ. ಬಾಲ ಕಾರ್ಮಿಕರಿಗೆ ಅಪಾಯಕಾರಿ ಕೆಲಸ ಕೊಡಬಾರದು, ಶಾಲೆಗೆ ಹೋಗಲು ಅವಕಾಶ ಕೊಡಬೇಕು, ಜೀವನ ಭದ್ರತೆ ಕೊಡಬೇಕು ಇತ್ಯಾದಿ ಪ್ರಚಾರ ಮಾಡುತ್ತಿದ್ದಾರೆ.

**ಹಸನ್** : ಹೌದೇನು ?

**ಗರುಡ** : ಹೌದು. ಅದಕ್ಕೆ ನಾವೂ ಅವರೊಡನೆ ಸಹಕರಿಸಬೇಕು. ಸಂಘಟಿತರಾಗಬೇಕು. ನಮ್ಮ ಸಾಧನೆಯ ಜೊತೆ ಹೋರಾಟವನ್ನು ನಡೆಸಬೇಕು. ಅಂದರೆ ಸಾರ್ವಜನಿಕರಿಗೆ ಬಾಲಕಾರ್ಮಿಕರ ಗೋಳು ಗೊತ್ತಾಗುತ್ತದೆ. ಅವರು ಬಾಲಕಾರ್ಮಿಕರ ಶೋಷಣೆಯನ್ನು ತಡೆವಂತ ಕಾನೂನು ಮಾಡಲು ಸರಕಾರವನ್ನು ಒತ್ತಾಯಿಸುತ್ತಾರೆ.

[ಹಿಂದಿನಿಂದ ಹಾಡು - ಘೋಷಣೆ]

ನಾವೆಲ್ಲರೂ ಬಾಲಕರು
ನಾವೇ ಬಾಲಕಾರ್ಮಿಕರು.

**ಕೋಸ್ತ** : ಯಾವುದೋ ಜಾಥಾ ಬರುವಂತಿದೆ.

**ಗರುಡ** : ಹಂ, ಹೌದು ಹೌದು, ನೋಡಿ. ಬಾಲ ಕಾರ್ಮಿಕರ ಮೆರವಣಿಗೆಯಂತೆಯೇ ಇದೆ.

[ಬಾಲಕ ಬಾಲಕಿಯರ ಗುಂಪು]

ಹಾಡು

ನಾವೆಲ್ಲರು ಬಾಲಕರು.
ನಾವೇ ಬಾಲಕಾರ್ಮಿಕರು
*ರತ್ನಗಂಬಳಿ ಮಾಲಿಕರೇ*
*ರೇಶ್ಮೆ ಗಿರಣಿ ಮಾಲಿಕರೇ*
*ಸೀರೆ ಗಿರಣಿ ಮಾಲಿಕರೇ*
*ಕಟ್ಟಡ ಕೆಲಸದ ಮಾಲಿಕರೇ*
*ಗುಜರಿ ಕೆಲಸದ ಮಾಲಿಕರೇ*
*ಪಟಾಕಿ ಫ್ಯಾಕ್ಟರಿ ಮಾಲಿಕರೇ*
*ಚಿಂದಿ ಪಡೆಯ ಮಾಲಿಕರೇ*

[ಜಾಥಾ ಹತ್ತಿರ ಬರುತ್ತದೆ. ಗರುಡ ಮತ್ತಿತರರು ಕೂಡಿಕೊಳ್ಳುತ್ತಾರೆ.]

*ನಗರದ ಹೊಟೇಲ್ ಮಾಲಕರೇ*
*ನೀವೇ ನಮಗೆ ಪಾಲಕರು*
*ನಾವೇ ಬಾಲಕಾರ್ಮಿಕರು*
*ನಾವೇ ಬಾಲಕಾರ್ಮಿಕರು.*

[ಮರದ ಸುತ್ತ ಕುಣಿಯುತ್ತಾರೆ]

*ಎಲ್ಲಿಂದಲೋ ಬಂದವು ಹಾರಿ*
*ಒಂದೇ ಬಣ್ಣದ ಹಕ್ಕಿಗಳು*
*ಹಕ್ಕಿಗಳೆಲ್ಲವು ಮರವನು ಸೇರಿ*
*ಇರುಳಲಿ ಕನಸನು ಕಾಣುವವು*
*ಬೆಳಗಾಗಲು ಕೂಳಿಗೆ ಹೊರಡುವವು*
*ಬೆಳಗಾಗಲು ಕೂಲಿಗೆ ಹೊರಡುವವು*
*ನಾವೇ ಬಾಲಕಾರ್ಮಿಕರು*
*ನಮಗೆ ನೀವೇ ಪಾಲಕರು.....*

**ಆರ್ ವಿ. ಭಂಡಾರಿ**
ಆರ ಅಂಗಡಿ, ಕೆರೆಕೋಣ, ಹೊನ್ನಾವರ

# ಕೃತ್ತಿಕಾ – ಒಂದು ಒಳನೋಟ



ಬರಿಗಣ್ಣಿಗೆ ಕಾಣುವ ಸುಂದರ ಗುಚ್ಛ ಕೃತ್ತಿಕಾ. ಕೆಲವರಿಗಿದು ದ್ರಾಕ್ಷಿ ಗೊಂಚಲಿನಂತೆ ಕಾಣಬಹುದು. ದೂರದರ್ಶಕ ಅಥವಾ ದುರ್ಬೀನು ಕೈಗೆ ಸಿಕ್ಕಿದರೆ ಮೊದಲು ನೋಡಬೇಕಾದ ನಕ್ಷತ್ರ ಗುಚ್ಛ ಇದು. ಅನಾದಿಕಾಲದಿಂದಲೂ ಇದು ನಭಾಸಕ್ತರನ್ನು ಆಕರ್ಷಿಸಿರುವುದಕ್ಕೆ ಅದು ಹುಟ್ಟು ಹಾಕಿದ ಕತೆಗಳೇ ಸಾಕ್ಷಿಯಾಗಿವೆ. ಶಿವನ ಮಗ ಕಾರ್ತಿಕೇಯನನ್ನು ಪಾರ್ವತಿ ಹೆರಲಿಲ್ಲ; ಹೊರಲಿಲ್ಲ. ಆರು ಜನ ಅಪ್ಸರೆಯರು ಅವನ ತಾಯಂದಿರು. ಹಾಗಾಗಿ ಅವನು ಷಣ್ಮುಖನಾದ. ಕೃತ್ತಿಕೆಯರು ಎಂಬುದು ಅವರ ಹೆಸರಾದ್ದರಿಂದ ಅವನು ಕಾರ್ತಿಕೇಯನೆಂದೂ ಕರೆಯಿಸಿಕೊಂಡ. ಈ ಕಥೆ ಏನೇ ಇರಲಿ ನೀವು ಆಕಾಶದಲ್ಲಿ ಕೃತ್ತಿಕೆಯನ್ನು ನೋಡಿದಿರಾದರೆ ಒಂದು ರಹಸ್ಯ ಬಯಲಾಗುತ್ತದೆ. ಅಲ್ಲಿ ನಿಮಗೆ ಆರು ನಕ್ಷತ್ರಗಳು ಕಂಡರೆ, ಮತ್ತೊಬ್ಬರಿಗೆ ಏಳು ಕಂಡೀತು. ಆರೇ ? ಏಳೇ ? ಎಂಬ ಜಿಜ್ಞಾಸೆಗೂ ಪುರಾಣದಲ್ಲೊಂದು ಪರಿಹಾರವಿದೆ. ಏಳನೆಯಾಕೆಯೇ ಪಾರ್ವತಿ – ಶಿವನ ಪತ್ನಿ ಎಂಬ ಕಾರಣಕ್ಕೆ – ಕಾರ್ತಿಕೇಯನ ತಾಯಿ ಎನ್ನಿಸಿಕೊಳ್ಳುವವಳು.

ಆರು-ಏಳು ಎಂಬ ಜಿಜ್ಞಾಸೆ ಯೂರೋಪಿನ ಕಥೆಗಳಲ್ಲೂ ಪ್ರತಿಬಿಂಬಿತವಾಗಿದೆ. ಈ ಏಳು ಅಕ್ಕ ತಂಗಿಯರು – ಆಲ್ಕೆಯೇನೆ, ಮೆರೋಪೆ, ಸಿಲಾನೋ, ಎಲೆಕ್ಟ್ರಾ, ಸ್ಟೆರೋಪೆ, ಟೈಗೆಟೆ ಮತ್ತು ಮೈಯಾ – ಆನಂದವಾಗಿ ವಿಹರಿಸಿಕೊಂಡಿದ್ದಾಗ ಮಹಾವ್ಯಾಧ ಒರೈಯನ್ ಛೇಡಿಸಿದನಂತೆ. ಹೆದರಿ ನಿಂತ ಇವರನ್ನು ಕಂಡು ವೀನಸ್ ದೇವತೆ ಪಾರಿವಾಳಗಳನ್ನಾಗಿ ಮಾಡಿದಳಂತೆ. ಅವು ಒಟ್ಟಾಗಿ ಹಾರಿ ಹೋದುವಂತೆ. ಇವರಲ್ಲಿ ಎಲೆಕ್ಟ್ರಾ (ಅಥವಾ ಮೆರೋಪೆ) ಆಗಾಗ ಕಳೆದುಹೋಗುತ್ತದೆಯಂತೆ. ಇದನ್ನು ವಿವರಿಸಲು ಕತೆಯಲ್ಲಿ ಇವಳನ್ನು ಅಳುಬುರುಕಿಯನ್ನಾಗಿ ಮಾಡಿದ್ದಾರೆ. ಕಣ್ಣೀರು ಪ್ರಕಾಶವನ್ನು ತಗ್ಗಿಸಿಬಿಡುತ್ತದೆಯಂತೆ. ಪಾರ್ವತಿ ಕೆಲವರಿಗೆ ಮಾತ್ರ ಕಂಡ ಹಾಗೆ ಇದೂ ಕೆಲವೊಮ್ಮೆ ಕಾಣುತ್ತದೆ; ಕೆಲವೊಮ್ಮೆ ಇಲ್ಲ.




ಕತೆಯನ್ನು ಒತ್ತಟ್ಟಿಗೆ ತಳ್ಳಿ ವಾಸ್ತವಕ್ಕೆ ಬನ್ನಿ. ಎಲೆಕ್ಟ್ರಾ ಮತ್ತು ಮೆರೋಪೆ ಎರಡೂ ಚಂಚಲ ನಕ್ಷತ್ರಗಳು. ನಿಯತಕಾಲಿಕವಾಗಿ ಅವುಗಳ ಪ್ರಕಾಶ ವ್ಯತ್ಯಾಸವಾಗುತ್ತಿರುತ್ತದೆ. ಈ ಅಂಶವೇ ಕತೆಗಳ ಬುನಾದಿಯಾಗಿದೆ.

ಜಪಾನಿನಲ್ಲಿ ಈ ನಕ್ಷತ್ರ ಗುಚ್ಛಕ್ಕೆ 'ಸುಬಾರು' ಎಂದು ಹೆಸರಿದೆ. ಅಲ್ಲಿಯ ಬೃಹತ್ ದೂರದರ್ಶಕಕ್ಕೂ ಇದೇ ಹೆಸರು.

ಚೈತ್ರ ವಿಷುವವನ್ನು ಕಳೆದ ತಿಂಗಳಲ್ಲಿ ಆಚರಿಸಿದೆವಲ್ಲವೇ ? ಕ್ರಿ. ಪೂ. ೨೫೦೦ರಲ್ಲಿ ''ಚೈತ್ರ'' ವಿಷುವ ಇರಲಿಲ್ಲ. ಆಗ ಕೃತ್ತಿಕೆಯಿಂದ ವರ್ಷ ಆರಂಭವಾಗುತ್ತಿತ್ತು. ಬಹುಶಃ ''ಜ್ಯೇಷ್ಠ'' ವಿಷುವ ಎಂದು ಕರೆಯಿಸಿಕೊಳ್ಳುತ್ತಿತ್ತು. ಒಂದು ಪುರಾತನ ಪದ್ಯ ಹೀಗಿದೆ (ಇಂಗ್ಲಿಷ್‌ನಿಂದ ಅನುವಾದ ಮಾತ್ರ ನನ್ನದು).

ಹೊಸ ವರ್ಷವನ್ನು ಹಾರೈಸುತ್ತಿವೆ ಹೊನ್ನಿನ ಶೃಂಗಗಳು
ಶ್ವಾನವನ್ನು ಸೆಳೆಯುತ್ತಿವೆ ದಿಗಂತದ ಅಂಚುಗಳು.

ಆಗ ಹೊಸ ವರ್ಷದ ಉದಯವಾಗುತ್ತಿದ್ದುದರ ಸಂದರ್ಭ ಇದು. ಆದ್ದರಿಂದ ಬೆಳಗಿನ ಜಾವ ವೃಷಭರಾಶಿಯ V ಆಕಾರದ ಕೋಡುಗಳು ಪೂರ್ವದಿಗಂತದ ಹೊಂಬೆಳಕಿನಲ್ಲಿ (ಸೂರ್ಯೋದಯಕ್ಕೆ ಮುಂಚೆ) ಕಾಣುತ್ತಿದ್ದವು. ಸೂರ್ಯಾಸ್ತವಾಗುವಾಗ ಪಶ್ಚಿಮದ ಅಂಚಿನಲ್ಲಿ ನಾಯಿನಕ್ಷತ್ರ (ಸಿರಿಯಸ್) ಕಾಣುತ್ತಿತ್ತು. ಇದನ್ನು ಈ ಪದ್ಯ ತಿಳಿಸಿಕೊಡುತ್ತಿದೆ.

ಮಹಾಭಾರತದ ಕಾಲನಿರ್ಣಯಕ್ಕೆ ಕೃತ್ತಿಕೆ ಮುಖ್ಯವಾದ ಸುಳಿವು ಒದಗಿಸುತ್ತದೆ. ಅಂದಿನ ದಿನಗಳಲ್ಲಿ ವರ್ಷದ ಆರಂಭ ಕೃತ್ತಿಕೆಯಿಂದ ಎಂದು ಸೂಚಿಸುವ ಅನೇಕ ಅಂಶಗಳಿವೆ. ಆದ್ದರಿಂದ ಮಹಾಭಾರತದ ಕಾಲವನ್ನು ನಿಸ್ಸಂಕೋಚವಾಗಿ ಕ್ರಿ. ಪೂ. ೨೫೦೦ಕ್ಕೆ ತಳ್ಳಬಹುದು.

ಡಾ|| ಬಿ. ಎಸ್. ಶೈಲಜಾ

ಬೇಸಾಯಕ್ಕೆ ಕೃತ್ತಿಕೆಯ ಬಳಕೆಯಾಗುವ ಒಂದು ಚಿಕ್ಕ ಪದ್ಯ (ಇಂಗ್ಲಿಷ್) ಹೀಗಿದೆ.

ಕೃತ್ತಿಕೆಯದೋ ಮೂಡಣದಲ್ಲಿ
ರವಿಗಿಂತಲೂ ಮೊದಲಾಗಿ
ಬನ್ನಿರೆಲ್ಲ ಕಳೆ ಕೀಳೋಣ
ಕೃತ್ತಿಕೆಯದೋ ಪಡುವಣದಲ್ಲಿ
ಮೂಡಣದ ರವಿಗೆದುರಾಗಿ
ಬನ್ನಿ ಈಗ ಬಿತ್ತೋಣ.

ಇದು ಕ್ರಿ. ಪೂ. ೮ನೇ ಶತಮಾನದಲ್ಲಿ ಹೆಸಿಡೋಸ್ ಎಂಬಾತ ರಚಿಸಿದ ಕವನದ ಭಾವಾನುವಾದ. ಬೆಳಗಿನ ಜಾವ ರವಿ ಉದಯಿಸುವ ಮೊದಲು ಕೃತ್ತಿಕೆ ಪಶ್ಚಿಮದಲ್ಲಿ ಕಂಡಾಗ ಬಿತ್ತನೆ ಆರಂಭ (ಇದು ಈಗ ನವೆಂಬರ್‌ನಲ್ಲಿ ಆಗುತ್ತದೆ). ಅದೇ ಕೃತ್ತಿಕೆ ಬೆಳಗಿನ ಜಾವ ರವಿಗಿಂತ ಮೊದಲೇ ಉದಯಿಸಿದಾಗ ಕಳೆ ಕೀಳುವ ಸಮಯ (ಇದು ಈಗ ಮೇ-ಜೂನ್‌ನಲ್ಲಿ ಆಗುತ್ತದೆ). – ಇದು ನಮ್ಮ ದೇಶಕ್ಕಂತೂ ಅನ್ವಯವಾಗುವುದಿಲ್ಲ.

ದೂರದರ್ಶಕದಿಂದ ಕೃತ್ತಿಕಾ ಗುಚ್ಛವನ್ನು ನೋಡಿದಾಗ ಸುಮಾರು ಐವತ್ತು ಅರವತ್ತು ನಕ್ಷತ್ರಗಳು ಕಾಣುವುವು. ದೊಡ್ಡ ದೂರದರ್ಶಕದಿಂದ ಒಂದು ಗಂಟೆಯಷ್ಟು ದೀರ್ಘಕಾಲ ತೆರೆದು ಹಿಡಿದ ಕ್ಯಾಮರಾದಿಂದ ತೆಗೆದ ಚಿತ್ರದಲ್ಲಿ ಇನ್ನೂ ಒಂದು ವಿಶೇಷ ಕಾಣುತ್ತದೆ. ನಕ್ಷತ್ರಗಳ ಸುತ್ತ ತೆಳ್ಳನೆಯ ದೂಳಿನ ಮೋಡ ಆವರಿಸಿರುವುದು ಕಂಡುಬರುತ್ತದೆ. ಈ ಮೋಡ ಎಲ್ಲಿಯದು ? ಈ ನಕ್ಷತ್ರಗಳೇಕೆ ಒತ್ತಟ್ಟಿಗೆ ಸೇರಿಕೊಂಡಿವೆ ? – ಎಂಬಂತಹ ಪ್ರಶ್ನೆಗಳಿಗೆ ಈಗ ಉತ್ತರ ದೊರಕಿದೆ. ಈ ಗುಚ್ಛದ ನಕ್ಷತ್ರಗಳೆಲ್ಲಾ ಒಟ್ಟಿಗೆ ಬೃಹತ್ ಮೋಡವೊಂದರಿಂದ ಜನಿಸಿದವು. ಈ ಸೃಷ್ಟಿ ನಡೆದು ನೂರು ಮಿಲಿಯನ್ ವರ್ಷಗಳಾಗಿವೆ. ಆದರೂ ಖಗೋಳ ಅಳತೆಯಲ್ಲಿ ಇವು ''ಎಳೆಯ ಶಿಶುಗಳು'' ಎಂದೇ ಲೆಕ್ಕ. ಅವುಗಳ ಸೃಷ್ಟಿಗೆ ಬಳಕೆಯಾಗದೆ ಉಳಿದ ಮೋಡವೇ ಇನ್ನೂ ಅವನ್ನು ಆವರಿಸಿವೆ. ನಕ್ಷತ್ರ ಹೊರಬೀಳುವ ವಿಕಿರಣ ಕ್ರಮೇಣ ಅವನ್ನು ದೂರ ತಳ್ಳುತ್ತವೆ.

ಇಂದು ನಮ್ಮನ್ನು ತಲುಪುತ್ತಿರುವ ಬೆಳಕು ಆ ನಕ್ಷತ್ರಗಳಿಂದ ಸುಮಾರು ೩೮೦ ವರ್ಷಗಳ ಹಿಂದೆ ಹೊರಟಿತ್ತು. ಇತರ ಕ್ಷೀಣಗುಚ್ಛಗಳ ದೂರ ಹಾಗೂ ವಯಸ್ಸಿನ ಅಳತೆಗೆ ಕೃತ್ತಿಕಾ ಅಥವಾ ಪ್ಲೈಯಡಿಸ್ ಅಳತೆಗೋಲಾಗಿದೆ.

ಕೃತ್ತಿಕೆಯ ಬಗ್ಗೆ ಇಷ್ಟೆಲ್ಲಾ ತಿಳಿದಮೇಲೆ ಅದನ್ನು ನೋಡಲೇಬೇಕು ಎಂದು ನಿಮಗನ್ನಿಸಿರಬೇಕು. ತಲೆ ಎತ್ತಿ ನೋಡಿದರಾಯಿತು ! ಹೌದೋ ಅಲ್ಲವೋ ಎಂದು ಅನುಮಾನ ಬಂದಿತೇ ? ಇಲ್ಲಿದೆ ಒಂದು ಸುಳಿವು.

ಪಶ್ಚಿಮದಲ್ಲಿ ಫಳಗುಟ್ಟುವ ಶುಕ್ರನನ್ನು ಗುರುತಿಸಲು ಯಾರ ಸಹಾಯವೂ ಬೇಕಿಲ್ಲ. ಏಪ್ರಿಲ್ ೧ ರಿಂದ ೪ರವರೆಗೆ ಅದರ ಆಸುಪಾಸನ್ನು ಗಮನವಿಟ್ಟು ನೋಡಿ. ದುರ್ಬೀನಿದ್ದರಂತೂ ಇನ್ನೂ ಒಳ್ಳೆಯದು. ಶುಕ್ರ ಈ ದಿನಗಳಲ್ಲಿ ಕೃತ್ತಿಕೆಯ ಪಕ್ಕದಲ್ಲೇ ಹಾದುಹೋಗುವುದು. ಸ್ವಲ್ಪ ಮೇಲೆ ಕಾಣುವ ಕ್ಷೀಣ ಕೆಂಪು ಚುಕ್ಕೆ ಮಂಗಳ. ಪ್ರತಿ ಸಂಜೆ ಇವುಗಳ ಓಟವನ್ನು ಗಮನಿಸುತ್ತಾ ಬನ್ನಿ. ೭ನೆಯ ತಾರೀಖು ಮಂಗಳದ ಪಕ್ಕ ಕಾಣುವ ಕೆಂಪು ನಕ್ಷತ್ರವೇ ರೋಹಿಣಿ. ಕೃತ್ತಿಕೆಯನ್ನು ದಾಟಿ ಬರುವ ಶುಕ್ರ ೧೬ರಂದು ರೋಹಿಣಿಯ ಪಕ್ಕ ಕಾಣುತ್ತದೆ. ಮಂಗಳದ ಜೊತೆ ಸೇರುತ್ತದೆ. ೨೩ರಂದು ಚಂದ್ರನೂ ಈ ಜೋಡಿಯ ಮಧ್ಯೆ ಸೇರಿಕೊಳ್ಳುತ್ತಾನೆ. ಆ ದಿನ ಮಧ್ಯಾಹ್ನ ೧೫:೪೪ಕ್ಕೆ ಚಂದ್ರ-ಶುಕ್ರರ ನಡುವಿನ ಅಂತರ ಕನಿಷ್ಠ. ಅಂದರೆ ಸಂಜೆ ನೀವು ನೋಡಿದಾಗ ಚಂದ್ರ ಶುಕ್ರದ ಪಕ್ಕವೇ ಕಾಣುತ್ತದೆ. ಸುಮಾರು ಹತ್ತು ಗಂಟೆಗಳ ತರುವಾಯ ಅಂದರೆ ೨೪ರ ಬೆಳಗಿನ ಜಾವ ೨:೧೯ಕ್ಕೆ ಚಂದ್ರ ಮಂಗಳದ ಪಕ್ಕ ಕಾಣುತ್ತದೆ. ಆದರೆ ಆಗ ನಮ್ಮ ಆಕಾಶದಲ್ಲಿ ಇವು ಕಾಣುವುದಿಲ್ಲ. ಭೂಗೋಳದ ಇನ್ನೊಂದು



*ದೂರದರ್ಶಕದ ಮೂಲಕ ಕೃತ್ತಿಕಾ ನಕ್ಷತ್ರ ಗುಚ್ಛದ ನೋಟ*

ಭಾಗದವರಿಗೆ (ಯುರೋಪ್) ಚಂದ್ರ ಮಂಗಳದ ಪಕ್ಕ ಬಂದಿರುವುದು ಕಾಣುತ್ತದೆ. ೨೪ರ ರಾತ್ರಿಗೆ ಚಂದ್ರ ಮಂಗಳವನ್ನು ಹಿಂದೆ ಹಾಕಿ ಮುನ್ನಡೆದಿರುತ್ತದೆ.

ಕಳೆದ ತಿಂಗಳ ಕೊನೆಯಲ್ಲಿ ಐದೂ ಗ್ರಹಗಳನ್ನು ನೋಡುವ ಅವಕಾಶ ಸಿಕ್ಕಿತ್ತಲ್ಲವೇ ? ಅದು ಈ ತಿಂಗಳ ಮೊದಲ ವಾರಕ್ಕೆ ಮುಂದುವರಿದಿದೆ. ಕ್ರಮೇಣ ದಿಗಂತದ ಅಂಚಿಗೆ ಸರಿಯುವ ಬುಧ ಎರಡನೆಯ ವಾರದಿಂದಲೇ ಕಾಣೆಯಾಗುವುದು. ಉಳಿದ ನಾಲ್ಕು ಗ್ರಹಗಳನ್ನು ಸುಲಭವಾಗಿ ಗುರ್ತಿಸಬಹುದು. ೨ರಂದು ಮತ್ತು ೩೦ ರಂದು ಚಂದ್ರದ ಪಕ್ಕ ಗುರು ಗ್ರಹ ಕಾಣುತ್ತದೆ. ೨೫ರಂದು ಶನಿಗ್ರಹದ ಪಕ್ಕ ಚಂದ್ರ ಕಾಣುತ್ತದೆ.

೫ರಂದು ಹುಣ್ಣಿಮೆಯ ಚಂದ್ರನ ಪಕ್ಕ ಕಾಣುವ ನೀಲಿ ನಕ್ಷತ್ರವೇ ಚಿತ್ರಾ. ಆದ್ದರಿಂದ ಈ ತಿಂಗಳ ಹೆಸರು ಚೈತ್ರ. ೧೯ರ ಅಮಾವಾಸ್ಯೆಯಂದು ಸೂರ್ಯಗ್ರಹಣವಿದೆ. ಚಂದ್ರನ ನೆರಳು ಅಂಟಾರ್ಕ್ಟಿಕ, ದಕ್ಷಿಣ ಆಫ್ರಿಕಗಳ ಮೇಲೆ ಹಾದುಹೋಗುತ್ತದೆ. ಆ ಭಾಗದ ಜನ ಪಾರ್ಶ್ವಗ್ರಹಣವನ್ನು ನೋಡುವರು. ನಮಗೆ ಗ್ರಹಣದ ಅರಿವೂ ಆಗುವುದಿಲ್ಲ.

ಏಪ್ರಿಲ್ ೨೨ರಂದು ಬೆಳಗಿನ ಜಾವ ಉಲ್ಕೆಗಳ ಸಂಖ್ಯೆಯಲ್ಲಿ ಸ್ವಲ್ಪ ಹೆಚ್ಚಳ ಕಂಡು ಬರುವುದು. ಇದಕ್ಕೆ ಲಿರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆಯೇ ಕಾರಣ.

ಬರಿಗಣ್ಣಿಗೆ ಕಾಣಬಹುದು ಎಂದು ಆಸೆ ಹುಟ್ಟಿಸಿರುವ ಲೀನಿಯರ್ ಧೂಮಕೇತು ತಿಂಗಳ ಕೊನೆಯಲ್ಲಿ ಬೆಳಗಿನ ಜಾವ ಪೂರ್ವ ದಿಗಂತದ ಅಂಚಿನಲ್ಲಿ ಕಾಣುವುದು. ಏಪ್ರಿಲ್ ೨೩ರಂದು ಸೂರ್ಯನನ್ನು ಸಮೀಪಿಸುವ ಅದು ಹಿಂದಕ್ಕೆ ಮರಳುವ ಸಂದರ್ಭದಲ್ಲಿ ಪುನಃ ದಿಗಂತದ ಅಂಚಿಗೇ ಸರಿಯುತ್ತದೆ.

ಇನ್ನೊಂದು ಧೂಮಕೇತು ನೀಟ್, ದಕ್ಷಿಣದ ಅಂಚಿನಲ್ಲಿದೆ. ತಿಂಗಳ ಕೊನೆಯ ವಾರದಲ್ಲಿ ಇದು ಪಪಿಸ್ ಎಂಬ ನಕ್ಷತ್ರ ಪುಂಜದಲ್ಲಿ ಕಾಣುತ್ತದೆ. ಪಪಿಸ್ ಎಂದರೆ ನಾಯಿ ಮರಿಗಳು ಎಂದರ್ಥ. ಆದರೆ ಆರ್. ಎಲ್. ನರಸಿಂಹಯ್ಯನವರು ಇದನ್ನು ನೌಕಾಪೃಷ್ಠ ಎಂದು ಕರೆದಿದ್ದಾರೆ. ಪ್ರಕಾಶಮಾನವಾದ ನಕ್ಷತ್ರಗಳಾದ ಸಿರಿಯಸ್ ಮತ್ತು ಕನೋಪಸ್‌ಗಳ ಮಧ್ಯೆ ಇದೆ, ಈ ಪುಂಜ (ನಕ್ಷೆಯಲ್ಲಿ ಪಪಿಸ್ ಎಂದೇ ಸೂಚಿಸಲಾಗಿದೆ).

ಮುಂದಿನ ತಿಂಗಳಲ್ಲಿ ಈ ಎರಡೂ ಧೂಮಕೇತುಗಳು (ಸಿರಿಯಸ್ ಒಳಗೊಂಡ) ಮಹಾಶ್ವಾನ ಪುಂಜದಲ್ಲಿ ಕಾಣಿಸಿಕೊಳ್ಳುತ್ತವೆ. ಆದ್ದರಿಂದ ಈ ಭಾಗವನ್ನು ಚೆನ್ನಾಗಿ ಮನನ ಮಾಡಿಕೊಳ್ಳಿ.

**ಖಗೋಳ ದಿನಚರಿ**

೨ ಚಂದ್ರನ ಪಕ್ಕ ಕಾಣುವ ಪ್ರಕಾಶಮಾನವಾದ ಚುಕ್ಕೆಯೇ ಗುರುಗ್ರಹ.
೫ ಹುಣ್ಣಿಮೆ (೧೬:೩೩ಕ್ಕೆ) ಚಂದ್ರನ ಪಕ್ಕ ಕಾಣುವ ನೀಲಿ ನಕ್ಷತ್ರವೇ ಚಿತ್ರಾ.
೨ ರಿಂದ ೫ ಶುಕ್ರದ ಪಕ್ಕ ಕೃತ್ತಿಕಾ ನಕ್ಷತ್ರ ಗುಚ್ಛ.
೭ ಮಂಗಳ ಮತ್ತು ರೋಹಿಣಿ ನಕ್ಷತ್ರಗಳು ಪಕ್ಕಪಕ್ಕ ಕಾಣುವುವು.
೧೨ ಚಾಂದ್ರಮಾಸದ ಕೊನೆಯ ಪಾದ ಚಂದ್ರೋದಯ ನಡುರಾತ್ರಿಯಲ್ಲಿ.
೧೬ ಶುಕ್ರಗ್ರಹದ ಪಕ್ಕ ರೋಹಿಣಿ ನಕ್ಷತ್ರ.
೧೯ ಅಮಾವಾಸ್ಯೆ ೧೮ : ೫೧ಕ್ಕೆ
ಪಾರ್ಶ್ವ ಸೂರ್ಯಗ್ರಹಣ – ಅಂಟಾರ್ಕ್ಟಿಕಾ ಆಫ್ರಿಕಾದ ದಕ್ಷಿಣ ಭಾಗಗಳ ಮೇಲೆ ನೆರಳು ಬೀಳುತ್ತದೆ.
೨೨ ಲಿರಿಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ.
೨೩ ಶುಕ್ರ, ಮಂಗಳ ಮತ್ತು ಚಂದ್ರ – ಇವು ಗುಂಪುಗೂಡಿದಂತೆ ಕಾಣುತ್ತವೆ.
೨೩ ಲೀನಿಯರ್ ಧೂಮಕೇತು ಅಪರವಿಬಿಂದುವಿನಲ್ಲಿ.
೨೫ ಚಂದ್ರದ ಪಕ್ಕ ಕಾಣುವ ಗ್ರಹವೇ ಶನಿ.
೨೭ ಚಾಂದ್ರಮಾಸದ ಮೊದಲ ಪಾದ ಚಂದ್ರಾಸ್ತ ನಡುರಾತ್ರಿಯಲ್ಲಿ.
೩೦ ಚಂದ್ರದ ಪಕ್ಕ ಕಾಣುವ ಗ್ರಹವೇ ಗುರು.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು-೫೬೦ ೦೦೧

# ಸಾಮ್ರಾಜ್ಯಶಾಹಿಗಳ ಅಪಾಯಕಾರಿ ಹಂಚಿಕೆ




ನ್ಯೂಯಾರ್ಕ್

ಎಲ್ಲ ಅಂತರರಾಷ್ಟ್ರೀಯ ನಿಯಮಗಳನ್ನೂ ಉಲ್ಲಂಘನೆ ಮಾಡಿ, ವಿಶ್ವಸಂಸ್ಥೆಯನ್ನು ಮೂಲೆಗೊತ್ತಿ, ಜನಾಭಿಪ್ರಾಯವನ್ನು ತಳ್ಳಿಹಾಕಿ ಇರಾಕಿನ ಮೇಲೆ ನಡೆಸಿದ ದುರಾಕ್ರಮಣ ಒಂದು ವರ್ಷವಾಗುತ್ತ ಬಂದರೂ ಅಮೆರಿಕ ಮತ್ತು ಬ್ರಿಟನ್‌ಗಳಿಗೆ ಅದು ಇನ್ನೂ ನುಂಗಲಾರದ ತುತ್ತು. ಇರಾಕಿನ ಪ್ರತಿಭಟನೆ ಒಂದು ಕಡೆಯಾದರೆ, ತಮ್ಮ ದುಷ್ಕೃತ್ಯವನ್ನು ಸಮರ್ಥಿಸಿಕೊಳ್ಳುವುದು ಅಮೆರಿಕದ ಅಧ್ಯಕ್ಷ ಜಾರ್ಜ್ ಬುಷ್ ಮತ್ತು ಬ್ರಿಟನ್ನಿನ ಪ್ರಧಾನಿ ಟೋನಿ ಬ್ಲೇರ್ ದ್ವಯರಿಗೆ ದಿನಕಳೆದಂತೆ ಹೆಚ್ಚು ಹೆಚ್ಚು ದುಸ್ತರವಾಗುತ್ತಿದೆ. ಒಂದು ಸುಳ್ಳನ್ನು ಮುಚ್ಚಲು ಹೋಗಿ ಹಲವಾರು ಸುಳ್ಳುಗಳನ್ನು ಹೊಸೆಯಬೇಕಾಗಿ ಬಂದಿದೆ ಅವರಿಗೆ. ಅದಕ್ಕೆ ಸರಿಯಾಗಿ ಅವರು ನಡೆಸಿರುವ ಹೀನಕೃತ್ಯಗಳೂ ಬೆಳಕಿಗೆ ಬರತೊಡಗಿವೆ. ಸರ್ವಾಧಿಕಾರಿ ಸದ್ದಾಮ್ ಹುಸೇನ್ ಆಡಳಿತದಲ್ಲಿ ಇರಾಕ್ ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ದಾಸ್ತಾನು ಹೊಂದಿದೆ ಎಂಬ ಆರೋಪ ಹುರುಳಿಲ್ಲದ್ದು ಎಂಬುದು ಮೊದಲೇ ಗೊತ್ತಿದ್ದಿತು. ಅಮೆರಿಕ ಇರಾಕನ್ನು ಆಕ್ರಮಿಸಿಕೊಂಡ ಮೇಲೆ ಕೂಡ ಅಂಥ ಅಸ್ತ್ರಗಳಾವುವೂ ಪತ್ತೆಯಾಗಲಿಲ್ಲ. ಸಾಮ್ರಾಜ್ಯಶಾಹಿಗಳ ದೊಡ್ಡ ಅಸತ್ಯ ಜಗಜ್ಜಾಹೀರಾಯಿತು. ಇದೊಂದು ರೀತಿಯದಾದರೆ ಬುಷ್-ಬ್ಲೇರ್ ಕಂಪೆನಿ ಅದಕ್ಕಿಂತಲೂ ಹೀನಕೃತ್ಯಗಳನ್ನು ಈ ಸಂಬಂಧದಲ್ಲಿ ಎಸಗಿದೆ. ವಿಶ್ವಸಂಸ್ಥೆಯ ಕಚೇರಿಯ ಮೇಲೆ, ಅದರ ಪದಾಧಿಕಾರಿಗಳ ಮೇಲೆ ನಿಗಾ ಇರಿಸಲು ಗೂಢಚಾರರನ್ನು ನೇಮಿಸಿದ್ದು ಈಗ ಬಯಲಾಗಿದೆ. ಅದಕ್ಕಿಂತ ಹೆಚ್ಚಾಗಿ ವಿಶ್ವಸಂಸ್ಥೆ ಮಹಾ ಕಾರ್ಯದರ್ಶಿಯ ಟೆಲಿಫೋನ್ ಕದ್ದಾಲಿಕೆ ಪ್ರಕರಣ ಬಯಲಾಗಿದೆ. ಇವೆಲ್ಲ ಆಂಗ್ಲೋ-ಅಮೆರಿಕನ್ ಸಾಮ್ರಾಜ್ಯಶಾಹಿಗಳು ಎಷ್ಟು ಕೀಳುಮಟ್ಟದ ಚರ್ಯೆಗಳಲ್ಲಿ ತೊಡಗಬಲ್ಲರು ಎನ್ನುವುದನ್ನು ಸಾಬೀತು ಮಾಡಿದೆ. ಇಷ್ಟಾದರೂ ವಿಶ್ವಸಂಸ್ಥೆಯ ಮಹಾಕಾರ್ಯದರ್ಶಿ ಕೋಫಿ ಅನ್ನಾನ್ ಕಿಂಚಿತ್ ಪ್ರತಿಭಟನೆಯನ್ನೂ ತೋರದೆ ಮೌನವಾಗಿರುವುದು ಹಾಸ್ಯಾಸ್ಪದವಾಗಿದೆ. ಅದು ಅವರ ನಿಸ್ಸಹಾಯಕತೆಯನ್ನು ತೋರಿಸುತ್ತದಲ್ಲದೆ, ಪುಕ್ಕಲುತನವನ್ನೂ ಪ್ರದರ್ಶಿಸಿದೆ. ವಿಶ್ವಸಂಸ್ಥೆಯ ಗೌರವ ಘನತೆಗಳನ್ನು ಎತ್ತಿ ಹಿಡಿಯುವುದರಲ್ಲಿ ಅವರ ಅಸಮರ್ಥತೆ ಎದ್ದುಕಾಣುತ್ತದೆ. ಪಾತಕ ಕೃತ್ಯಗಳಲ್ಲಿ ಪಳಗಿರುವ ಬುಷ್-ಬ್ಲೇರ್ ಏನುಬೇಕಾದರೂ ಮಾಡಲು ಸಿದ್ಧ ತಮ್ಮ ಬೇಳೆ ಬೇಯಿಸಿಕೊಳ್ಳಲು.

ಈಗ ಬುಷ್ ಮತ್ತು ಅವರ ಭಂಟ ಟೋನಿ ಬ್ಲೇರ್ ನಾಗರಿಕ ಜಗತ್ತು ಅಂಗೀಕರಿಸಿರುವ ಅಂತರರಾಷ್ಟ್ರೀಯ ನಿಯಮಗಳನ್ನು ತಮ್ಮ ದುಶ್ಚರ್ಯೆಗಳಿಗೆ ಅನುಕೂಲವಾಗುವಂತೆ ಬದಲಿಸುವ ಯೋಜನೆಯಲ್ಲಿ ತೊಡಗಿದ್ದಾರೆ. ಸಾಮ್ರಾಜ್ಯಶಾಹಿಗಳ ಅಧಿನಾಯಕತ್ವ ಸ್ಥಾಪಿಸುವ ಗುರಿಗೆ ಪೂರಕವಾಗಿರುವಂತೆ ಶತಮಾನಗಳ ಕಾಲದಿಂದಲೂ ಆಚರಣೆಯಲ್ಲಿರುವ ನಿಯಮಗಳನ್ನು ತಿದ್ದುವುದಕ್ಕೆ ಪ್ರಯತ್ನ ನಡೆದಿದೆ. ಅಮೆರಿಕದ ಹಿತಾಸಕ್ತಿಗಳಿಗೆ ಎದುರಾಗುವ, ಅದರ ನೀತಿಗಳನ್ನು ಒಪ್ಪದಿರುವ, ವಿರೋಧಿಸುವ ದೇಶಗಳ ಮೇಲೆ ಹಠಾತ್ ದಾಳಿ ನಡೆಸುವ ಜಾರ್ಜ್ ಬುಷ್‌ರ ದುರುದ್ದೇಶಗಳಿಗೆ ಸೈದ್ಧಾಂತಿಕ ಮೆರಗು ಕೊಟ್ಟು, ಅದಕ್ಕೆ ಅಂತರರಾಷ್ಟ್ರೀಯ ಮನ್ನಣೆ ಗಳಿಸುವ ಪ್ರಯತ್ನ ನಡೆದಿದೆ. ಮಾನವ ಹಕ್ಕುಗಳ ಪ್ರತಿಪಾದನೆಗೆ, ಆ ಹಕ್ಕುಗಳನ್ನು ಅನುಷ್ಠಾನಗೊಳಿಸುವುದಕ್ಕೆ ನೇಮಕಗೊಂಡಿರುವವರು ತಾವು ಮಾತ್ರವೇ ಎಂದು ನಂಬಿಕೊಂಡಿರುವ ಸಾಮ್ರಾಜ್ಯಶಾಹಿಗಳು, ಅವರ ಭಂಟರು ಎಂಥ ಹೇಯ ಕೃತ್ಯಗಳನ್ನು ನಡೆಸಿದ್ದಾರೆ ಎನ್ನುವುದನ್ನು ಇಲ್ಲಿ ಪಟ್ಟಿ ಮಾಡಲಾಗದು; ಅವು ಇತಿಹಾಸದ ಪುಟಗಳಲ್ಲಿ ಸೇರಿಹೋಗಿವೆ. ಸಾರಾಸಗಟಾಗಿ ಇಡೀ ದೇಶಗಳನ್ನೇ, ಜನಸಮುದಾಯಗಳನ್ನೇ ದಾಸ್ಯಕ್ಕೆ ದೂಡಿರುವ ಸಾಮ್ರಾಜ್ಯಶಾಹಿಗಳಿಗೆ ಮಾನವ ಹಕ್ಕುಗಳ ಕುರಿತು ಮಾತನಾಡಲು ಯೋಗ್ಯತೆ ಏನಿದೆ? ತಮ್ಮ ದೇಶದಲ್ಲೇ ಮಾನವ ಹಕ್ಕುಗಳನ್ನು ಉಲ್ಲಂಘನೆ ಮಾಡುತ್ತ ಬಂದಿರುವ ಜಾರ್ಜ್ ಬುಷ್-ಬ್ಲೇರ್ ಇವರುಗಳು ಇತರ ದೇಶಗಳ ಮೇಲೆ ಮಾನವ ಹಕ್ಕುಗಳ ಹೆಸರಿನಲ್ಲಿ ದುರಾಕ್ರಮಣ ನಡೆಸಲು ಈಗ ಹಂಚಿಕೆ ಹೂಡಿದ್ದಾರೆ. ಈ ಮಾನವ ಹಕ್ಕುಗಳನ್ನು ಎತ್ತಿ ಹಿಡಿಯುವ ಅಮೆರಿಕದ ತಂತ್ರ ಹೊಸದೇನಲ್ಲ.

ಅಮೆರಿಕದ ಅಧ್ಯಕ್ಷ ಬುಷ್‌ರ ನಿಷ್ಠಾವಂತ ಭಂಟ ಬ್ರಿಟಿಷ್ ಪ್ರಧಾನಿ ಟೋನಿ ಬ್ಲೇರ್ ಇತ್ತೀಚೆಗೆ ಮಾತನಾಡುತ್ತ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಇತರ ದೇಶಗಳ ಆಂತರಿಕ ವ್ಯವಹಾರಗಳಲ್ಲಿ ತಲೆಹಾಕಲಾಗದು ಎಂಬ ನೂರಾರು ವರ್ಷಗಳಿಂದ ಆಚರಣೆಯಲ್ಲಿರುವ ನಿಯಮವನ್ನು ಬದಲಿಸುವ ಕಾಲ ಸನ್ನಿಹಿತವಾಗಿದೆ ಎಂದು ಹೇಳಿದ್ದಾರೆ. ಮಾನವ ಹಕ್ಕುಗಳು ಉಲ್ಲಂಘನೆಯಾಗುತ್ತಿದೆ ಅಥವಾ ಇತರ ದೇಶಗಳಿಗೆ ವಿಪತ್ಕಾರಿಯಾಗಿದೆ ಎಂದು ತಮಗೆ ತೋರಿದಾಗ ಅಂಥ ದೇಶಗಳ ಮೇಲೆ ಹಠಾತ್ ದಾಳಿ ನಡೆಸಲು ಅವಕಾಶವಿರುವಂತೆ ನಿಯಮಗಳಲ್ಲಿ ಬದಲಾವಣೆಯಾಗಬೇಕು ಎಂದೂ ಅವರು ಹೇಳಿದ್ದಾರೆ. ಪ್ರತ್ಯಕ್ಷವಾಗಿ ಸ್ವತಃ ತಮಗೆ ಯಾವುದೇ ಅಪಾಯ ನೇರವಾಗಿಲ್ಲದಿದ್ದರೂ ಕೂಡ ಅಂಥ ದೇಶಗಳ ಮೇಲೆ ಎರಗಲು ಅವಕಾಶವಿರಬೇಕು ಎನ್ನುವುದು ಅವರ ವಾದ. ತಮ್ಮ ವಾದವನ್ನು ಪುಷ್ಟೀಕರಿಸಲು ಅವರು ನೀಡಿರುವ ಉದಾಹರಣೆ ಸದ್ದಾಮ್ ಹುಸೇನ್ ಆಡಳಿತದಲ್ಲಿದ್ದ ಇರಾಕ್. ಈ ಸಂದರ್ಭದಲ್ಲಿ ಇರಾಕಿನ ಮೇಲೆ ದಾಳಿಗೆ ಅನುಮತಿ ದೊರಕದೇ ಹೋದದ್ದು ಬ್ಲೇರ್ ದೃಷ್ಟಿಯಲ್ಲಿ ವಿಶ್ವಸಂಸ್ಥೆಯ ನಿಷ್ಕ್ರಿಯತೆ. ಈಗ ವಿಶ್ವಸಂಸ್ಥೆಯನ್ನು ತಮ್ಮ ಕೈಗೊಂಬೆಯಾಗಿಸಿಕೊಳ್ಳುವುದೇ ಅವರ ಗುರಿ. ಅದಕ್ಕಾಗಿಯೇ ಅವರು ಈಗ ಭದ್ರತಾ ಮಂಡಲಿಯ ನಿಯಮಗಳನ್ನು ೨೧ನೇ ಶತಮಾನದ ವಾಸ್ತವತೆಗೆ ಅನುಗುಣವಾಗಿ, ಅಂದರೆ ದುರಾಕ್ರಮಣಗಳಿಗೆ ಪರವಾನಗಿ ನೀಡುವಂಥ ರೀತಿಯಲ್ಲಿ ಬದಲಾಯಿಸಬೇಕು ಎಂದು ಆಗ್ರಹಪಡಿಸಿದ್ದಾರೆ. ಅಮೆರಿಕ-ಬ್ರಿಟನ್‌ಗಳಿಗೆ ಈಗ ಅಗತ್ಯವಿರುವುದು ತಮ್ಮ ನೀಚಕೃತ್ಯಗಳಿಗೆ ಅಂತರರಾಷ್ಟ್ರೀಯ ಮನ್ನಣೆ ಗಳಿಸಿಕೊಳ್ಳುವುದು. ಅನತಿ ಕಾಲದಲ್ಲೇ ಚುನಾವಣೆಗಳನ್ನು ಎದುರಿಸಲಿರುವ ಬುಷ್-ಬ್ಲೇರ್ ಸ್ಪೇನಿನ ಜನತೆ ಇತ್ತೀಚೆಗೆ ನಡೆದ ಚುನಾವಣೆಗಳಲ್ಲಿ ನೀಡಿರುವ ಉತ್ತರವನ್ನು ಗಮನಿಸುವುದು ಲೇಸು. ಮಾನವಹಕ್ಕುಗಳ ಉಲ್ಲಂಘನೆಯನ್ನು ಇತರ ದೇಶಗಳಿಗೆ ಆರೋಪಿಸುವ ಅಮೆರಿಕ ಬ್ರಿಟನ್‌ಗಳಿಗೆ ಅಂಥ ಅಧಿಕಾರ ನೀಡಿರುವವರು ಯಾರು? ಸ್ವಯಂ ನೇಮಿತ ಅಂತರರಾಷ್ಟ್ರೀಯ ಪೊಲೀಸರಂತೆ ವರ್ತಿಸುವ ಹಕ್ಕು ತಮಗೆ ಇದೆ ಎಂದು ಅವರು ತಿಳಿದುಕೊಂಡಿದ್ದಾರೆ ಅಷ್ಟೆ. ಪ್ರಬಲ ರಾಷ್ಟ್ರಗಳಾಗಿರುವ ಇವು ಆಡಿದ್ದೇ ಆಟ ಎಂದುಕೊಂಡಂತಿವೆ. ಇಂಥ ದುರಹಂಕಾರಿಗಳ ಮೇಲೆ ತಮ್ಮ ಕೈಲಾದ ರೀತಿಯಲ್ಲಿ ದಾಳಿ ನಡೆಸಲು ಇತರ ದೇಶಗಳಿಗೂ, ಜನತೆಗೂ ಹಕ್ಕು ಇದೆ ಎನ್ನುವುದನ್ನು ಅವರಿಗೆ ಮನವರಿಕೆ ಮಾಡಬೇಕಾಗಿದೆ. ವಿಯೆಟ್ನಾಂ ದುಸ್ಸಾಹಸದಿಂದ ಪಾಠ ಕಲಿಯದೇ ಹೋಗಿರುವ ಅಮೆರಿಕ ಇರಾಕಿನ ಪ್ರಕರಣದಿಂದಲೂ ಪಾಠ ಕಲಿತಿಲ್ಲ. ಸಾಮ್ರಾಜ್ಯಶಾಹಿಗಳ ಈ ಬೂಟಾಟಿಕೆಗಳಿಗೆ ಸರಿಯಾದ ಉತ್ತರವನ್ನು ಜನತೆ ನೀಡುವುದರಲ್ಲಿ ಅನುಮಾನವೇ ಇಲ್ಲ. ಅಮೆರಿಕದ ಚರ್ಯೆಗಳಿಗೆ ವಿರುದ್ಧವಾಗಿ ಇರಾಕಿನಲ್ಲಿ, ಇತರ ಕಡೆಗಳಲ್ಲಿ ನಡೆಯುತ್ತಿರುವ ಪ್ರತಿಭಟನೆಗಳೇ ಅದಕ್ಕೆ ಸಾಕ್ಷಿ.

ಇತರ ದೇಶಗಳ ಆಂತರಿಕ ವ್ಯವಹಾರಗಳಲ್ಲಿ ತಲೆ ಹಾಕಬಾರದು ಎಂಬ ಅಂತರರಾಷ್ಟ್ರೀಯ ನಿಯಮ ಅಂತರರಾಷ್ಟ್ರೀಯ ಸಂಬಂಧಗಳಿಗೆ, ದೇಶದೇಶಗಳ ನಡುವೆ ಸಂಬಂಧಗಳಿಗೆ ಮೂಲಾಧಾರ. ತಮಗೆ ಸೂಕ್ತವಾದ ವ್ಯವಸ್ಥೆಯನ್ನು ರೂಪಿಸಿಕೊಳ್ಳುವ ಹಕ್ಕು ಪ್ರತಿಯೊಂದು ಜನಸಮುದಾಯಕ್ಕೂ ಇರುತ್ತದೆ. ಇದನ್ನು ಯಾರಿಂದಲೂ ಕಸಿಯಲು ಸಾಧ್ಯವಿಲ್ಲ. ಆಂತರಿಕ ವಿಚಾರಗಳಲ್ಲಿ ತಲೆಹಾಕದಿರುವ ನಿಯಮಪಾಲನೆಯಾಗದಿದ್ದಲ್ಲಿ ಪ್ರಪಂಚದಲ್ಲಿ ಅರಾಜಕತೆ ಉಂಟಾಗುವುದೆಂಬುದರಲ್ಲಿ ಸಂದೇಹವಿಲ್ಲ. ಬಲಿಷ್ಠ ರಾಷ್ಟ್ರಗಳಿಗೆ ದುರ್ಬಲ ರಾಷ್ಟ್ರಗಳ ಮೇಲೆ ದುರಾಕ್ರಮಣ ಎಸಗಲು ಪರವಾನಗಿ ದೊರೆತಂತಾಗುತ್ತದೆ. ಸಾಮ್ರಾಜ್ಯಶಾಹಿಗಳಿಗೆ ಬೇಕಾಗಿರುವುದೇ ಅದು. ಈ ಇಪ್ಪತ್ತೊಂದನೆ ಶತಮಾನದಲ್ಲಿ ಸಾಮ್ರಾಜ್ಯಶಾಹಿಗಳು ಮತ್ತೊಮ್ಮೆ ಹಿಂಬಾಗಿಲಿನಿಂದ ವಸಾಹತು ಆಳ್ವಿಕೆ ತರುವ ಪ್ರಯತ್ನ ನಡೆಸುತ್ತಿದ್ದಾರೆಂಬುದು ಇವೆಲ್ಲದರಿಂದ ಸ್ಪಷ್ಟವಾಗುತ್ತಿದೆ. ಸಾಮ್ರಾಜ್ಯಶಾಹಿಗಳ ಈ ಪ್ರಯತ್ನಗಳನ್ನು ಹಿಮ್ಮೆಟ್ಟಿಸಲು ಜಗತ್ತಿನ ಎಲ್ಲ ಪ್ರಜಾಪ್ರಭುತ್ವವಾದಿ ಜನತೆಗಳು ಒಂದುಗೂಡಿ ಹೋರಾಟ ನಡೆಸಬೇಕಾಗಿದೆ. ರೂಢಿಯಲ್ಲಿರುವ ಅಂತರರಾಷ್ಟ್ರೀಯ ನಿಯಮಗಳನ್ನು ತಿರುಚುವ ಅಪಾಯಕಾರಿ ಪ್ರವೃತ್ತಿಯನ್ನು ಮೊಳಕೆಯಲ್ಲೇ ಚಿವುಟಿಹಾಕುವುದು ಅಗತ್ಯ. ಈ ಸಂದರ್ಭದಲ್ಲಿ ವಿಶ್ವಸಂಸ್ಥೆಯನ್ನು ಬಲಗೊಳಿಸಲು, ಅದನ್ನು ಹೆಚ್ಚು ಪ್ರಜಾಪ್ರಭುತ್ವಗೊಳಿಸಲು ಸೂಕ್ತ ಕ್ರಮಗಳನ್ನು ಕೈಗೊಳ್ಳುವುದು ಅಗತ್ಯವಾಗಿದೆ. ■

# ಭಾರತ ಆಧ್ಯಾತ್ಮವಾದಿಯೆ ?

ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಓರಿಯಂಟಲಿಸ್ಟರು (ಓರಿಯೆಂಟಾಲಜಿ : ಪೂರ್ವವನ್ನು ಕುರಿತ ಅಧ್ಯಯನ) – ಪೂರ್ವಕ್ಕಿಂತ ಪಶ್ಚಿಮ ದೇಶಗಳ ಸಂಸ್ಕೃತಿಯೇ ಶ್ರೇಷ್ಠವೆಂದು ಪೂರ್ವಾಗ್ರಹಪೀಡಿತರಾಗಿದ್ದರು. ಮತ್ತೊಂದೆಡೆ ಇದಕ್ಕೆ ಪ್ರತಿಕ್ರಿಯೆ ಎಂಬಂತೆ ರಾಷ್ಟ್ರೀಯವಾದಿಗಳು ಭಾರತೀಯ ವೇದಾಂತ ಭಗವದ್ಗೀತೆಯಂಥ ಆಧ್ಯಾತ್ಮವಾದಿ ತತ್ವಜ್ಞಾನಗಳಿಂದ ತಮ್ಮ ಹೋರಾಟಕ್ಕೆ ಸ್ಫೂರ್ತಿ ಪಡೆಯುತ್ತಿದ್ದರು.

ಭಾರತವನ್ನು ಆಧ್ಯಾತ್ಮವಾದಿ ರಾಷ್ಟ್ರ, ಹಳೆಯ, ಚಲನೆಯಿಲ್ಲದ ಸಮಾಜವೆಂದು ಓರಿಯಂಟಲಿಸ್ಟರು ಪ್ರತಿಪಾದಿಸಿದರೆ ರಾಷ್ಟ್ರೀಯವಾದಿಗಳು ಭಾರತದಲ್ಲಿ ಜನಪರ ಆಶಯಗಳಿರುವ ತಂತ್ರ 'ಶಾಕ್ತ' ಲೋಕಾಯತದಂಥ ಭೌತವಾದಿ ಬೃಹತ್ ಪರಂಪರೆಯಿರುವುದನ್ನು ಸಂಪೂರ್ಣ ನಿರ್ಲಕ್ಷಿಸಿದರು. ಚಲನರಹಿತವೆಂದು ಪ್ರತಿಪಾದಿಸಲು ಓರಿಯಂಟಲಿಸ್ಟರು ಬಳಸಿಕೊಂಡ ಸಂಗತಿಗಳನ್ನೇ ರಾಷ್ಟ್ರೀಯವಾದಿಗಳು ಜಗತ್ತಿಗೆ ಬುದ್ಧಿ ಹೇಳಬಲ್ಲ ಶ್ರೇಷ್ಠ ಸಂಸ್ಕೃತಿಯ ದೇಶವೆಂದು ವಾದಿಸಲು ಬಳಸಿಕೊಂಡಿರುವುದು ವಿಪರ್ಯಾಸ. ಇವರಿಬ್ಬರಿಗೂ ಭಾರತೀಯ ಆಧ್ಯಾತ್ಮವಾದ ಹೀಗೆ ತದ್ವಿರುದ್ಧ ನೆಲೆಯ ಅರ್ಥೈಸುವಿಕೆಗೆ ಕಾರಣವಾಯಿತು. ದುರಂತವೆಂದರೆ ಈ ಭಾವನೆಯು ಚರಿತ್ರೆ 'ಸಂಸ್ಕೃತಿ ಅಧ್ಯಯನ' ಧರ್ಮ-ದರ್ಶನಗಳ ಶೋಧನೆಯ ಸಂದರ್ಭದಲ್ಲಿ ಈಗಲೂ ಒಂದಿಲ್ಲೊಂದು ವಿಧದಲ್ಲಿ ಕೆಲಸ ಮಾಡುತ್ತಿರುವುದು.

ಭಾರತದಲ್ಲಿ ಆಧ್ಯಾತ್ಮವಾದಿ ದೃಷ್ಟಿಕೋನವನ್ನು ವ್ಯವಸ್ಥಿತವಾಗಿ ನೆಲೆಯೂರಿಸಲು ಮಾಡಿದ ಪ್ರಯತ್ನಗಳು ಅಪಾರ. ಆದರೆ ಇದರ ವಿರುದ್ಧ ನಿರಂತರವಾಗಿ ಹೋರಾಡಿಕೊಂಡು ಬಂದ ಪಂಥ ಪರಂಪರೆಗಳಿಗೆ ಕೊರತೆಯಿಲ್ಲ. ಪಕ್ಕಾ ಭೌತವಾದಿಗಳಿಂದ ಹಿಡಿದು, ಆತ್ಮವಾದಿ ನಾಸ್ತಿಕರು, ದೈವವಾದಿ ನಾಸ್ತಿಕರವರೆಗೆ ಈ ಪರಂಪರೆಯ ಹರಹು ಇದೆ.

ಚಾರ್ವಾಕ, ಲೋಕಾಯತಿಕರಂಥ ಪಕ್ಕಾ ನಾಸ್ತಿಕವಾದಿಗಳು, ಆ ಕಾಲದ ವೈಜ್ಞಾನಿಕ ಮನೋಭಾವದ ಪ್ರತೀಕವಾಗುತ್ತಾರೆ. ತಮ್ಮ ಕಾಲದಲ್ಲಿ ಪ್ರಚಲಿತವಿದ್ದ ಮೌಢ್ಯಗಳ, ಶೋಷಕ ವ್ಯವಸ್ಥೆಯ ಮತ್ತು ಪುರೋಹಿತಶಾಹಿಯ ವಿರುದ್ಧ ದನಿ ಎತ್ತಿದ್ದಾರೆ. ಅದು ಅವರನ್ನು ಸಹಜವಾಗಿ ಜನಪರ ನಿಲುವಿಗೆ ಪ್ರತಿನಿಧಿಗಳನ್ನಾಗಿಸಿದೆ. ಮಹಾಭಾರತದಲ್ಲಿ ಚಾರ್ವಾಕನನ್ನು ಕೊಂದುಹಾಕಿದ ಪ್ರಸಂಗ ಒಟ್ಟಾರೆ ಈ ಭೌತವಾದಕ್ಕೆ ಪ್ರಭುತ್ವ ಎಷ್ಟೊಂದು ವಿರೋಧವಿತ್ತು ಎಂಬುದರ ರೂಪಕವೂ ಆಗಬಹುದು.

ಆಶ್ಚರ್ಯವೆಂದರೆ ಕರ್ನಾಟಕದ ಎಷ್ಟೋ ಅಗ್ರಹಾರಗಳಲ್ಲಿ ಲೋಕಾಯತವೂ ಕೂಡ ಒಂದು ಪಠ್ಯ ವಿಷಯವಾಗಿತ್ತೆಂಬುದನ್ನು ಹಲವಾರು ಶಾಸನಗಳು ದಾಖಲಿಸಿರುವುದು. ಉದಾಹರಣೆಗೆ, ಪಿರಿಯ ಕೆರೆಯೂರು ಅಗ್ರಹಾರದ ಸಾವಿರ ಮಹಾಜನಗಳು ಲೋಕಾಯತ, ವೈಶೇಷಿಕ, ಸಾಂಖ್ಯ, ಬೌದ್ಧ, ಆರ್ಹತ, ಮೀಮಾಂಸಾ ಸರೋವರ ರಾಜಹಂಸರಾಗಿದ್ದರು (ಕೆ.ಐ. IV ಪುಟ ೭೨; ಬಾಳಂಬೀಡ ಶಾಸನ, ಧಾರವಾಡ ಜಿಲ್ಲೆ, ಕ್ರಿ.ಶ. ೧೦೮೮). ಕ್ರಿ.ಶ. ೧೧೯೯ರ ನೂಲಗೇರಿ ಶಾಸನದಲ್ಲೂ ಇದೇ ಅಭಿಪ್ರಾಯವಿದೆ. ಸಂಶಿಯ (ಧಾರವಾಡ ಜಿಲ್ಲೆ, ಕ್ರಿ. ಶ. ೧೧೪೪; ಎಸ್.ಐ.ಐ. XX ಪುಟ ೧೪೬) ಅಗ್ರಹಾರದ ೪೦೦ ಬ್ರಾಹ್ಮಣರು ಲೋಕಾಯತ, ವೈಶೇಷಿಕಾದಿಗಳಲ್ಲಿ ಪರಿಣತರಾಗಿದ್ದರು. ಬಡ್ಲಿಯ (ಬೆಳಗಾವ ಜಿಲ್ಲೆ, ಕ್ರಿ.ಶ. ೧೨೪೬) ಶಾಸನ ನೂರು ಮಹಾಜನರು ಸೌಗತ, ಸಾಂಖ್ಯ, ''ಅಖಿಳ ಚಾರ್ವಾಕ ಉಕ್ತಿಗರ್ಭರ್'' ಎಂದು ಹೊಗಳಿದೆ (ಕೆ.ಐ. I ನಂ. ೩೩).

ಇದರ ಪರಿಣಾಮ ಎರಡು ವಿಧವಾಗಿರಬಹುದು : ಒಂದು, ಲೋಕಾಯತದಂಥ ವೈರಿ ತತ್ವಜ್ಞರನ್ನು ವಿರೋಧಿಸಲು ಬ್ರಾಹ್ಮಣ ಪಂಡಿತರು ಸಜ್ಜಾಗುತ್ತಿದ್ದರು; ಇನ್ನೊಂದು, ಉದಾರವಾದಿ ಮನಸ್ಸಿನ ಕೆಲವು ಬ್ರಾಹ್ಮಣರಾದರೂ ಅವೈದಿಕ ಪಂಥಗಳತ್ತ, ಲೋಕಾಯತದತ್ತ ಆಕರ್ಷಿತರಾಗುತ್ತಿದ್ದರು. ಪಂಪನ ತಂದೆ ಬ್ರಾಹ್ಮಣತ್ವವನ್ನು ತ್ಯಜಿಸಿ ಯಾವ ಕಾರಣಕ್ಕೆ ಜೈನನಾದನೋ ತಿಳಿಯದು. ಇಂಥದೇ ಇನ್ನೊಂದು ಬಹುದೊಡ್ಡ ನಿದರ್ಶನ ಬಸವಣ್ಣನದು. ಈತ ಅವೈದಿಕ ವೀರಶೈವಕ್ಕೆ ಮಾರುಹೋದ. ತಾಂತ್ರಿಕ ಪಂಥದ ಬ್ರಾಹ್ಮಣನೊಬ್ಬನ ಉಲ್ಲೇಖ ಒಂದು ಶಾಸನದಲ್ಲಿ ಬರುತ್ತದೆ. (ಧಾರವಾಡ ಜಿಲ್ಲೆಯ ಕುರಹಟ್ಟಿ ಶಾಸನ, ಕ್ರಿ.ಶ. ೯೮೦; ಎಸ್.ಐ.ಐ. XI, ಪುಟ ೩೧. ಚಾವುಂಡಭಟ್ಟನ ತಮ್ಮ ಎರೆಯಮ್ಮ ದೀಕ್ಷಿತ ''ಶಾಕ್ತ''ನಾಗಿದ್ದ.)

ಕನ್ನಡದ ಮೊಟ್ಟಮೊದಲ ಲಭ್ಯ ಗ್ರಂಥ ''ಕವಿರಾಜಮಾರ್ಗ'', ಸಾಂಖ್ಯ, ಬೌದ್ಧ, ವೈಶೇಷಿಕ, ಲೋಕಾಯತದಂಥ ''ಸಮಯ''ಗಳನ್ನು ವಿಪರೀತ ಬುದ್ಧಿಯಿಂದ ಟೀಕಿಸಬಾರದೆಂದು ನಿರೂಪಿಸಿರುವುದು ತುಂಬ ಗಮನಾರ್ಹ ಅಂಶ (೧-೧೦೫). ದಂಡಿ, ಭಾಮಹರಲ್ಲಿ ಇಲ್ಲದ ಈ ವಿಚಾರವನ್ನು ಸ್ವತಃ ಕವಿರಾಜಮಾರ್ಗಕಾರ ಹೇಳಿದ್ದಾನೆ. ಇನ್ನೂ ವಿಶೇಷವೆಂದರೆ ಇವೆಲ್ಲವೂ ಮೂಲದಲ್ಲಿ ನಾಸ್ತಿಕ ಪಂಥಗಳು.

ಪಂಪನ ''ಆದಿಪುರಾಣ''ದಲ್ಲಿ ಒಂದು ಸ್ವಾರಸ್ಯಕರವಾದ ಪ್ರಸಂಗವಿದೆ. ಮಹಾಬಳನೆಂಬ ಅರಸನ ನಾಲ್ವರು ಮಂತ್ರಿಗಳು ನಾಲ್ಕು ''ಸಮಯ''ಗಳಿಗೆ ಸೇರಿದವರು. ಅವರಲ್ಲಿ ಮಹಾಮತಿ ಎಂಬುವವ ಲೋಕಾಯತಿಕ. ಸಂಭಿನ್ನಮತಿ ವಿಜ್ಞಾನಾದ್ವೈತಿಯಾದರೆ, ಶತಮತಿ ನೈರಾತ್ಮ್ಯವಾದಿಯಾಗಿದ್ದ. ಇವರನ್ನೆಲ್ಲ ಜೈನನಾದ ಸ್ವಯಂಬುದ್ಧನೆಂಬ ಮಂತ್ರಿ ವಾದದಲ್ಲಿ ಸೋಲಿಸುತ್ತಾನೆ. ಪಂಪ ಜೈನನಾದ್ದರಿಂದ ಜೈನ ಮಂತ್ರಿ ಗೆಲ್ಲುವುದು ಸಹಜವೇ. ಪಂಪನಿಗೆ ಆಕರವಾದ ''ಮಹಾಪುರಾಣ''ದಲ್ಲಿ ಈ ಪ್ರಸಂಗ ವಿವರವಾಗಿ ಬಂದಿದೆ. ಮಂತ್ರಿಗಳು ಲೋಕಾಯತಿಕರೂ ಆಗಿರುತ್ತಿದ್ದರು, ಮಹಾಭಾರತದಲ್ಲಿರುವಂತೆ (ವನಪರ್ವ) ರಾಜರಿಗೆ ಉಪದೇಶಿಸುವ ಜ್ಞಾನಿಗಳೂ ಆಗಿರುತ್ತಿದ್ದರು.

ಪಂಪನಲ್ಲಿ ಮಹಾಮತಿ ವಾದಿಸುವ ತತ್ವಗಳು ಹೀಗಿವೆ :

''ದೇಹದಲ್ಲಿ ಜೀವವಿದ್ದು, ಪಾಪ ಪುಣ್ಯಗಳನ್ನು ಸಂಚಯಿಸುತ್ತ ಬಳಿಕ ಅತ್ತ ಬೇರೆ ಒಂದು ದೇಹದಲ್ಲಿ ಸೇರಿ ಧರ್ಮ ಕರ್ಮ ಫಲಗಳನ್ನು ಸ್ವೀಕರಿಸುತ್ತದೆನ್ನುವುದು; ಸತ್ತವರು ಮತ್ತೆ ಹುಟ್ಟುತ್ತಾರೆನ್ನುವುದು ಎಲ್ಲವೂ ಸುಳ್ಳು ಕಾಣಾ. ಇದು ಡಂಬ. ದೊರೆಯೇ ಇದನ್ನು ನೀನು ಹೇಗೆ ನಂಬುವಿ ?

''ತಲೆಗೂದಲು ತೆಗೆದು ಉಟ್ಟುದನ್ನು ಕಳಚಿ, ಸುರಲೋಕದ ಸುಖಗಳನ್ನು ಉಣ್ಣುತ್ತೇವೆಂಬ ಬತ್ತಲೆಗರ ಮಾತು ಕೇಳದಿರು. ಬದುಕಿರುವವರೆಗೆ ಇಂದ್ರಿಯಗಳ ಆಶೆಯನ್ನು ಪೂರೈಸಿ, ವಸಂತಮಾಸದಲ್ಲಿ ಹೂಮೊಗ್ಗನ್ನು, ಚಿಗುರನ್ನು ಕಡಿದ ಕೋಗಿಲೆಯಂತೆ ಧಾರಾಳವಾಗಿ ಸಂತೋಷಪಡು. ಇಲ್ಲಿ ಮರುಜನ್ಮವನ್ನು ಯಾರು ಕಂಡಿದ್ದಾರೆ ?

''ಅದಲ್ಲದೆ ತಂತಿ, ಸೋರೆ ಬುರುಡೆ, ದಂಡ ಬೆರಳುಗಳ ಪ್ರಯತ್ನದಿಂದ ಕೇಳಲು ಸೊಗಸಾಗುವ ಧ್ವನಿ ಹುಟ್ಟುವಂತೆ; ಹಿಟ್ಟು, ನೀರು, ಬೆಲ್ಲ ಮುಂತಾದ ವಸ್ತು ಸಂಯೋಗದಿಂದ ಸುರೆ ಹುಟ್ಟಿ ಮದ ವಿಕಾರವಾಗುವಂತೆ ಪೃಥ್ವಿ, ಅಪ್, ತೇಜ, ವಾಯುಗಳಿಂದ ಕಾರ್ಯರೂಪದ ಪಿಂಡ ಗರ್ಭದಿಂದ ಹುಟ್ಟಿ ಮರಣದವರೆಗೆ ಅದರದೇ ಆದ ಚೈತನ್ಯ ಹುಟ್ಟುತ್ತದೆ. ಆದರಿಂದ ಪರಲೋಕವಿಲ್ಲ. ಪರಲೋಕವಿಲ್ಲವೆಂದ ಮೇಲೆ ಆ ಲೋಕದ ಸುಖದ ಆಶೆಯಿಂದ ಈ ಲೋಕದ ಸುಖದಿಂದ ದೂರಾಗಿ ಶರೀರ, ಹಣ ವ್ಯರ್ಥ ಮಾಡುವವನು ಕಯ್ಯಲ್ಲಿರುವುದನ್ನು ಬಿಟ್ಟು ಕಾಲಲ್ಲಿರುವುದಕ್ಕೆ ಆಶೆ ಮಾಡುವವನನ್ನು ಹೋಲುತ್ತಾನೆ.''

ಜೈನನಾದ ಸ್ವಯಂಬುದ್ಧನ ಮತವನ್ನು ವಿಡಂಬನಾತ್ಮಕವಾಗಿಯೇ, ಆದರೆ ಖಚಿತವಾಗಿ ವಿರೋಧಿಸುತ್ತಿರುವ ಮಹಾಮತಿಯ ಮಾತನ್ನು ಪಂಪ ಆಂತರ್ಯದಲ್ಲಿ ಒಪ್ಪಿರುವಂತೆ ಭಾಸವಾಗುತ್ತದೆ. ಬಸಂತ, ಕಳಿಕೆಗರ್ಚಿದ ಕೋಗಿಲೆಗಳ ಹೋಲಿಕೆ ಪಂಪನ ಆಪ್ತವಾದ ಭಾವಗಳು. ''ಕಯ್ಯದಂ ಬಿಟ್ಟು ಕಾಲದರ್ಕೆರಗುವ'' ಎಂಬ ಅಪಹಾಸ್ಯ ಸ್ಥಿತಿಯನ್ನು ಸೂಚಿಸುವ ಹೋಲಿಕೆ ಕೂಡ, ವಿರೋಧಿ ನೆಲೆಯಲ್ಲಿ ನಿಂತು ಆಲೋಚಿಸಿದಾಗ ಹೊಳೆಯುವ ಕಲ್ಪನೆ.

ಕನ್ನಡ ಸಾಹಿತ್ಯ, ಶಾಸ್ತ್ರ, ಶಾಸನೀಯ ದಾಖಲೆಗಳಲ್ಲಿ ನಾಸ್ತಿಕ ಪರಂಪರೆಯ ಭಾಗ ಗಣನೀಯ ಪ್ರಮಾಣದಲ್ಲಿದೆ. ಜೀವ, ಮೋಕ್ಷಗಳ ಕಲ್ಪನೆ ಹೇಳಿದರೂ ಕೂಡ ಜೈನ ನಾಸ್ತಿಕವೇ. ಇಂಥ ನಾಸ್ತಿಕ ಸಮಯದ ಅಪಾರವಾದ ವಾಙ್ಮಯ ಕನ್ನಡ ಸಾಹಿತ್ಯ, ಶಾಸ್ತ್ರ ಪರಂಪರೆಯನ್ನು ಶ್ರೀಮಂತಗೊಳಿಸಿದೆ. ಗುರು, ಲಿಂಗ, ಜಂಗಮದಂಥ ಕಣ್ಮುಂದಿರುವ ದೈವಗಳನ್ನು ಮಾತ್ರ ಹೇಳುವ ವೀರಶೈವ ಆಧ್ಯಾತ್ಮವಾದಿಯಾದರೂ ಬೌದ್ಧರ ಶೂನ್ಯವಾದ, ಜೈನರ ಕರ್ಮವಾದ ಮತ್ತು ಪ್ರಾಚೀನ ತಾಂತ್ರಿಕ, ಶಾಕ್ತ ಪಂಥಗಳಿಂದ ಸಾಕಷ್ಟು ಪ್ರಭಾವಿತವಾಗಿದೆ.

ಈ ಎಲ್ಲ ಹಿನ್ನೆಲೆಯಲ್ಲಿ ನಮ್ಮ ಪರಂಪರೆಯನ್ನು ಬರೀ ಆಧ್ಯಾತ್ಮವಾದಿ ಎಂದು ಹೇಳುವುದು ತಪ್ಪಾಗುತ್ತದೆ. ಚರಿತ್ರೆಯುದ್ದಕ್ಕೂ ಪ್ರಭುತ್ವದ ಶೋಷಕತ್ವಕ್ಕೆ ತಾತ್ವಿಕವಾಗಿ ಬೆಂಬಲವಾಗಿ ನಿಂತು, ವರ್ಣಾಶ್ರಮ ಧರ್ಮದ ಮೂಲಕ ಜಾತಿ ಶೋಷಣೆಯನ್ನು ಸಮರ್ಥನೆ ಮಾಡುತ್ತ ಬಂದ ವೈದಿಕ ಬ್ರಾಹ್ಮಣ ಪರಂಪರೆಗೆ ರಾಷ್ಟ್ರೀಯ ವಿಮೋಚನಾ ಚಳುವಳಿಯ ಸಂದರ್ಭದಲ್ಲಿ ಸಿಕ್ಕ ವ್ಯಾಪಕವಾದ ಪ್ರಚಾರ, ಇಲ್ಲಿಯ ಅವೈದಿಕ ಪರಂಪರೆಗೆ ಸಿಕ್ಕಲಿಲ್ಲ. ಆದರೂ ಹಲವಾರು ವಿದ್ವಾಂಸರು ವೈದಿಕ ವಾಙ್ಮಯದ ಜನವಿರೋಧಿ ಗುಣವನ್ನು (ಎಸ್. ಜಿ. ಸರ್‌ದೇಸಾಯಿ, ರಾಹುಲ ಸಾಂಕೃತ್ಯಾಯನ ಮುಂತಾದವರು), ಅವೈದಿಕ ಪರಂಪರೆಯ ಪ್ರಾಮುಖ್ಯತೆಯನ್ನು (ದೇವಿಪ್ರಸಾದ ಚಟ್ಟೋಪಾಧ್ಯಾಯ, ಡಿ. ಡಿ. ಕೋಸಾಂಬಿ ಮುಂತಾದವರು) ಎತ್ತಿಹಿಡಿಯುತ್ತಲೇ ಬಂದಿದ್ದಾರೆ, ಅವುಗಳ ಆ ಕಾಲದ ಜನಪರ ಕಾಳಜಿಯ ಸ್ವರೂಪವನ್ನು ಸ್ಪಷ್ಟಪಡಿಸುತ್ತಲೇ ಬಂದಿದ್ದಾರೆ.

ಎಸ್. ಎಸ್. ಹಿರೇಮಠ
ಕನ್ನಡ ಪ್ರಾಧ್ಯಾಪಕ, ಐ.ಡಿ.ಬಿ. ಪ್ರಥಮ ದರ್ಜೆ ಕಾಲೇಜು, ಹರಪನಹಳ್ಳಿ - ೫೮೩ ೧೩೧, ದಾವಣಗೆರೆ ಜಿಲ್ಲೆ

# ಸರಳ ನೇರ ನುಡಿಯ ಪಾಪು

**ಬರವಣಿಗೆಯ ಶೈಲಿ ಎಷ್ಟು ಸರಳವೋ ಅದು ಅಷ್ಟೇ ಮೊನಚು. ಯಾರಿಗೆ ಯಾವ ಶಬ್ದಗಳಿಂದ ತಿವಿದರೆ ಎಚ್ಚರಗೊಳ್ಳುತ್ತಾರೆ ಎಂಬುದನ್ನು ಸರಿಯಾಗಿ ಗಮನಿಸಿ ಅವರಿಗೆ ಅಂಥವೇ ಪದಗಳಿಂದ ತಿವಿದು ಎಬ್ಬಿಸಬಲ್ಲ ಛಾತಿ ಡಾ|| ಪಾಪು ಅವರಿಗೆ ಇದೆ. ಬರೀ ಇವರ ಬರವಣಿಗೆಯನ್ನು ಓದಿದವರಿಗೆ ಈ ಮನುಷ್ಯ ತುಂಬಾ ನಿಷ್ಠುರಿ, ಯಾರ ದಾಕ್ಷಿಣ್ಯಪರನಲ್ಲ ಅಂತ ಅನ್ನಿಸುತ್ತದೆ. ಇದು ಸತ್ಯ ಕೂಡ. ಆದರೆ ಅದೇ ವೇಳೆಗೆ ಪ್ರೀತಿಯ ಕೊಡವನ್ನು ತುಂಬಿಕೊಂಡ ವ್ಯಕ್ತಿಯೂ ಹೌದು. ಎಷ್ಟು ಕಠಿಣ ಹೃದಯಿಯೋ ಅಷ್ಟೇ ಸರಳರೂ ಕೂಡ.**

■

**ವಿಶ್ವಾರಾಧ್ಯ ಸತ್ಯಂಪೇಟೆ**



ಕನ್ನಡದ ಹಿರಿಯ ಚೇತನ ಡಾ|| ಪಾಟೀಲ ಪುಟ್ಟಪ್ಪನವರೊಂದಿಗೆ ನನ್ನದು ಅವಿನಾಭಾವ ಸಂಬಂಧ. ನಾನು ಅವರನ್ನು ಮುಖತಃ ಭೇಟಿಯಾಗುವುದಕ್ಕಿಂತ ಪೂರ್ವದಲ್ಲಿ 'ಪ್ರಪಂಚ' ಪತ್ರಿಕೆ ಓದುತ್ತಾ ಅವರ ವ್ಯಕ್ತಿತ್ವದೆಡೆಗೆ ಆಕರ್ಷಿತನಾಗಿಬಿಟ್ಟಿದ್ದೆ. ಅಲ್ಲದೆ ಅವರು ನನ್ನ ತಂದೆಯ ಬಗೆಗೆ ಹೊಂದಿದ್ದ ಪ್ರೀತಿಯ ಆಸಕ್ತಿ ಕೂಡ ಆ ಆಕರ್ಷಣೆಯನ್ನು ಮತ್ತಷ್ಟು ರಂಗುಗೊಳಿಸಿಬಿಟ್ಟಿತ್ತು. ವಾರ ವಾರವೂ ನಮ್ಮ ಮನೆಗೆ ಬರುತ್ತಿದ್ದ 'ಪ್ರಪಂಚ' ಪತ್ರಿಕೆಯಲ್ಲಿಯ ಕಾಲಂಗಳಾದ – ಅನುಭವ ಇರುವಲ್ಲಿ ಅಮೃತ ತತ್ವ ಇದೆ, ಈ ಸಂಗತಿ ತಿಳಿಯಿರಿ, ಬದುಕುವುದಕ್ಕೆ ಬೇಕು ಬದುಕುವ ಈ ಮಾತು, ಸಂಪಾದಕೀಯ ಮುಂತಾದವುಗಳೇ ನನ್ನಲ್ಲಿ ಓದುವ ಆಸಕ್ತಿಯನ್ನು ಹುಟ್ಟಿಸಿದ್ದವು. ಯಾವುದೇ ವಿಷಯ ವಾದರೂ ಅದನ್ನು ಅತ್ಯಂತ ಸರಳ ಕನ್ನಡದಲ್ಲಿ ಎಲ್ಲರಿಗೂ ತಿಳಿಯುವಂತೆ ಬರೆಯಬಲ್ಲ ಅವರ ಶೈಲಿ ಮತ್ತೊಂದು ಕಡೆ ನನ್ನನ್ನು ಆಕರ್ಷಿಸಿತ್ತು. ಡಾ|| ಪಾಪು ಅವರ ಬರಹ ಎಷ್ಟು ಸರಳವೋ ಅಷ್ಟೇ ಅವರ ಬದುಕು ಸಹ ಇದೆ ಎಂಬುದು ನನ್ನ ತಂದೆಯಿಂದ ಕೇಳಿದ ಮೇಲಂತೂ ನನಗೆ ಅವರ ಬಗ್ಗೆ ಎಲ್ಲಿಲ್ಲದ ಕುತೂಹಲ.

ಗೋಕಾಕ ಚಳುವಳಿಯ ಸಂದರ್ಭದಲ್ಲಿ ಶಹಾಪುರದಲ್ಲಿ ನನ್ನ ತಂದೆಯವರು ಕನ್ನಡದ ಸಭೆಯೊಂದನ್ನು ಆಯೋಜಿಸಿದ್ದರು. ಈ ಸಭೆಗೆ ಡಾ|| ಪಾಟೀಲ ಪುಟ್ಟಪ್ಪ, ಡಾ|| ರಾಜ್‌ಕುಮಾರ ಇತ್ಯಾದಿ ಜನಗಳು ಬರುತ್ತಾರೆ ಎಂದು ಖಾತ್ರಿಯಾದ ಮೇಲಂತೂ ನನಗೆ ಎಲ್ಲಿಲ್ಲದ ಹಿಗ್ಗು, ಸಂಭ್ರಮ. ಆಗ ನನ್ನ ಗೆಳೆಯರೆಲ್ಲ ಡಾ|| ರಾಜ್‌ಗಾಗಿ ಕುತೂಹಲಿಗರಾಗಿ ಕಾದು ಕುಳಿತಿದ್ದರೆ ನಾನು ಮಾತ್ರ ಡಾ|| ಪಾಟೀಲ ಪುಟ್ಟಪ್ಪ ಅವರನ್ನು ತೀರಾ ಹತ್ತಿರದಿಂದ ನೋಡುವ ಸುಯೋಗಕ್ಕಾಗಿ ಕಾದು ಕುಳಿತಿದ್ದೆ. ಆದರೆ ಜನಸಾಗರವೇ ತುಂಬಿ ತುಳುಕುತ್ತಿದ್ದ ಆ ಸಭೆ ಆರಂಭವಾಗುವಷ್ಟರಲ್ಲಿ ವೇದಿಕೆ ಮತ್ತಷ್ಟು ತುಂಬಿ ತುಳುಕ ತೊಡಗಿತು. ಆಗ ನಾನೇ ರೋಸಿ ಆ ವೇದಿಕೆ ಇಳಿದು ಜನಸಾಗರದ ನೂಕು ನುಗ್ಗಾಟದ ನಡುವೆಯೇ ನಿಂತು ಡಾ|| ಪಾಪು ಅವರನ್ನು ಕಣ್ತುಂಬ ನೋಡಿದೆ. ಅವರ ಮಾತುಗಳನ್ನು ಕೇಳುವ ಸುಯೋಗ ಮಾತ್ರ ನನಗೆ ಆಗ ದಕ್ಕಲೇ ಇಲ್ಲ!

ಇದಾಗಿ ಮತ್ತೆ ಹತ್ತಿಪ್ಪತ್ತು ವರ್ಷಗಳು ಕಳೆದುಹೋದವು. ನನ್ನ ಹಂಬಲ ಕನಸಾಗಿಯೇ ಉಳಿದುಬಿಟ್ಟಿತು. ಈ ನಡುವೆ ನಾನು ಕೆಲವು ಸಲ ಅವರು ವಾಸವಾಗಿರುವ ಹುಬ್ಬಳ್ಳಿಗೂ ಹೋಗಿದ್ದೆ. ಆದರೆ ಅವರನ್ನು ಮುಖತಃ ಭೇಟಿಯಾಗಬೇಕೆಂದಾಗಲೂ ಅವರು ಸಿಕ್ಕಿರಲಿಲ್ಲ. ಅವರ 'ಪ್ರಪಂಚ'ಕ್ಕೆ ನನ್ನ ತಂದೆಯವರು ಹೇಗೆ ಬರೆಯುತ್ತಿದ್ದರೋ, ಹಾಗೇ ನಾನು ನಾಲ್ಕೆಂಟು ಸಲ ಸಣ್ಣ ಪುಟ್ಟ ಲೇಖನಗಳನ್ನು ಬರೆದು ಕಳಿಸಿದಾಗ ಅವನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿಬಿಟ್ಟಿದ್ದರು. ಇದರಿಂದ ನನಗೆ ಸಾಸಿವೆಯ ಮೇಲೆ ಸಾಗರ ಹರಿದಷ್ಟು ಖುಷಿಯಾಗಿಬಿಟ್ಟಿತು. ನಾನು ಏನೇ ಬರೆದರೂ ಅದನ್ನು ತಿದ್ದಿ ತೀಡಿ ಪ್ರಕಟಿಸುವ ಡಾ|| ಪಾಪು ಅವರ ಸೌಜನ್ಯ ಕಂಡು ನಾನು ಅವರೆಡೆಗೆ ಮತ್ತಷ್ಟು ಮೂಕ ವಿಸ್ಮಿತನಾಗಿದ್ದೆ. ಆದರೆ ಆಗ ನನ್ನ ತಂದೆಯವರು ಲಂಕೇಶ್ ಪತ್ರಿಕೆಗೆ ವಿಶೇಷ ವರದಿಗಾರರಾಗಿ ಕೆಲಸ ಮಾಡುತ್ತಿದ್ದರು. ಹಾಗೆ ನೋಡಿದರೆ ಡಾ|| ಪಾಪು ಮತ್ತು ಲಂಕೇಶ್ ಅವರ ನಡುವೆ ಭಿನ್ನಾಭಿಪ್ರಾಯ ಗಳಿದ್ದವು ಎಂದು ಕೇಳಿದ್ದೆ. ಆದರೂ ಅದ್ಯಾವುದನ್ನೂ ಅವರು ತಲೆಗೆ ಹಚ್ಚಿಕೊಳ್ಳದೆ ನಮ್ಮೊಂದಿಗೆ ನಡಕೊಂಡ ರೀತಿ ಮಾತ್ರ ಅನನ್ಯವಾಗಿತ್ತು. ಇದಕ್ಕೆ ವ್ಯತಿರಿಕ್ತವಾಗಿ ಪಿ. ಲಂಕೇಶ್‌ರು ಮಾತ್ರ ನನ್ನ ತಂದೆಯನ್ನು ಆಗಾಗ ತಮಾಷೆ ಮಾಡುತ್ತಿದ್ದರು.

ಅದೇನು ಕಾರಣವೊ, ಪಿ. ಲಂಕೇಶರಿಗೆ ಇದ್ದಕ್ಕಿದ್ದಂತೆ ತಾವೇ ಈ ರಾಜ್ಯದ ಮುಖ್ಯಮಂತ್ರಿಯಾಗಬೇಕೆಂಬ ಕನಸುಗಳು ಬೇರೆ ಬೀಳಲಾರಂಭಿಸಿದವು. ಆಗ ಅಕ್ಟೋಬರ್ ೨ರ ಗಾಂಧಿ ಜಯಂತಿಯಂದು ಬೆಂಗಳೂರಿನ ಕಬ್ಬನ್ ಪಾರ್ಕ್‌ನಲ್ಲಿ ಆತ್ಮಾವಲೋಕನ ಸಭೆಯೊಂದನ್ನು ಆಯೋಜಿಸಿದ್ದರು. ಆ ಸಭೆಯಲ್ಲಿ ನಾನೂ ನನ್ನ ತಂದೆಯವರೊಂದಿಗೆ ಭಾಗವಹಿಸಿದ್ದೆ. ಪ್ರಗತಿರಂಗ ರಾಜಕೀಯ ಪಕ್ಷವಾಗಬೇಕೆಂದು ಅಲ್ಲಿ ಭಾಗವಹಿಸಿದ್ದ ಯಾರೂ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರಲಿಲ್ಲ. ಆದರೂ ಏಕ್‌ದಂ ಲಂಕೇಶ್‌ರಿಗೆ ಅದೇನಾಯಿತೋ ಏನೋ ಬೆಂಗಳೂರಿನಿಂದ ನಾವಿನ್ನೂ ನಮ್ಮ ಊರನ್ನು ತಲುಪಿರಲಿಲ್ಲ, ಆಗಲೇ ನನ್ನ ತಂದೆಯವರನ್ನು ಹೈದ್ರಾಬಾದ್ ಕರ್ನಾಟಕ ವಿಭಾಗ ಮಟ್ಟದ ಪ್ರಗತಿರಂಗದ ಸಂಚಾಲಕನನ್ನಾಗಿ ನೇಮಕ ಮಾಡಿ ಫರ್ಮಾನು ಹೊರಡಿಸಿದ್ದರು! ಇದನ್ನು ನನ್ನ ತಂದೆಯವರು ತೀವ್ರವಾಗಿ ಆಕ್ಷೇಪಿಸಿ ಕಾಗದ ಬರೆದರು. ಪ್ರಗತಿರಂಗವನ್ನು ನಿಮ್ಮ ಭಾಗದಲ್ಲಿ ರಾಜಕೀಯ ಪಕ್ಷವನ್ನಾಗಿ ಮಾಡಿಕೊಳ್ಳಿ, ಇದಕ್ಕೆ ನನ್ನ ಅಭ್ಯಂತರವೇನಿಲ್ಲ ಎಂದು ಕಾಗದ ಬರೆದರು. ಹೀಗಾಗಿ ಹತ್ತು ಹನ್ನೆರಡು ವರ್ಷಕ್ಕೂ ಹೆಚ್ಚು ವರ್ಷಗಳ ಕಾಲ ಆ ಪತ್ರಿಕೆಯೊಂದಿಗೆ ಇದ್ದ ಸಂಬಂಧವನ್ನು ನನ್ನ ತಂದೆಯವರು

ಕಡಿದುಕೊಳ್ಳಬೇಕಾಗಿಬಂತು. ■ ಮಾತು ಬೇರೆ.

ಇದೇ ಸಂದರ್ಭದಲ್ಲಿ ನಾವೂ ಯಾಕೆ ಒಂದು ಪತ್ರಿಕೆ ತೆಗೆಯಬಾರದು, ಎಂದು 'ಅಗ್ನಿ ಅಂಕುರ' ಪತ್ರಿಕೆಯನ್ನು ಶಹಾಪುರ ದಿಂದಲೇ ಆರಂಭಿಸಿದೆವು. ಈ ಪತ್ರಿಕೆಗೆ ಬಂದ ಪ್ರತಿಕ್ರಿಯೆ ಮಾತ್ರ ನಮ್ಮೆಲ್ಲರನ್ನು ನಿಬ್ಬೆರಗಾಗಿಸಿತು. ಆದರೆ ಈ ಪತ್ರಿಕೆಯನ್ನು ಕಂಪೋಜ ಮಾಡಿಸಿ, ಪ್ರಿಂಟ್ ಮಾಡಿ ಮಾರುಕಟ್ಟೆಗೆ ಬಿಡುಗಡೆ ಮಾಡಬೇಕಾದರೆ ನಾವೆಲ್ಲ ಹೈರಾಣಾಗುತ್ತಿದ್ದೆವು. ಈ ಸಂದರ್ಭ ದಲ್ಲಿಯೇ ಡಾ|| ಪಾಟೀಲ ಪುಟ್ಟಪ್ಪನವರ ಪ್ರೆಸ್ ನೆನಪಾಗಿ ತಂದೆ ಯವರೊಂದಿಗೆ ಹುಬ್ಬಳ್ಳಿಗೆ ಹೋದೆ. ನನಗೋ ಒಂದು ಕಡೆ ಸಂಭ್ರಮವಾದರೆ, ಮತ್ತೊಂದು ಕಡೆ ಅದೆಂತಹದೋ ಅಳುಕು ನನ್ನ ಎದೆ ಢವ ಢವಗುಟ್ಟುವಂತೆ ಮಾಡಿತ್ತು. ಆದರೆ ಡಾ|| ಪಾಪು, ನಾನು ವಯಸ್ಸಿನಲ್ಲಿ ಅತ್ಯಂತ ಕಿರಿಯವನಾದರೂ, ಅಂದು ನನ್ನ ಮೇಲೆ ಹರಿಸಿದ ಪ್ರೀತಿಯ ವರ್ಷಾಧಾರೆಗೆ ಸೋತುಹೋದೆ.




ಪ್ರತಿ ಹದಿನೈದು ದಿನಗಳಿಗೊಮ್ಮೆ ತಪ್ಪದೆ ಅವರ ಮುದ್ರಣಾಲಯಕ್ಕೆ ಹೋದಾಗಲೂ ಮೊದಲು ಒಂದೆರಡು ಬಾರಿ ಅವರ ಚೇಂಬರ್‌ಗೆ ಹೋಗುವ ಧೈರ್ಯ ಮಾಡಲಿಲ್ಲ. ಆದರೆ ಅವರು ಮಾತ್ರ ಪ್ರಿಂಟಾಗಿ ಅವರ ಟೇಬಲ್ ಮೇಲಿನ ನಮ್ಮ 'ಅಗ್ನಿ ಅಂಕುರ' ನೋಡುತ್ತಲೇ ''ಎಲ್ಲಿ ಅವನು, ವಿಶ್ವಾರಾಧ್ಯ ?'' ಎಂದು ಅಶೋಕ ಮತ್ತು ರಾಜು ಪಾಟೀಲರನ್ನು ಕೇಳುತ್ತಿದ್ದರಂತೆ. ಅಲ್ಲದೆ ಅವನು ನನ್ನನ್ನು ಭೇಟಿಯಾಗದೆ ಅವನ ಪತ್ರಿಕೆಯನ್ನು ಪ್ರಿಂಟ್ ಮಾಡಿ ಕಳಿಸಬೇಡಿ ಎಂಬ ಪ್ರೀತಿಯ ತಾಕೀತನ್ನು ಬೇರೆ ಮಾಡಿಬಿಟ್ಟಿದ್ದರು. ಹಾಗಾಗಿ ತಿಂಗಳಿಗೆ ಎರಡು ಬಾರಿ ಅವರನ್ನು ಕಾಣುವುದು, ಅವರೊಂದಿಗೆ ಯಾವುದ್ಯಾವುದೋ ವಿಷಯಗಳ ಬಗ್ಗೆ ಚರ್ಚಿಸುವುದು ಅನಿವಾರ್ಯವಾಗಿಹೋಯಿತು. ಹೀಗೆ ಪ್ರತಿ ಸಲ ಭೇಟಿಯಾದಾಗಲೂ ಅವರು ನನ್ನನ್ನು ಅಕ್ಷರಶಃ ಎಳೆದುಕೊಂಡೇ ತಮ್ಮ ಮನೆಗೆ ಕರೆದೊಯ್ಯುತ್ತಿದ್ದರು. ತಮ್ಮ ಹಾಗೂ ಅವರ ಮಡದಿ ಶ್ರೀಮತಿ ಇಂದೂಮತಿ ಅವರೊಂದಿಗೆ, ಕೆಲವೊಮ್ಮೆ ಇಡೀ ಪರಿವಾರದೊಂದಿಗೆ ನನ್ನನ್ನು ಕೂಡಿಸಿ ಊಟ ಮಾಡಿಸುತ್ತಿದ್ದರು. ನನಗಾದರೋ ಒಳಗೊಳಗೇ ಅಳುಕು. ಕರ್ನಾಟಕದ ದೈತ್ಯ ಪ್ರತಿಭಾವಂತ ವ್ಯಕ್ತಿಯ ಎದುರಾ ಎದುರೆ ಹೀಗೆ ಮೈಚಳಿ ಬಿಟ್ಟು ಊಟ ಮಾಡುವುದು, ಮಾತಾಡುವುದು ಸಾಧ್ಯವಾಗುತ್ತಿರಲಿಲ್ಲ. ಆದರೆ ಡಾ|| ಪಾಪು ಅವರು ಮಾತ್ರ ನನ್ನನ್ನು ಹುಡುಗನೆಂದು ಯಾವ ಬಗೆಯ ನಿರ್ಲಕ್ಷ್ಯವನ್ನೂ ತೋರದೆ ನಡೆದುಕೊಳ್ಳುತ್ತಿದ್ದ ರೀತಿ ಅವರ ಬಗ್ಗೆ ಮತ್ತಷ್ಟು ಅಭಿಮಾನಗಳನ್ನು ಮೂಡಿಸಿತು.

ಅವರ ಚೇಂಬರ್‌ನಲ್ಲಿ ಯಾರಾದರೂ ಸಾಹಿತಿಗಳು, ಬರಹಗಾರರು ಅಚಾನಕ್ ನಾನಿರುವ ವೇಳೆಗೆ ಒಳಬಂದರೆ ಕೂಡಲೆ ನನ್ನತ್ತ ಕೈ ಮಾಡುತ್ತ ರೀ... ಇವರು ನನ್ನ ಸ್ನೇಹಿತರು, ಶಹಾಪುರದವರು. ಚೆನ್ನಾಗಿ ಬರಿತಾರೆ... ಎಂದು ಮುಂತಾಗಿ ಹೇಳಿ ನನ್ನನ್ನು ಮತ್ತಷ್ಟು ನೀರು ನೀರಾಗುವಂತೆ ಮಾಡುತ್ತಿದ್ದರು. ಬಹಳಷ್ಟು ಸಲ ನಾನೇ ಆಕ್ಷೇಪಿಸಿ ದಯವಿಟ್ಟು ಇನ್ನೊಮ್ಮೆ ಯಾರೊಂದಿಗಾದರೂ ಪರಿಚಯಿಸುವಾಗ ತಮ್ಮ ಸ್ನೇಹಿತನೆಂದು ಮಾತ್ರ ನನ್ನನ್ನು ಪರಿಚಯಿಸಬೇಡಿ, ಬೇಕಾದರೆ ನಿಮ್ಮ ಹುಡುಗ ಎಂದು ಪರಿಚಯಿಸಿ ಅಷ್ಟೇ ಸಾಕು, ಎಂದು ಎಷ್ಟೋ ಬಾರಿ ಹೇಳಿದೆ. ಆದರೆ ಅವರು ಮಾತ್ರ ತಮ್ಮ ರೂಢಿಯನ್ನು ಬಿಟ್ಟುಕೊಡಲೇ ಇಲ್ಲ.

ಹುಬ್ಬಳ್ಳಿಯ ಟ್ರಾಫಿಕ್ ಐಲ್ಯಾಂಡ್ (ಕಿತ್ತೂರ ಚೆನ್ನಮ್ಮ ವರ್ತುಲ) ದಿಂದ ವಿಶ್ವೇಶ್ವರ ನಗರದಲ್ಲಿರುವ ಅವರ ಮನೆಗೆ ಸುಮಾರು ೩ ಕಿ.ಮೀ. ಅಂತರವಿದೆ. ಆದರೆ ಅದನ್ನು ಲೆಕ್ಕಕ್ಕಿಡದೆ ಪಾಪು ಅವರು ಮಾತಾಡುತ್ತಾ ಹಾಗೇ ನಡೆದುಬಿಡುತ್ತಿದ್ದರು. ಆಗ ರಾಜ್ಯದ ರಾಜಕೀಯ, ಸಾಮಾಜಿಕ, ಆರ್ಥಿಕ ಸ್ಥಿತಿ-ಗತಿ ಎಲ್ಲವೂ ಚರ್ಚೆಗೆ ಬರುತ್ತಿತ್ತು. ಕನ್ನಡ ನಾಡಿನ ಇಂಚಿಂಚೂ ನೆಲವನ್ನು ಬಲ್ಲ ಡಾ|| ಪಾಪು ಅವರು ಅದು ಕೆಡುತ್ತಿದ್ದರೆ ವ್ಯಗ್ರರಾಗುತ್ತಿದ್ದರು. ಸಾಹಿತ್ಯದಲ್ಲಿ 'ಸಾಇತಿ'ಗಳು ಮಾಡುತ್ತಿದ್ದ ಕ್ಷುಲ್ಲಕ ಕೆಲಸಗಳನ್ನು ಕಂಡು ಅವರ ಪಿತ್ತ ನೆತ್ತಿಗೇರುತ್ತಿತ್ತು. ಇವರುಗಳು ಬರೆಯುವುದೇ ಒಂದಾದರೆ, ಬದುಕುವುದೇ ಇನ್ನೊಂದು; ಇಂಥ ಭಂಡ ಬಾಳನ್ನು ಅದೇಕೆ ಇವರು ಬಯಸುತ್ತಾರೊ ? ಎಂದು ವ್ಯಾಕುಲಗೊಳ್ಳುತ್ತಿದ್ದರು. ಕನ್ನಡ ನಾಡಿನ ಸಂಪೂರ್ಣ ಪರಿಚಯವೇ ಇರದ ರಾಜಕೀಯ ನಾಯಕರಿಂದ ಇಡೀ ಕರ್ನಾಟಕದ ಐಕ್ಯತೆಯನ್ನು ಕಾಪಾಡಿಕೊಂಡುಬರುವುದು ದುಸ್ತರದ ಮಾತೇ ಸೈ ಎಂಬುದು ಅವರ ಅಭಿಮತ. ಹೀಗೆ ಇಡೀ ನಾಡು ನುಡಿ ಭಾಷೆಗೆ ಸಂಬಂಧಿ ಸಿದಂತೆ ಅವರದು ಅಚ್ಚೆರು ನುಡಿ.

ಆದರೆ ಒಂದೇ ಒಂದು ದಿನವೂ ಅವರು ತಮ್ಮ ಕುಟುಂಬದ ಬಗ್ಗೆ ಮಾತಾಡಿಲ್ಲ. ಇದಿಷ್ಟೇ ಅಲ್ಲ. ಮನೆಗೆ ಹೋದಾಗಲೂ ಅವರು ಅಲ್ಲಿಯ ಜಂಜಡಗಳಿಂದ ಅಷ್ಟೇ ನಿರ್ಲಿಪ್ತರು. ಡೈನಿಂಗ್ ಹಾಲ್‌ಗೆ ಹೋಗುತ್ತಲೇ ಅವರ ಮೊಮ್ಮಗ ಅಥವಾ ಮೊಮ್ಮಗಳು ಯಾರಾದರೂ ಇದಿರಾದರೆ, ಯಾರದು...? ಎಂದು ಕೇಳುತ್ತ ಅವರ ಮೈದಡವಿ ನಿಲ್ಲುತ್ತಾರೆ, ಆ ಒಂದು ಕ್ಷಣ ಮಾತ್ರ! ಅಲ್ರೀ... ಎಂದು ಚಾಳೀಸು ಎತ್ತಿ, ಮುಖ ಮುಂದಕ್ಕೆ ಚಾಚಿ ತಮ್ಮ ಪತ್ನಿ ಇಂದೂಮತಿ ಯವರಿದ್ದೆಡೆಗೆ ನೋಟ ಹರಿಸುತ್ತಾರೆ. ಅವರು ಪಾಪು ಅವರ ಎಲ್ಲ ಬೇಕುಗಳನ್ನು ಅರಿತವರಂತೆ, ಲಗುಬಗೆಯಿಂದ ಅಡಿಗೆ ಮನೆಗೆ ದೌಡಾಯಿಸಿ ಊಟದ ತಟ್ಟೆ ಇಡುತ್ತಾರೆ.

ಊಟದ ಟೇಬಲ್ ಮೇಲಾದರೋ ಇವರು ಪೇರಿಸಿ ಟ್ಟಿರುವ ಪೇಪರ್‌ಗಳದ್ದೇ ಒಂದು ದರ್ಬಾರು. 'ಪ್ರಪಂಚ' ಪತ್ರಿಕೆಗೆ ಬಂದ ಲೇಖನಗಳ, ಪತ್ರಗಳ ಮೂಟೆಯೇ ಮತ್ತೊಂದು ಕಡೆ. ಮತ್ತೆ ತಾವು ಅಲ್ಪ ಸ್ವಲ್ಪ ಬರೆದಿರುವ ಕಾಗದಗಳ ತುಂಡು ತುಂಡು ಪ್ರತಿಗಳು. ಈ ಪ್ರತಿಗಳಾದರೋ ಸಂಪೂರ್ಣ ಬಿಳಿ ಹಾಳೆಗಳೇನಲ್ಲ. ಯಾರೋ ಬರೆದ ಪತ್ರದ ಇನ್ನೊಂದು ಖಾಲಿ ಮಗ್ಗಲು. ಅಥವಾ ಮತ್ಯಾರದೋ ಲಗ್ನ ಪತ್ರಿಕೆಯ ಪ್ರತಿ ಮುಂತಾದವುಗಳ ಮೇಲೆ ಅವರ ಬಹುತೇಕ ಬರಹಗಳು !

ಬರವಣಿಗೆಯ ಶೈಲಿ ಎಷ್ಟು ಸರಳವೋ ಅದು ಅಷ್ಟೇ ಮೊನಚು. ಯಾರಿಗೆ ಯಾವ ಶಬ್ದಗಳಿಂದ ತಿವಿದರೆ ಎಚ್ಚರಗೊಳ್ಳುತ್ತಾರೆ ಎಂಬುದನ್ನು ಸರಿಯಾಗಿ ಗಮನಿಸಿ ಅವರಿಗೆ ಅಂಥವೇ ಪದಗಳಿಂದ ತಿವಿದು ಎಬ್ಬಿಸಬಲ್ಲ ಛಾತಿ ಡಾ|| ಪಾಪು ಅವರಿಗೆ ಇದೆ. ಬರೀ ಇವರ ಬರವಣಿಗೆಯನ್ನು ಓದಿದವರಿಗೆ ಈ ಮನುಷ್ಯ ತುಂಬಾ ನಿಷ್ಠುರಿ, ಯಾರ ದಾಕ್ಷಿಣ್ಯಪರನಲ್ಲ ಅಂತ ಅನ್ನಿಸುತ್ತದೆ. ಇದು ಸತ್ಯ ಕೂಡ. ಆದರೆ ಅದೇ ವೇಳೆಗೆ ಪ್ರೀತಿಯ ಕೊಡವನ್ನು ತುಂಬಿಕೊಂಡ ವ್ಯಕ್ತಿಯೂ ಹೌದು. ಎಷ್ಟು ಕಠಿಣ ಹೃದಯಿಯೋ ಅಷ್ಟೇ ಸರಳರೂ ಕೂಡ.

ಈಗ್ಗೆ ಐದಾರು ವರ್ಷಗಳಷ್ಟು ಹಳೆಯ ಮಾತು. ನನಗೂ ಹೊಸದಾಗಿ ಲಗ್ನವಾಗಿತ್ತು. ನನ್ನ ಹೆಂಡತಿ ತೌರಿಗೆ ಹೋಗಿದ್ದಳು. ಆಕೆಯನ್ನು ಕರೆತರಲು ಅವರ ತವರು ಮನೆಯಾದ ಭಾಲ್ಕಿಗೆ ಹೋಗಿದ್ದೆ. ಅಲ್ಲಿ ಆಕಸ್ಮಿಕವೆಂಬಂತೆ ಚೆನ್ನಬಸವ ಪಟ್ಟದ್ದೇವರ ೧೦೧ ವರ್ಷದ ತುಂಬು ಜೀವನವನ್ನು ನೆನೆದು ಕಾರ್ಯಕ್ರಮವೊಂದನ್ನು ಹಮ್ಮಿಕೊಂಡಿದ್ದರು. ಈ ಕಾರ್ಯಕ್ರಮದಲ್ಲಿ ಡಾ|| ಪಾಪು ಭಾಗವಹಿಸಿದ್ದರು. ಅವರನ್ನು ಭೇಟಿಯಾದೆ. ಅವರು ಭಾಲ್ಕಿಯಲ್ಲಿ ನನ್ನನ್ನು ಕಂಡು ಖುಷಿಪಟ್ಟರು. ''ಇಲ್ಲಿ ಇರ್ತಿಯಲ್ಲ, ಆಮೇಲೆ ಭೇಟಿಯಾಗಿ ಮಾತಾಡೋಣ'' ಅಂದರು. ಆಗ ನಾನೇ ಮಧ್ಯಾಹ್ನದ ಊಟಕ್ಕೆ ನನ್ನಾಕೆಯ ಮನೆಗೇ ಹೋಗಬಹುದಲ್ಲ, ಎಂದು ಅಳುಕಿನಿಂದಲೇ ಕೇಳಿದೆ. ಈ ಕಾರ್ಯಕ್ರಮದ ಸಂಘಟಕರಾದ ಭೀಮಣ್ಣ ಖಂಡ್ರೆ ಯವರು ಇವರಿಗೆ ಆಪ್ತರು. ದೂರದ ಊರಿಂದ ಕರೆಸಿದ್ದಾರೆ. ಅವರೇ ಇವರ ಊಟದ ಏರ್ಪಾಡನ್ನೂ ಮಾಡಿದ್ದಾರೆ. ಇಂಥ ಸಂದರ್ಭದಲ್ಲಿ ಅಚಾನಕ್ ಆಗಿ ಬೇರೆಡೆಗೆ ಹೋಗುವುದು ತರವಲ್ಲವೆಂದು ಭಾವಿಸಿದರೋ ಏನೋ ?! ಡಾ|| ಪಾಪು ಅವರು ಇದಕ್ಕೆ ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ. ಈ ಬಗ್ಗೆ ನಾನೂ ಹೆಚ್ಚು ಒತ್ತಾಯ ಮಾಡಲಿಲ್ಲ. ಆ ವೇದಿಕೆಯ ಮೇಲಿಂದ ದೂರ ಸರಿದು ಪ್ರೇಕ್ಷಕ ಸಮೂಹದೊಂದಿಗೆ ನಾನು ಸೇರಿದೆ. ಕಾರ್ಯಕ್ರಮ ಮುಗಿದು ಎಲ್ಲರೂ ಊಟಕ್ಕೆ ದೌಡಾಯಿಸಿದರು. ನಾನೂ ಊಟಕ್ಕಾಗಿ ಮನೆಗೆ ಹೊರಟೆ. ಆ ವೇದಿಕೆಯ ಪೆಂಡಾಲು ದಾಟಿ ಒಂದೆರಡು ಫರ್ಲಾಂಗು ಬಂದಿರಬೇಕು. ಮೈಕ್‌ನಲ್ಲಿ ನನ್ನ ಹೆಸರಿಡಿದು ಕರೆಯುತ್ತ ಡಾ|| ಪಾಪು ಅವರು ನಿಮಗಾಗಿ ಕಾದುಕುಳಿತಿದ್ದಾರೆ, ತಕ್ಷಣ ವೇದಿಕೆಯ ಹತ್ತಿರ ಬರಬೇಕು ಎಂದು ಅನೌನ್ಸ್ ಮಾಡುತ್ತಿದ್ದರು. ಕೂಡಲೇ ಪೆಂಡಾಲ್ ಕಡೆ ಹೋದೆ.

ಅಂದಂತೆ ಡಾ|| ಪಾಪು ನನಗಾಗಿ ಕಾದುಕುಳಿತಿದ್ದರು. ಅಲ್ಲಿ ಭೀಮಣ್ಣ ಖಂಡ್ರೆಯವರ ಮಗನಾದ ಈಶ್ವರ ಖಂಡ್ರೆ, ಒಂದೇ ಸಮ, ''ನೀವು ನಮ್ಮ ಕಾರ್ಯಕ್ರಮಕ್ಕೆ ಬಂದಿರುವಿರಿ, ಇಂದು ನಮ್ಮ ಆತಿಥ್ಯವನ್ನೇ ಸ್ವೀಕರಿಸಬೇಕು. ಬೇರೆ ಇನ್ನೊಮ್ಮೆ ಯಾವಾಗಲಾದರೂ ನಿಮಗಿಷ್ಟ ಬಂದ ಕಡೆ ಊಟಕ್ಕೆ ಹೋಗಿರಿ, ಯಾರು ಬೇಡ ಅನ್ನುತ್ತಾರೆ ?'' ಎಂದು ಒತ್ತಾಯಿಸುತ್ತಿದ್ದರು. ಆದರೆ ಪಾಪು ಮಾತ್ರ ನಮ್ಮ ವಿಶ್ವಾರಾಧ್ಯನ ಹೆಂಡತಿಯ ತೌರು ಮನೆ ಈ ಭಾಲ್ಕಿ. ಆಕೆ ನನ್ನ ಮಗಳು. ಈ ಮಗಳ ಊರಿಗೇ ಬಂದು ಅವರ ಮನೆಯಲ್ಲಿ ಊಟ ಮಾಡದಿದ್ದರೆ ಆಕೆ ಮತ್ತು ವಿಶ್ವಾರಾಧ್ಯ ನನ್ನನ್ನು ಸುಮ್ಮನೆ ಬಿಡುತ್ತಾರೆಯೇ ?! ಎಂದು ಹೇಳುತ್ತ ಅವರ ಯಾವ ಪ್ರತಿಕ್ರಿಯೆಗೂ ಕಾಯದೆ ನನ್ನತ್ತ ತಿರುಗಿ ನಡೆದೇಬಿಟ್ಟರು.

ನನಗಾದರೋ ಹೇಳಲಾಗದ ಸಂತೋಷ ಒಂದೆಡೆಯಾದರೆ, ಇನ್ನೊಂದೆಡೆ ಸಂಕಟಕ್ಕಿಟ್ಟುಕೊಂಡಿತು. ಏಕೆಂದರೆ ಡಾ|| ಪಾಪು ಅವರನ್ನು ಊಟಕ್ಕೆ ಕರೆತರುತ್ತೇನೆಂದು ನನ್ನ ಹೆಂಡತಿಗೆ ಹೇಳಿರಲಿಲ್ಲ! ಅಲ್ಲದೆ ಆಕೆ ತನ್ನ ತಾಯಿ ತಂಗಿಯರೊಂದಿಗೆ ಇದೇ ಕಾರ್ಯಕ್ರಮ ನೋಡಲು ನಾನಿರುವ ಸಭಾಂಗಣಕ್ಕೇ ಬಂದಿದ್ದರು. ಅವರು ತಿರುಗಿ ಮನೆಗೆ ಹಿಂತಿರುಗಿದರೋ ಇಲ್ಲವೋ ಒಂದೂ ಗೊತ್ತಾಗಲಿಲ್ಲ. ಯಾವ ಮುನ್ಸೂಚನೆಯನ್ನೂ ನೀಡದೇ ಏಕ್‌ದಂ ಡಾ|| ಪಾಪು ಅವರನ್ನು ನನ್ನ ಹೆಂಡತಿಯ ಮನೆಗೆ ಕರೆದುಕೊಂಡು ಹೋಗುವುದು ಎಷ್ಟು ಸರಿ? ಎಂದು ಯೋಚಿಸುವುದಕ್ಕೂ ಪುರಸೊತ್ತು ಇಲ್ಲದಾಯ್ತು. ಅಷ್ಟರಲ್ಲಿ ನನ್ನ ಹೆಂಡತಿಯ ಮನೆ ಹಿರೇಮಠ ಗಲ್ಲಿಗೆ ಬಂದುಬಿಟ್ಟಿದ್ದೆ. ಕಾರಿನಿಂದ ಇಳಿದು ನೋಡುತ್ತೇನೆ. ನಾನು ಎಣಿಸಿದಂತೆ ಮನೆಗೆ ಬೀಗ ಹಾಕಿತ್ತು. ಕ್ಷಣ ಬೆವತು ಹೋದೆ. ಏನು ಹೇಳಬೇಕು, ಹೇಗೆ ಹೇಳಬೇಕು, ಒಂದೂ ತಿಳಿಯದೆ ಕ್ಷಣ ಪ್ರತಿಮೆಯಂತೆ ನಿಂತೇಬಿಟ್ಟೆ!

ಕಾರಿನಿಂದ ಇಳಿಯುತ್ತ ಡಾ|| ಪಾಪು "ಏನು ವಿಶ್ವಾರಾಧ್ಯ ಮನೆ ನೆನಪು ಹೋಯಿತೆ?" ಎಂದು ಕೇಳುವುದಕ್ಕೂ ಅನತಿದೂರದಲ್ಲಿ ನನ್ನ ಹೆಂಡತಿಯ ಅಕ್ಕ, ಪಕ್ಕದ ಮನೆಯ ಬಾಗಿಲಿನಿಂದ ಇಣುಕಿ ನೋಡುವುದಕ್ಕೂ ಸರಿಹೋಯ್ತು. ತಕ್ಷಣ ಸಾವರಿಸಿಕೊಂಡು ಇಲ್ಲ, ಹಾಗೇನಿಲ್ಲ ಸರ್. ನನ್ನಾಕೆಯ ಅಕ್ಕ ಮನೆಯ ಬೀಗ ಹಿಡಿದು ಅಲ್ಲಿ ಬರುತ್ತಿದ್ದಾರೆ, ಅದಕ್ಕಂತಲೇ ಇಲ್ಲಿ ನಿಂತೆ, ಎಂದು ಹೇಳಿ, ಇಲ್ಲದ ಲವಲವಿಕೆಯನ್ನು ಮುಖದಲ್ಲಿ ತಂದುಕೊಂಡೆ. ನನ್ನ ನಾದಿನಿಯ ಕೈಯೊಳಗಿನ ಕೀಲಿ ಇಸಿದುಕೊಂಡು ಲಗುಬಗೆಯಿಂದ ಬಾಗಿಲು ತೆಗೆದೆ. ಒಳ ಹೋಗಿ ಮೇಲಿನ ಅಟ್ಟದ ರೂಮ್‌ನಲ್ಲಿ ಡಾ|| ಪಾಪು ಮತ್ತವರ ಜೊತೆಗಿದ್ದ ಒಂದಿಬ್ಬರನ್ನು ಕೂಡಿಸಿದೆ. ಆಗ ನನ್ನ ನಾದಿನಿ "ಒಂದತ್ತು ನಿಮಿಷ ಅವರೊಂದಿಗೆ ಮಾತಾಡುತ್ತ ಕುಳಿತುಕೊಳ್ಳಿ ಬಾವಜಿ, ನಾನೆಲ್ಲ ಅವರ ಊಟದ ತಯಾರಿ ಮಾಡುತ್ತೇನೆ" ಎಂದಳು. ಆಕೆಗೆ ಸಾತಿ ನೀಡಲು ಬೋಚರೆ ಎಂಬ ಪಕ್ಕದ ಮನೆಯ ಶಾಲಾ ಶಿಕ್ಷಕರ ಹೆಂಡತಿಯೊಬ್ಬಳು ಓಡಿಬಂದಳು.

ಹತ್ತು ಹದಿನೈದು ನಿಮಿಷದಲ್ಲಿ ಬಿಸಿ ಬಿಸಿ ರೊಟ್ಟಿ, ಒಂದೆರಡು ತರಕಾರಿ ರೆಡಿಯಾಯ್ತು. ಅದನ್ನೇ ಡಾ|| ಪಾಪು ರುಚಿಕಟ್ಟಾಗಿ ಊಟ ಮಾಡಿದರು. ಬಿಸಿ ರೊಟ್ಟಿ ಮಾಡಿಸುವ ಅಗತ್ಯವಾದರೂ ಏನಿತ್ತು? ಮುಂಜಾನೆ ಮಾಡಿದ್ದು ನಡೀತಿತ್ತು ಎಂದರು. ಅವರ ಊಟವನ್ನು ಮೊದಲೇ ಬಲ್ಲ ನಾನು ಅವರಿಗಾಗಿ ಊಟದೊಂದಿಗೆ ಶೇಂಗಾ ಕಾಳುಗಳನ್ನು ಇಟ್ಟಿದ್ದೆ. ಊಟದ ನಂತರ ಕುಡಿಯಲು ಹಾಲು ಕೊಟ್ಟೆ. ಎಷ್ಟಾದರೂ ಪಾಪು ಅಲ್ಲವೆ? ಏನೊಂದು ತಕರಾರೂ ಮಾಡದೆ ಹಾಲು ಕುಡಿದರು! ಅವರಿಗೆ ಖಂಡ್ರೆಯವರು ಮಾಡಿಸಿಟ್ಟ ವಿಐಪಿಯ ಅಡಿಗೆಗಿಂತ ನನ್ನಾಕೆಯ ಮನೆಯ ಅವಸರದ ಅಡಿಗೆಯೇ ಹೆಚ್ಚು ತೃಪ್ತಿ ತಂದಂತೆ ಕಾಣಿಸಿತು. ನಾನಾಗ ಅವರ ಪ್ರೀತಿಯ ಮುಂದೆ ಕರಗಿಹೋಗಿದ್ದೆ. ಮೂಕನಾಗಿದ್ದೆ. ಡಾ|| ಪಾಪು ಯಾರನ್ನಾದರೂ ಹಚ್ಚಿಕೊಂಡರೆಂದರೆ ಅವರನ್ನು ತಮ್ಮ ಎದೆಯ ಕವಾಟಗಳಲ್ಲೇ ಇರಿಸಿಕೊಳ್ಳುತ್ತಾರೆ. ಅವರ ಪ್ರೀತಿ ಮೇಲ್ತೋರಿಕೆಯದಲ್ಲ, ಅದು ಹೃದಯಾಂತರಾಳದಿಂದ ಮೂಡಿಬಂದದ್ದು.

ಹೀಗೆ ಪ್ರೀತಿಯ ವರ್ಷಾಧಾರೆಯನ್ನೇ ಸಿಂಪಡಿಸುವ ಡಾ|| ಪಾಪು ಕೆಲವೊಮ್ಮೆ ಸಿಟ್ಟನ್ನೂ ಮಾಡಿಕೊಳ್ಳಬಲ್ಲರು. ಯಾವಾಗಲಾದರೊಮ್ಮೆ ಹುಬ್ಬಳ್ಳಿಗೆ ಹೋಗಿಯೂ ಅವರನ್ನು ಭೇಟಿಯಾಗದೆ ಹಾಗೇ ಮರಳಿ ಶಹಾಪುರಕ್ಕೆ ಬಂದಿದ್ದರೆ ನನ್ನ ಕತೆ ಮುಗಿದೇಹೋಯ್ತು! ಎಷ್ಟು ಚಾಲತ್ತು ಹೇಳಿದರೂ ಅದನ್ನು ಕಿವಿಯ ಮೇಲೆ ಹಾಕಿಕೊಳ್ಳದೆ ಹುಸಿ ಮುನಿಸನ್ನು ತೋರಿಸುತ್ತಾರೆ. ಮುಖ ಗಂಟಿಕ್ಕಿಕೊಂಡು ಮಾತೇ ಬಿಡುವವರಂತೆ ನಟಿಸುತ್ತಾರೆ. ಅದು ಅರೆಗಳಿಗೆ ಮಾತ್ರ! ಮತ್ತೆ ಎಂದಿನ ಮೋಡಿ ಮುಖದಲ್ಲಿ ಚಿಮ್ಮುತ್ತದೆ. ಮತ್ತದೇ ರಾಗ, ಪಲ್ಲವಿ ಗುನುಗುನಿಸುತ್ತವೆ.

**ವಿಶ್ವಾರಾಧ್ಯ ಸತ್ಯಂಪೇಟೆ**
ಬಸವಮಾರ್ಗ, ಶಹಾಪುರ - ೫೮೫ ೨೨೩

# ಸಾದರ ಸ್ವೀಕಾರ

**ಗುನ್ನರ್ ಎಕ್ಲೋಫ್‌ನ ಆಯ್ದ ಕವಿತೆಗಳು**
ಅನು : ಆರ್. ವಿಜಯರಾಘವನ್
**ಪುಟ :** ೧೬೦ **ಬೆಲೆ : ರೂ :** ೫೦
**ಕನ್ನಡ ಪುಸ್ತಕ ಪ್ರಾಧಿಕಾರ,** ಪಂಪ ಮಹಾಕವಿ ರಸ್ತೆ,
ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಬುಂಡೆ ಹಿಡಿದವರು** (ಮೂರು ದಾರಿಗಳ ಕವಿತೆಗಳು)
ಅನು : ಆರ್. ವಿಜಯರಾಘವನ್
**ಪುಟ :** ೧೪೬ **ಬೆಲೆ : ರೂ.** ೮೦
**ಸಿವಿಜಿ ಪಬ್ಲಿಕೇಷನ್ಸ್**, ನಂ. ೭೦, ೨ನೇ ಮೇನ್,
ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್,
ಬೆಂಗಳೂರು - ೫೬೦ ೦೦೩

**ಶೈವ ತತ್ವ** (ಶಿವಯೋಗ ಸೂತ್ರ) ಸದಾಶಿವಯೋಗಿ
**ಪುಟ :** ೭೨ **ಬೆಲೆ : ರೂ.** ೭೦
**ಶ್ರೀ ಶಿವಾನಂದ ಯೋಗಾಶ್ರಮ,** ಹಂಪಿ-೫೮೩ ೨೩೯
ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ

**ಪ್ರಶ್ನೆ - ಪ್ರಜ್ಞೆ** (ಅಂಕಣ ಬರಹ)
ಶಾಂತಾರಾಮ ಸೋಮಯಾಜಿ
**ಪುಟ :** ೧೪೬ **ಬೆಲೆ : ರೂ.** ೪೦
**ಜನಪರ ಪುಸ್ತಕಾಲಯ,** ನಾಲಂದ,
ಬಾರ್ಕೇರಿ ರಸ್ತೆ, ಕುಂದಾಪುರ - ೫೭೬ ೨೦೧

**ಶತಮಾನದ ಜಾನಪದ**
ಡಾ|| ಹಿ. ಶಿ. ರಾಮಚಂದ್ರೇಗೌಡ
**ಪುಟ :** ೭೦ **ಬೆಲೆ : ರೂ.** ೪೦

**ಒಂದು ಹನಿ ರಕ್ತ** ವಿಷ್ಣು ನಾಯ್ಕ
**ಪುಟ :** ೬೨ **ಬೆಲೆ : ರೂ.** ೪೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀ ರಾಘವೇಂದ್ರ ಪ್ರಕಾಶನ,** ಅಂಕೋಲಾ - ೫೮೧ ೩೧೪,
ಉತ್ತರ ಕನ್ನಡ ಜಿಲ್ಲೆ

**ಹುಡುಗ-ಹುಡುಗಿ ಹದಿವಯಸ್ಸಿಗೆ ಬಂದಾಗ**
(ಶರೀರ ವಿಜ್ಞಾನ)
ಅನಿತ್ ಕುಲಕರ್ಣಿ, ಚಾರುಶೀಲಾ ಜುಯಿಕರ್
**ಪುಟ :** ೮೮ **ಬೆಲೆ : ರೂ.** ೪೦
**ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನ,** ಗುಲಬರ್ಗಾ

**ದಿಕ್ಕಿಲ್ಲದವರು** (ಕವನ ಸಂಕಲನ) ಜಡೇಕುಂಟ ಮಂಜುನಾಥ್
**ಪುಟ :** ೨೬ **ಬೆಲೆ : ರೂ.** ೧೫
**ನೇತಾಜಿ ನವಜಾಗೃತಿ ಸ್ನೇಹ ಬಳಗ**
ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ

**ತಂಗಾಳಿ** (ಮಕ್ಕಳಿಗಾಗಿ ಕವನಗಳು) ನಾರಾಯಣ ಹೆಗಡೆ
**ಪುಟ :** ೩೮ **ಬೆಲೆ : ರೂ.** ೩೦
**ಸ್ವಂತಿಕಾ ಸಾಹಿತ್ಯ ಬಳಗ,** ಸುಳ್ಯ, (ದಕ್ಷಿಣ ಕನ್ನಡ)

**ಅಂತರಂಗಯಾನ** (ಜಪಾನಿ ಮಾದರಿ ಹೈಕುಗಳು)
ಜಿ. ಆರ್. ಪರಿಮಳಾ ರಾವ್
**ಪುಟ :** ೯೬ **ಬೆಲೆ : ರೂ.** ೫೦
**ಅನಿಕಾ ಪ್ರಕಾಶನ,** ನಂ. ೧೦೦೩, ೨೭ನೇ 'ಎ' ಮುಖ್ಯರಸ್ತೆ,
೯ನೇ ಬ್ಲಾಕ್, ಜಯನಗರ, ಬೆಂಗಳೂರು-೫೬೦ ೦೬೯

**ಮಣ್ಣುಮರ ಬಳ್ಳಿ** (ಕವನ ಸಂಕಲನ) ಕೆ. ಎಸ್. ಉಮಾದೇವಿ
**ಪುಟ :** ೬೦ **ಬೆಲೆ : ರೂ.** ೫೦
**ಹಂಸ ಪ್ರಕಾಶನ,** ಮಹಾಲಕ್ಷ್ಮಿ ನಿಲಯ, ೧೦ನೇ ಕ್ರಾಸ್,
ಭುವನೇಶ್ವರಿ ನಗರ, ವಿಜಯ ಭಾರತಿ ಶಾಲೆಯ ಹಿಂದೆ,
ಟಿ. ದಾಸರಹಳ್ಳಿ, ಬೆಂಗಳೂರು-೨೪

**ಸಲಸಲದ ಪಾಡು** (ಕವನ ಸಂಕಲನ)
ವಿಜಯಕಾಂತ ಪಾಟೀಲ
**ಪುಟ :** ೬೪ **ಬೆಲೆ : ರೂ.** ೨೨
**ಸುಮುಖ ಪ್ರಕಾಶನ,** ನಂ. ೩, ಶಾಲಿನಿ ಹೊಟೇಲ್
ಹಿಂದೆ, ಕಾಮಾಕ್ಷಿಪಾಳ್ಯ, ಬೆಂಗಳೂರು-೫೬೦ ೦೭೯

**ಒಕ್ಕಲು** (ಪ್ರಬಂಧ ಸಂಕಲನ) ಅಂಬ್ರಯ್ಯ ಮಠ
**ಪುಟ :** ೧೧೦ **ಬೆಲೆ : ರೂ.** ೬೦

**ಕಾಮಿನಿ** (ಕಾ(ವ್ಯ) ಮಿನಿ) ಡಾ|| ಕೆ. ಜಗದೀಶ
**ಪುಟ :** ೯೬ **ಬೆಲೆ : ರೂ.** ೪೫
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪುಸ್ತಕ ನಿಧಿ,** ಲಕ್ಷ್ಮೀ ಸದನ, ಹಳ್ಳಾಡಿ-ಹರ್ಕಾಡಿ
ಅಂಚೆ, ಕುಂದಾಪುರ ತಾಲೂಕು - ೫೭೬ ೨೧೦

**ಮಹಾ ದಾರ್ಶನಿಕ ಡಾ|| ಗುರುದೇವ ರಾನಡೆ**
ರುದ್ರಗೌಡ ಜಿ. ಪಾಟೀಲ
**ಪುಟ :** ೬೦ **ಬೆಲೆ ರೂ.** ೫೦
**ಜನಮತರಂಗ ಪ್ರಕಾಶನ,** ಜಮಖಂಡಿ-೫೮೭ ೩೦೧

**ಲವ್ ಸೈಕಾಲಜಿ** (ಲೇಖನ ಸಂಗ್ರಹ)
ಎನ್. ವಿಶ್ವರೂಪಾಚಾರ್
**ಪುಟ :** ೫೬ **ಬೆಲೆ : ರೂ.** ೧೫

ನೀವು ಆರೋಗ್ಯದ ಬಗ್ಗೆ ಏನನ್ನು ತಿಳಿದಿರಬೇಕು?
ಎನ್. ವಿಶ್ವರೂಪಾಚಾರ್
**ಪುಟ :** ೬೮ **ಬೆಲೆ : ರೂ.** ೧೫
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ವಿಶ್ವರೂಪ ಪ್ರಕಾಶನ,** ಬಿಲ್ಡಿಂಗ್ ನಂ೧೬೮,
ಕೆ.ಹೆಚ್.ಬಿ.ಕಾಲೋನಿ, ಕೆಂಗೇರಿ ಉಪನಗರ,
ಬೆಂಗಳೂರು - ೫೬೦ ೦೬೦

# ಅಪರೂಪದ ಗೌರಮ್ಮ

ಅಲ್ಲೊಂದು ಗುಂಪು-ಚರ್ಚೆ ನಡೆಯುತ್ತಿತ್ತು. ಸಂದರ್ಭ : ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ಮಹಿಳಾ ರಾಜಕಾರಣಿಗಳ ರಾಜ್ಯ ಸಮಾವೇಶ. ಆ ಗುಂಪಿನಲ್ಲಿ ಎಪ್ಪತ್ತು ದಾಟಿದ, ಆಕರ್ಷಕ ಮುಖಭಾವದ ವೃದ್ಧೆಯೊಬ್ಬಳು ಸ್ವಲ್ಪವೂ ಸಂಕೋಚವಿಲ್ಲದೆ ಗಟ್ಟಿ ದನಿಯಲ್ಲಿ ಸ್ವರವೆತ್ತಿ ಮಾತನಾಡುತ್ತಿದ್ದಳು. ಅವಳ ಮಾತಿನ ಗತ್ತು ಮತ್ತು ವಿಷಯ ನನ್ನಲ್ಲಿ ಕುತೂಹಲ ಹುಟ್ಟಿಸಿತು. ಚರ್ಚೆಯೆಲ್ಲಾ ಮುಗಿದು, ಊಟದ ನಂತರ ವಿಶ್ರಮಿಸಿಕೊಂಡು ಕುಳಿತಿದ್ದ ಆಕೆಯ ಬಳಿ ಹೋಗಿ ಮಾತನಾಡಿಸಿದೆ. ಆಕೆಯತ್ತ ಪ್ರಶ್ನೆಯೊಂದನ್ನು ಎಸೆದರೆ ಸಾಕು, ಉತ್ತರ ಅಡೆತಡೆಯಿಲ್ಲದೆ ಪ್ರವಾಹದಂತೆ ಹೊರ ಬೀಳುತ್ತಿತ್ತು. ''ನನ್ನ ಹೆಸರು ಗೌರಮ್ಮ ಕಣಮ್ಮ. ರಾಮಕೃಷ್ಣ ಹೆಗ್ಗಡೆಯವರ ಕಾಲದಲ್ಲೇ ನಾನು ಮಂಡಲ ಪಂಚಾಯಿತಿಯಲ್ಲಿದ್ದೆ. ನಾನು ಪೆರಿಯಾಪಟ್ಟಣದ ಕಡೆಯ ತಿರುಮಲಪುರದಿಂದ ಗೆದ್ದವಳು,'' ಎಂದು ತನ್ನನ್ನು ಪರಿಚಯಿಸಿಕೊಂಡ ಗೌರಮ್ಮನವರ ಮಾತಿನ ವೇಗಕ್ಕೆ ಬ್ರೇಕ್ ಹಾಕಿ ನನ್ನ ಕೆಲವೊಂದು ಪ್ರಶ್ನೆಗಳಿಗೆ ಉತ್ತರ ಕಂಡುಕೊಂಡೆ.

ಈಗ ಎಪ್ಪತ್ತು ದಾಟಿರುವ ಗೌರಮ್ಮ ಹತ್ತು ವರ್ಷಗಳ ಹಿಂದೆ ಮಹಿಳಾ ಮೀಸಲಾತಿಯ ಆಧಾರದ ಮೇಲೆ ಬೈಲುಕೊಪ್ಪದ ಮಂಡಲ ಪಂಚಾಯತಿಗಾಗಿ ಆಯ್ಕೆಯಾದವರು. ತೀವ್ರ ಸ್ಪರ್ಧೆಯಿಲ್ಲದೆ ಸರ್ವಾನುಮತದಿಂದ ಆಯ್ಕೆಯಾದ ಈಕೆಗೆ ಜನಬೆಂಬಲ ಬಹಳ. ಈ ನಿರಕ್ಷರಕುಕ್ಷಿ ಪಂಚಾಯತಿ ಸದಸ್ಯೆಯಾದ ಮೇಲೆಯೇ ತನ್ನ ಸಹಿ ಮಾಡಲು ಕಲಿತದ್ದು. ಏಳು ಹೆಣ್ಣು ಮತ್ತು ಐದು ಗಂಡು ಮಕ್ಕಳ ತಾಯಿಯಾದ ಈ ಮಹಾಮಾತೆಗೆ ಎಲ್ಲ ಮಕ್ಕಳಿಗೂ ವಿದ್ಯಾಭ್ಯಾಸ ಕೊಡಿಸಿಲ್ಲ, ಎಂಬುದರ ಬಗ್ಗೆ ಬೇಸರವಿದೆ. ಆದರೆ ಈಗ ಮೊಮ್ಮಕ್ಕಳೆಲ್ಲಾ ವಿದ್ಯಾವಂತರಾಗಿದ್ದಾರೆ ಎಂಬುದನ್ನು ಹೇಳುವಾಗ ಅವರ ಕಣ್ಣಿನಲ್ಲಿ ಹೊಳಪು ಕಾಣಿಸುತ್ತದೆ.

ಎಲ್ಲ ಮಕ್ಕಳಿಗೆ ವಿದ್ಯಾಭ್ಯಾಸ ಯಾಕೆ ಕೊಡಿಸಲಿಲ್ಲ, ಎಂದು ಪ್ರಶ್ನಿಸಿದರೆ, ಇಲ್ಲ ಕಣಮ್ಮ, ಆಗ ನಾವು ಬಡವರು. ನಮಗೆ ದುಡ್ಡೆಲ್ಲಿ ಬರಬೇಕು ? ಈಗಾದರೆ ನಾವು ಚೆನ್ನಾಗಿದ್ದೀವಿ, ಎಂದರು. ಈಗ ಅವರ ಪರಿಸ್ಥಿತಿ ಹೇಗೆ ಸುಧಾರಿಸಿದೆ ಎನ್ನುವ ಕುತೂಹಲದಿಂದ ಪ್ರಶ್ನಿಸಿದಾಗ, ''ನೋಡಮ್ಮ, ಹಿಂದೆ ನಾವು ಬೇರೆಯವರ ಹೊಲದಲ್ಲಿ ಹೋಗಿ ಗೆಯ್ಯುತ್ತಿದ್ವಿ. ಸಾಕಷ್ಟು ಕೂಲಿ ಸಿಗುತ್ತಿರಲಿಲ್ಲ. ನಮ್ಮ ಕಣ್ಣೆದುರಿಗೇ ಆ ಪರದೇಶದವರಿಗೆ, ಅದೇ ಟಿಬೆಟನ್ನರಿಗೆ ಸರ್ಕಾರ ಭೂಮಿ, ಕಾಣಿಕೆ ಕೊಡೋದು ನ್ಯಾಯವಾ ? ಏನು ಮಾಡಿದ್ವಿ ಗೊತ್ತಾ ? ನಾವು ಒಂದು ಹತ್ತು ಮನೆಯವ್ರು ನಮ್ಮ ಹಳ್ಳಿ ಹತ್ತಿರದ ಕಾಡಿಗೆ ಹೋಗಿ ಗುಡ್ಲು ಹಾಕಿಕೊಂಡು ಕುಂತುಬಿಟ್ವಿ. ಸುತ್ತಮುತ್ತ ಇದ್ದ ಭೂಮಿಯಲ್ಲೇ ಗೇಯ್ಮೆ ಮಾಡಿಕೊಂಡು ಇದ್ವಿ. ಅದ್ಯಾವೋನು ಬರ್‍ತಾನೋ ಬರ್‍ಲಿ, ನಮ್ಮನ್ನು ಎಬ್ಬಿಸೋಕೆ ಅಂತ ಸುಮ್ಮನಿದ್ವಿ. ಪೊಲೀಸ್ನೋರು ಬಂದ್ರು, ಸರ್ಕಾರದೋರು ಬಂದ್ರು, ನಾವು ಯಾವುದಕ್ಕೂ ಹೆದರಲಿಲ್ಲ. ಹೋರಾಟ ಮಾಡಿದ್ವಿ. ಸುಮಾರು ಆರೇಳು ವರ್ಷ ಆ ಜಾಗ ಬಿಟ್ಟು ಕದಲಲಿಲ್ಲ. ಈಗ ನಮ್ಮೋರು ಒಂದು ಎಂಟು ಮನೆಯವರಿಗೆ ಜಾಗ ಸಿಕ್ಕಿದೆ. ಉಳೋಕೆ ಭೂಮಿ ಸಿಕ್ಕಿದೆ. ಸರ್ಕಾರದ ಕಛೇರೀಲಿ ನಮ್ಮ ಹೆಸರು ರಿಜಿಸ್ಟರ್ ಆಗಿದೆ'' – ಎಂದು ತಮ್ಮ ಹೋರಾಟದ ಕಥೆಯನ್ನು ಅಭಿಮಾನದಿಂದ ಗೌರಮ್ಮ ಹೇಳುವಾಗ ಎಂತಹವರಿಗೂ ಆಕೆಯ ಸಾಮರ್ಥ್ಯದ ಬಗ್ಗೆ ಹೆಮ್ಮೆಯೆನಿಸದೆ ಇರದು.

ಅಕ್ಷರ ಜ್ಞಾನವಿಲ್ಲದ ಈಕೆ ಪಂಚಾಯತಿಯಲ್ಲಿ ಹೇಗೆ ಕಾರ್ಯ ನಿರ್ವಹಿಸಿರಬಹುದು ಎಂಬ ಕುತೂಹಲದಿಂದ ವಿವರಗಳಿಗಾಗಿ ಪ್ರಶ್ನಿಸಿದಾಗ, ಅವರ ವ್ಯಾವಹಾರಿಕ ಜ್ಞಾನ ತಲೆದೂಗುವಂತೆ ಮಾಡಿತು. ''ನಾನು ಸದಸ್ಯೆ ಆದ ಮೇಲೆ ರಸ್ತೆ ಮಾಡಿಸಿವ್ನಿ. ಕರೆಂಟು, ನಲ್ಲಿ ಹಾಕಿಸಿವ್ನಿ. ಟ್ಯಾಂಕ್ ಕಟ್ಟಿಸಿವ್ನಿ. ಈಗ ಏಳನೇ ಕ್ಲಾಸ್‌ವರ್‍ಗೆ ಇಸ್ಕೂಲ್ ಬಂದೈತೆ. ಇನ್ನು ನಮ್ಮೂರಿಗೆ ಬೇಕಾಗಿರೋದು ಒಂದು ಬಸ್ ಮತ್ತು ಹಾಲಿನ ಡೈರಿ'' ಎಂದು ಹೇಳುವಾಗ ಅವರ ಹಳ್ಳಿಯ ಚಿತ್ರ ನಮ್ಮ ಕಣ್ಣ ಮುಂದೆ ಬಿಚ್ಚಿಕೊಳ್ಳುತ್ತೆ. ಅವರ ಸಾಧನೆಯ ಪಟ್ಟಿ ಅಷ್ಟಕ್ಕೆ ನಿಲ್ಲುವುದಿಲ್ಲ: ''ಒಂದು ಬಸವೇಶ್ವರನ ದೇವಸ್ಥಾನ ಕಟ್ಟಿಸಿದೆ ಕಣಮ್ಮ. ಕೆಲವು ಜನರು ಬಂದು ಅದನ್ನು ರಾಮರ ದೇವಸ್ಥಾನ ಮಾಡಬೇಕೆಂದು ಹೇಳಿದ್ರು. ನಾನು ಅದು ಆಗೋಕೆ ಬಿಡಲಿಲ್ಲ. ಆ ದೇವಸ್ಥಾನದಲ್ಲಿ ನನ್ನ ಹೆಸರು ಹಾಕಬೇಕು, ಅಂತ ಊರ ಜನ ಅಂದ್ರು. ನಾನು ಬೇಡ ಅಂದೆ. ಹಾಗೆಯೇ ನಮ್ಮ ಊರಿಗೆ 'ಗೌರಿಪುರ' ಅನ್ನೋ ಹೆಸರು ಮಡಗಬೇಕು ಅಂದ್ರು. ನಾನು ಒಪ್ಪಿಲ್ಲ ಕಣಮ್ಮ. 'ಶಾಂತಿನಗರ' ಅಂತ ಹೆಸರಿಡಿಸಿವ್ನಿ.''

ಹೀಗೆ ತಮ್ಮ ಗ್ರಾಮಪಂಚಾಯಿತಿಯ ಸಾಧನೆಯಲ್ಲೆಲ್ಲಾ ತನ್ನ ಛಾಪು ಇದೆಯೆಂದು ಹೇಳಿಕೊಳ್ಳುವ ಗೌರಮ್ಮನವರಿಗೆ ಅವರ ಸಹಸದಸ್ಯರ ಬೆಂಬಲ, ಪ್ರೋತ್ಸಾಹ ಇತ್ತೆಂದು ಹೇಳಿಕೊಂಡರಾದರೂ, 'ತಮಗೆ ಯಾರೂ ಅಗೌರವ ತೋರಿಸಿ, ಅವಮಾನ ಮಾಡಿರಲಿಲ್ಲವೇ ?' ಎಂದು ಪ್ರಶ್ನಿಸಿ ಕೆದಕಿದಾಗ, ಒಂದು ಪ್ರಸಂಗವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದರು. ಅವರು ಸಭೆಗೆ ಹೋಗದ ಒಂದು ದಿನ, ಎಲ್ಲರೂ 'ಯಾಕೋ ಗೌರಮ್ಮ ಸಭೆಗೆ ಬಂದಿಲ್ಲ' ಎಂದು ಚರ್ಚಿಸುತ್ತಿದ್ದರಂತೆ. ಅವರಲ್ಲೊಬ್ಬ 'ಈ ಗೌರಮ್ಮನಿಗೆ ಒಂದು ಪ್ಯಾಂಟು, ಶರ್ಟು, ಹಾಕಿಬಿಡಬೇಕು ನೋಡಿ' ಎಂದು ನಗಾಡಿದನಂತೆ. ಈ ವಿಷಯ ಬೇರೆಯವರಿಂದ ತಿಳಿದ ಗೌರಮ್ಮ, ಮಾರನೆಯ ದಿನ ಅವನ ಪಕ್ಕ ಹೋಗಿ ಕುಳಿತರಂತೆ. ''ಏನು ಗೌರಮ್ಮ, ನಿನ್ನೆ ಬರಲಿಲ್ಲ?'' ಎಂದನಂತೆ. ''ಅದs ನನಗೆ ನೀವೆಲ್ಲ ಪ್ಯಾಂಟು, ಶರ್ಟು ಹೊಲಿಸಬೇಕು ಅಂತಿದ್ರಲ್ಲಾ, ಅದಕ್ಕೆ ನಿಮಗೆಲ್ಲಾ ಸೀರೆ ತರೋಕೆ ಹೋಗಿದ್ದೆ'' ಅಂತಂದು ಅವರ ಬಾಯಿ ಮುಚ್ಚಿಸಿದರಂತೆ. ಇದು ಗೌರಮ್ಮನವರ ಮಾತಿನ ವರಸೆ.

ಗೌರಮ್ಮನವರ ಕಾರ್ಯವೈಖರಿಯನ್ನು ಅವರ ಬಾಯಿಯಿಂದಲೇ ಕೇಳಬೇಕು. ಅವರೂರಿನ ಜನರ ಸಮಸ್ಯೆಗಳಿಗೆ ಪರಿಹಾರ ಹುಡುಕಿಕೊಂಡು ತಾಲೂಕು, ಜಿಲ್ಲಾ ಕಛೇರಿಗಳಿಗೆ, ಕೊನೆಗೆ ಬೆಂಗಳೂರಿನ ವಿಧಾನಸೌಧಕ್ಕೂ ಅಲೆಯುವ ಛಾತಿ ಇರುವ ಆಕೆಗೆ ಬಸ್ಸಿನ ಬೋರ್ಡು ಓದಲು ಬರುವುದಿಲ್ಲ. ಯಾವ ಕಛೇರಿಯ ಯಾವ ಆಫೀಸರ್‌ಗಳನ್ನಾದರೂ ಧೈರ್ಯದಿಂದ ಮಾತನಾಡಿಸಬಲ್ಲ ಆಕೆಗೆ ಹೆದರಿಕೆಯೆಂಬುದೇ ಇಲ್ಲ. ಮನೆಯಲ್ಲಿರುವ ಕಲಿತ ಹುಡುಗರ ಕೈಯಲ್ಲಿ ಅರ್ಜಿ ಬರೆಯಿಸಿಕೊಂಡು ಕಛೇರಿಗಳಿಗೆಲ್ಲಾ ಧೈರ್ಯದಿಂದ ಸುತ್ತಿ ಹಲವಾರು ಮಂದಿಯ ಕೆಲಸ ಮಾಡಿಸಿಕೊಟ್ಟಿರುವ ಗೌರಮ್ಮ, ಅವರ ಊರಿನ ಅತ್ಯಂತ ಜನಪ್ರಿಯ ವ್ಯಕ್ತಿ. ಒಂದು ಟರ್ಮಿಗೆ ಮಂಡಲ ಪಂಚಾಯತಿಯ ಸಾಮಾನ್ಯ ಸದಸ್ಯೆಯಾಗಿದ್ದ ಈಕೆ ಮುಂದಿನ ಟರ್ಮಿಗೆ ಬೇರೆಯವರು ಬಿಟ್ಟುಕೊಡು, ಎಂದೊಡನೆ ತನ್ನ ಸ್ಥಾನ ಬಿಟ್ಟುಕೊಟ್ಟಿರುವ ಧಾರಾಳಿ. ಅಧಿಕಾರವಿಲ್ಲದಿದ್ದರೂ ಇದ್ದಾಗ ನಿರ್ವಹಿಸುತ್ತಿದ್ದಂತೆಯೇ ಈಗಲೂ ಕೆಲಸ ಮಾಡುವ ಈಕೆ ನಿವೃತ್ತಿಯೇ ಇಲ್ಲದವಳು.



''ಈ ಸಭೆ, ಸಮಾರಂಭಗಳಿಗೆ ಹೇಗೆ ಓಡಾಡುತ್ತೀರಾ ? ಯಾರು ನಿಮ್ಮನ್ನು ಕರೆದುಕೊಂಡು ಬರುತ್ತಾರೆ ?'' ಎಂದು ಪ್ರಶ್ನಿಸಿದಾಗ, ''ನನಗೆ ಯಾರ ಜೊತೆಯೂ ಬೇಡ. ಏನು ಹೆದರಿಕೆ ? ಒಬ್ಬಳೇ ಓಡಾಡುವೆ. ಹೋಗಬೇಕಾದ ಜಾಗದ ಅಡ್ರೆಸ್ ಒಂದು ಚೀಟಿಯಲ್ಲಿ ಬರೆಸಿಟ್ಟುಕೊಂಡಿರುವೆ. ಬಸ್‌ನಿಂದ ಇಳಿದು ನಿಮ್ಮಂಥವರನ್ನು ಹೇಗೆ ಹೋಗುವುದು, ಎಂದು ಕೇಳುತ್ತೀನಿ. ನನಗೇನು ಬಾಯಿ ಕುರುಡಾ ?'' ಎಂದು ಪಾಟಿ ಸವಾಲು ಹಾಕುವ ಅವಳ ಠೀವಿಗೆ ಪ್ರಶ್ನೆ ಕೇಳಿದ ನನ್ನ ಬಾಯಿ ಮುಚ್ಚಿತ್ತು. ಗೌರಮ್ಮನಂಥ ಮಹಿಳೆಯರಿಗೆ ಅಕ್ಷರದ ಅಸ್ತ್ರವೂ ಕೈಗೆ ಸಿಕ್ಕಿದರೆ ಭಾರತದ ರಾಜಕೀಯದ ಗತಿ ಎತ್ತ ಸಾಗಬಹುದು ?

**ಎನ್. ಗಾಯತ್ರಿ**
೧೦೮, ಸ್ಕೈಲೈನ್ ಸುರಭಿ, ವಿದ್ಯಾಪೀಠ ರಸ್ತೆ,
ಬೆಂಗಳೂರು - ೫೬೦ ೦೮೫



# ಹಚ್ಚೇವು ಕನ್ನಡದ ದೀಪ

ಇತ್ತೀಚೆಗೆ ಚೆನ್ನೈಗೆ ಹೋಗಿದ್ದಾಗ, ಅಲ್ಲಿನ ಕರ್ನಾಟಕ ಸಂಘ ಉನ್ನತ ಪ್ರೌಢಶಾಲೆಯ ವಿದ್ಯಾರ್ಥಿನಿ ಕನ್ನಡದಲ್ಲಿ ಎಸ್ಸೆಲ್ಸಿ ಪರೀಕ್ಷೆಯಲ್ಲಿ ರಾಜ್ಯಕ್ಕೆ ಎರಡನೇ ರ್‍ಯಾಂಕ್ ಗಳಿಸಿದ್ದ ವಿಷಯ ಪತ್ರಿಕೆಗಳಲ್ಲಿ ಓದಿದ್ದುದು ನೆನಪಿಗೆ ಬಂತು. ಆಕೆ ಅಲ್ಲಿಯೇ ಪ್ಲಸ್-ಟೂ ತರಗತಿಯಲ್ಲಿ ಮುಂದುವರಿದಿದ್ದ ಪಕ್ಷದಲ್ಲಿ, ಸ್ವಲ್ಪ ತಡವಾದರೂ ಅಭಿನಂದಿಸಬಾರದೇಕೆ ಎನ್ನಿಸಿತು.

ದೂರವಾಣಿ ಮೂಲಕ ಪ್ರಿನ್ಸಿಪಾಲರನ್ನು ಸಂಪರ್ಕಿಸಿದೆ. ಎಂದೋ ಪತ್ರಿಕೆಯಲ್ಲಿ ಓದಿದ್ದ ಸುದ್ದಿಯನ್ನು ನೆನಪಿನಲ್ಲಿಟ್ಟುಕೊಂಡು ಹೀಗೆ ಸಂಪರ್ಕಿಸುತ್ತಿರುವ ಬಗ್ಗೆ ಅವರಿಗೆ ಸಂತೋಷವಾಯಿತು. ಕನ್ನಡದವರೇ ಆದ ಶ್ರೀಮತಿ ಕೆ. ಕುಸುಮಾ ಅವರು ನನ್ನ ಉದ್ದೇಶವನ್ನು ಅರ್ಥಮಾಡಿಕೊಂಡು, ಆ ವಿದ್ಯಾರ್ಥಿನಿ ಎಸ್. ಶೋಭಾ ಇಲ್ಲಿಯೇ ಬಿ. ಕಾಂ. ಕಲಿಯುತ್ತಿರುವುದಾಗಿ ಹೇಳಿ, ಆಕೆಯನ್ನು ಭೇಟಿ ಮಾಡಿದರೆ ತಮಗೂ ಸಂತೋಷವಾಗುತ್ತದೆ ಎಂದರು.

ಈ ಲೇಖಕನ ಮೂರು ಮಕ್ಕಳು ಅದೇ ಶಾಲೆಯಲ್ಲಿ ಕಲಿತವರು ಎಂಬ ವಿಷಯ ತಿಳಿದ ನಂತರ 'ಪರಿಚಿತರಲ್ಲ' ಎಂಬ ಸಂಕೋಚ ಮಾಯವಾಯಿತು. ಪ್ರಿನ್ಸಿಪಾಲರು ತಮ್ಮ ಶಾಲೆಯ ಆ ಹಳೆಯ ವಿದ್ಯಾರ್ಥಿಗಳ ಬಗ್ಗೆ ಕೇಳಿ ತಿಳಿದುಕೊಂಡರು.

ಒಂದು ಬಗೆಯ ಅಳುಕಿನಿಂದಲೇ ಪ್ರಿನ್ಸಿಪಾಲರ ಕೋಣೆಗೆ ಇಣುಕಿದ ಎರಡು ಜಡೆಯ ಹುಡುಗಿಯನ್ನು ತೋರಿಸಿ ''ಬಾರೆ ಹುಡುಗಿ, ನಿನ್ನನ್ನು ಕಾಣಲು ಬೆಂಗಳೂರಿನಿಂದ ಬಂದಿದ್ದಾರೆ!'' ಎನ್ನುತ್ತ ''ನೋಡಿ, ಇವಳೇ ಎಸ್. ಶೋಭಾ, ಎರಡನೇ ರ್‍ಯಾಂಕ್ ಗಳಿಸಿದವಳು!'' ಎಂದು ಪರಿಚಯ ಮಾಡಿಸಿದರು.

'ಹೊಸತು' ಪರವಾಗಿ ಶೋಭಾಳನ್ನು ಅಭಿನಂದಿಸಿದಾಗ ಆಕೆಯ ಅಳುಕು ಮಾಯವಾಗಿ ಮುಖದ ಮೇಲೆ ಮಂದಹಾಸ ಮೂಡಿತು. ಆಕೆಯೊಂದಿಗೆ ಮಾತುಕತೆಯಾಡುತ್ತಿದ್ದಾಗ, ತಮ್ಮ ಶಾಲೆಯ ಹೆಮ್ಮೆಯ ವಿದ್ಯಾರ್ಥಿನಿ ಕುರಿತು ಪ್ರಿನ್ಸಿಪಾಲರೂ ಮೆಚ್ಚುಗೆಯ ಮಾತುಗಳನ್ನು ಸೇರಿಸಿದರು.

ಶೋಭಾಳ ತಂದೆ ಸಿ. ಸೋಮಶೇಖರ್, ತಾಯಿ ಶ್ರೀಮತಿ ನಂಜಮ್ಮ. ಮೂಲತಃ ಕರ್ನಾಟಕದ ತುಮಕೂರು ಸಮೀಪದ ಒಂದು ಹಳ್ಳಿಯವರಾದ ಇವರು ಕೆಲವು ವರ್ಷಗಳಿಂದ ಚೆನ್ನೈನಲ್ಲಿದ್ದಾರೆ. ತಿರುವಲ್ಲಿಕೇಣಿಯಲ್ಲಿ ವಾಸ. ತಂದೆ ಸಣ್ಣಮಟ್ಟಿನ ಎಲೆಕ್ಟ್ರಿಕ್ ಉಪಕರಣಗಳ ವ್ಯಾಪಾರಿ. ಇಲ್ಲಿಗೆ ಬರುವ ಮುಂಚೆ ಶೋಭಾ ಶಾಲೆ ಕಲಿತದ್ದು ಬೆಂಗಳೂರಿನಲ್ಲಿ. ಇವರ ಸಹೋದರಿ ಮತ್ತು ಸಹೋದರ ಸಹ ಇದೇ ಶಾಲೆಯಲ್ಲಿ ಕಲಿಯುತ್ತಿದ್ದಾರೆ.

ಶೋಭಾ ಬಲು ಚುರುಕಿನ ಹುಡುಗಿ. ಕನ್ನಡ ಉಪಾಧ್ಯಾಯರಾದ ಶ್ರೀ ಕುಮಾರ್ ಆಚಾರ್ಯರ ಪ್ರಕಾರ, ಆಕೆಗೆ ತಾನು ರ್‍ಯಾಂಕ್ ವಿದ್ಯಾರ್ಥಿನಿಯೆಂಬ ಗರ್ವವೇನಿಲ್ಲ. ಓದಿನ ಜೊತೆಯಲ್ಲಿ ಶೋಭಾಳಿಗೆ ಚಿತ್ರ ಬರೆಯುವುದರಲ್ಲಿ ಆಸಕ್ತಿ. ಕ್ರಮವಾಗಿ ನೃತ್ಯಾಭ್ಯಾಸಕ್ಕೆ ಸಮಯ – ಅವಕಾಶ ಇಲ್ಲದಿದ್ದರೂ, ಶಾಲೆಯ ಕಾರ್ಯಕ್ರಮಗಳಲ್ಲಿ ನೃತ್ಯ ಪ್ರದರ್ಶನಕ್ಕೆ ಮುಂದು. ಕಳೆದ ವರ್ಷದ ಶಾಲಾ ವಾರ್ಷಿಕೋತ್ಸವ ಸಮಾರಂಭದಲ್ಲಿ ಕನ್ನಡದ ವಿದ್ಯಾರ್ಥಿಗಳು ಅಭಿನಯಿಸಿದ ಕೃಷ್ಣದೇವರಾಯ ನಾಟಕದಲ್ಲಿ ಶೋಭಾಳದು ರಾಣಿಯ ಪಾತ್ರ.

ರ್‍ಯಾಂಕ್ ವಿದ್ಯಾರ್ಥಿನಿ ಶೋಭಾಳ ಕುರಿತು ಬರೆಯುವಾಗ, ತ್ಯಾಗರಾಯ ನಗರದ ಕರ್ನಾಟಕ ಸಂಘ ನಡೆಸುತ್ತಿರುವ ವಿದ್ಯಾಸಂಸ್ಥೆಗಳ ಚಟುವಟಿಕೆಗಳ ಬಗ್ಗೆ ಸ್ಥೂಲ ವಿವರಣೆ ನೀಡುವುದು ಸೂಕ್ತವಾಗಿದೆ. ಕರ್ನಾಟಕ ಸಂಘ ಕಳೆದ ಶತಮಾನದ ಮೂವತ್ತರ ದಶಕದಲ್ಲಿ ಮದರಾಸಿನ ಕನ್ನಡಿಗರ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗಿ ಪ್ರಾರಂಭವಾಯಿತು. ಕಳೆದ ಮುವತ್ತಾರು (೧೯೬೭) ವರ್ಷಗಳಿಂದ ಶಾಲೆಗಳನ್ನು ಯಶಸ್ವಿಯಾಗಿ ನಡೆಸುತ್ತಿದೆ. ಇದೇ ರೀತಿ ಕನ್ನಡ ಶಾಲೆ ನಡೆಸುತ್ತಿರುವ ಮತ್ತೊಂದು ಸಂಸ್ಥೆ ಅಯನಾವರಂ ಕನ್ನಡ ಸಂಘ.

ಈಗಿನ ಪ್ರಿನ್ಸಿಪಾಲರಾದ ಶ್ರೀಮತಿ ಕೆ. ಕುಸುಮಾ ಈ ಸಂಸ್ಥೆಗಳನ್ನು ದಕ್ಷ ರೀತಿಯಲ್ಲಿ ನಿರ್ವಹಿಸುತ್ತಿದ್ದಾರೆ. ಸಂಘದ ಪದಾಧಿಕಾರಿಗಳ ಸಂಪೂರ್ಣ ಬೆಂಬಲ-ಸಹಕಾರ ಇವರಿಗಿದೆ. ಬೇರೆ ಕಡೆಗಳಿಂದ ಇಲ್ಲಿಗೆ ವರ್ಗವಾಗಿ ಬರುವ ಕನ್ನಡ ಮಕ್ಕಳಿಗೆ ಮೊದಲ ಆದ್ಯತೆ. ಒಟ್ಟು ಸುಮಾರು ೧೫೦೦ ಮಂದಿ ವಿದ್ಯಾರ್ಥಿಗಳಿದ್ದಾರೆ. ಈ ಪೈಕಿ ಸುಮಾರು ೪೫೦ ಮಕ್ಕಳು ಪ್ರಾಥಮಿಕ ವಿಭಾಗಕ್ಕೆ ಸೇರಿದವರು. ಕೆಲವು ವರ್ಷಗಳಿಂದಲೂ ಈ ಶಾಲೆಯಿಂದ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗುವವರ ಸಂಖ್ಯೆ ಹೆಚ್ಚುತ್ತಿದೆ.

ರ್‍ಯಾಂಕ್ ವಿದ್ಯಾರ್ಥಿಗಳಿಗೆ ಉಚಿತ ಬಸ್‌ಪಾಸ್ ದೊರಕುತ್ತದೆಯಲ್ಲದೆ, ಶಾಲೆಯ ವತಿಯಿಂದ ದಾನಿಗಳು ನೀಡುವ ಬೇರೆ ಬೇರೆ ಪ್ರೋತ್ಸಾಹಕ ಪದಕಗಳು, ನಗದು ಬಹುಮಾನಗಳಿವೆ.

'ಹಚ್ಚೇವು ಕನ್ನಡದ ದೀಪ' ಎಂದು ಬಾಯಿಂದ ಹೇಳದಿದ್ದರೂ, ಶೋಭಾಳಂಥ ವಿದ್ಯಾರ್ಥಿನಿ, ಕರ್ನಾಟಕ ಸಂಘದಂತಹ ಸಂಸ್ಥೆಗಳವರು ತಮ್ಮದೇ ರೀತಿಯಲ್ಲಿ ಕನ್ನಡವನ್ನು ಬೆಳೆಸುತ್ತಿದ್ದಾರೆ. ಇವರಿಗೆ 'ಹೊಸತು' ಅಭಿನಂದನೆಗಳು.

ಕೆ. ಪಿ. ಸ್ವಾಮಿ
ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

# ಅಂಧಕೂಪದತ್ತ ಉನ್ನತ ಶಿಕ್ಷಣ

ಅಂಧಕೂಪ ಎಂತಹ ದುಃಸ್ವಪ್ನವನ್ನು ಸೃಷ್ಟಿಸುತ್ತದೆಂದರೆ ಅದರಲ್ಲಿ ಬಿದ್ದವರಾರೂ ಎಂದೆಂದೂ ಮೇಲೇಳಲಾರರು. ಪುರಾಣ ಕಲ್ಪನೆಯ ಪ್ರಕಾರ ಇಂತಹ ಅಂಧಕೂಪದಲ್ಲಿ ಭೂತ-ಪಿಶಾಚಿಗಳು, ದಾರಿತಪ್ಪಿ ಅಂಡಲೆಯುವ ಬ್ರಹ್ಮ ರಾಕ್ಷಸರು ನಿವಾಸ ಮಾಡುತ್ತಾರೆ. ಇಂದು ಭಾರತ ಸರಕಾರವು ಉನ್ನತ ಶಿಕ್ಷಣದ ಈ ತನಕದ ಧ್ಯೇಯೋದ್ದೇಶ ಮತ್ತು ಪರಿಕಲ್ಪನೆಗಳನ್ನು ಇಂತಹ ಅಂಧಕೂಪದಲ್ಲಿ ತಳ್ಳುತ್ತಿದೆ ಎಂದು ಕವಿತೆಯ ಭಾಷೆಯಲ್ಲಿ ಹೇಳಿದರೆ ಅದು ವಸ್ತುನಿಷ್ಠ ಸತ್ಯವನ್ನು ಸಾಂಕೇತಿಕ ಭಾಷೆಯಲ್ಲಿ ಹೇಳಿದಂತಾಗುತ್ತಿದೆಯೆಂದು ನಾನು ಭಾವಿಸುತ್ತೇನೆ.

ಭಾರತದಲ್ಲಿ ಶಿಕ್ಷಣವು ಪ್ರಾಥಮಿಕವಿರಲಿ, ಉನ್ನತವಿರಲಿ ಅದು ಸ್ವಾತಂತ್ರ್ಯಾನಂತರದ ವರ್ಷಗಳಲ್ಲಿ ಕುಂಟುತ್ತಾ ಕುಂಟುತ್ತಾ ತನ್ನನ್ನು ತಾನು ಸಾವರಿಸಿಕೊಳ್ಳುತ್ತಾ ಒಂದು ಜನತಾಂತ್ರಿಕ ಸ್ವರೂಪವನ್ನು ಹೆಚ್ಚೂ ಕಡಿಮೆ ಪಡೆಯುವ ಹಂತದಲ್ಲಿತ್ತು. ಇನ್ನೊಂದು ಬಗೆಯಲ್ಲಿ ಹೇಳುವುದಾದರೆ ಅದು ಸರಳ, ಮುಕ್ತ ಮತ್ತು ಸೆಕ್ಯೂಲರ್ ಸ್ವರೂಪವನ್ನು ಪಡೆಯುವುದರತ್ತ ಸಾಗುತ್ತಿತ್ತು. ಆದರೆ ಅದರಲ್ಲಿ ವಸಾಹತುಶಾಹಿ ಅಂತಃಸತ್ವಗಳೂ ಇದ್ದುವು. ಸಾಂಸ್ಕೃತಿಕ ಪುನರುತ್ಥಾನದ ಪ್ರವಾಹವೂ ಅದರಲ್ಲಿತ್ತು, ಹಾಗೆಯೇ ಅದರಲ್ಲೊಂದು ಬೌದ್ಧಿಕ, ವೈಚಾರಿಕ, ತಾರ್ಕಿಕ ಮಾನವೂ ಇತ್ತು. ಈ ತರಹದ 'ಶಿಕ್ಷಣ-ಜ್ಞಾನ-ವಿಜ್ಞಾನ'ವು ಮುಖ್ಯವಾಗಿ ಈ ದೇಶದ ಇಲೈಟ್ ಕ್ಲಾಸನ್ನು ಉದ್ಧರಿಸುವ ಲಕ್ಷ್ಯವನ್ನು ಹೊಂದಿದ್ದರೂ, ಅದು ದೇಶದ ಸಾಮಾಜಿಕ, ಸಾಂಸ್ಕೃತಿಕ ಅಂತಃಸತ್ವದ ವೈವಿಧ್ಯತೆಯ ಹೊಳಪನ್ನು ಕಳೆದುಕೊಂಡಿರಲಿಲ್ಲ.

ಆದರೆ ಇತ್ತೀಚಿನ ಐದು ವರ್ಷಗಳಲ್ಲಿ ಅದು ಇದ್ದಕ್ಕಿದ್ದಂತೆಯೇ ಒಂದು ಗುಣಾತ್ಮಕ ಪರಿವರ್ತನೆಗೆ ಒಳಗಾಗುತ್ತಾ ಬಂದಿದೆ. ಈ ಪರಿವರ್ತನೆಯೆಂಬುದು ಭಾರತದ ಪ್ರಭುತ್ವ ಡೈನಮೈಟ್ ಇಟ್ಟು ಆಸ್ಫೋಟಿಸಿ ತಂದಂತಹ ಪರಿವರ್ತನೆ. ಈ ಆಸ್ಫೋಟನೆಯ ಸೈದ್ಧಾಂತಿಕ ಬೇರುಗಳಿರುವುದು ವಿದೇಶಿ ಮೂಲದ ನಾಜೀವಾದಿ, ಫ್ಯಾಸಿಸ್ಟ್‌ವಾದಿ ಅಂಧಕೂಪಗಳಲ್ಲಿ. ಇಲ್ಲಿ ಚಿಗುರೊಡೆದ ಆ ಬಹು ಆಯಾಮೀ ವಿಷವೃಕ್ಷ ಇಂದು ದೇಶದಾದ್ಯಂತ ತನ್ನ ಕಬಂಧ ಬಾಹುರೂಪಿ ಶಾಖೆಗಳನ್ನು ಚಾಚಿದೆ. ಅದರಲ್ಲಿಂದು ನಾನಾ ಬಗೆಯ ವಿಷಫಲಗಳಿವೆ. ಅವುಗಳಲ್ಲಿ ಒಂದು ಬಗೆಯ ವಿಷಫಲವೇ 'ಉನ್ನತ ಶಿಕ್ಷಣ-ಜ್ಞಾನ-ವಿಜ್ಞಾನ'ದ ವಿಶೇಷ ಹೈಬ್ರಿಡ್ ತಳಿ.

ಹೀಗೆ ಅಂಧಕೂಪಕ್ಕೆ ಬಿದ್ದ 'ಉನ್ನತ-ಶಿಕ್ಷಣ-ಜ್ಞಾನ-ವಿಜ್ಞಾನ'ವನ್ನು ಮುಖ್ಯವಾಗಿ ಐದು ಸ್ವರೂಪಗಳಲ್ಲಿ ಈ ಕೆಳಗಿನಂತೆ ವಿಭಾಗೀಕರಿಸಬಹುದು.

೧. ವೇದ ಗಣಿತ
೨. ಜ್ಯೋತಿರ್ವಿಜ್ಞಾನ ಅಥವಾ ವೇದ ಜ್ಯೋತಿಷ್ಯ
೩. ಇತಿಹಾಸದ ವಿಕೃತ ಪರಿಕಲ್ಪನೆ
೪. ಪುರಾತತ್ವ ಇಲಾಖೆಯ ಸಮಾಧಿ
೫. ದೇಶದ, ಹೊರದೇಶದ ಯಾವುದೇ ಪ್ರಗತಿಶೀಲ ವಿಚಾರವಿರಲಿ ಅದರ ಮೇಲೆ ಪ್ರತಿಬಂಧ.

ಈಗ ಒಂದೊಂದಾಗಿ ಗಮನಿಸುವ –

**೧. ವೇದ ಗಣಿತ**

ಗಣಿತಶಾಸ್ತ್ರಕ್ಕೆ ಭಾರತದ ಕೊಡುಗೆ ಮಧ್ಯಯುಗದ ಮುಂಚಿನ ಕಾಲಘಟ್ಟದಲ್ಲಿ ಅಪಾರವಾಗಿತ್ತು ಎಂಬುದರಲ್ಲಿ ಯಾವುದೇ ಸಂಶಯವಿಲ್ಲ. ಸೊನ್ನೆಯ ಪರಿಕಲ್ಪನೆ ಭಾರತದ ಅಮೂಲ್ಯ ಕೊಡುಗೆಯೆಂದು ವಿಶ್ವದಾದ್ಯಂತ ಪಂಡಿತರು ಶ್ಲಾಘಿಸಿರುತ್ತಾರೆ. ಅದು ಭಾರತದ ಮೌಲಿಕ ಆವಿಷ್ಕಾರ. ಆದರೆ ಇದು ಯಾವುದೇ ವೇದದಲ್ಲಾಗಲಿ, ವೇದಾಂಗದಲ್ಲಾಗಲೀ ಇಲ್ಲ. 'ಋಗ್ವೇದದ ೩೬ ಶ್ಲೋಕಗಳು, ಯಜುರ್ವೇದದ ೪೪ ಶ್ಲೋಕಗಳು, ಹಗಲು ರಾತ್ರಿಗಳ ಅವಧಿ, ಶುಕ್ಲಪಕ್ಷ, ಕೃಷ್ಣಪಕ್ಷಗಳು, ಚಾಂದ್ರಮಾನ, ಸೌರಮಾನ ವರ್ಷಗಳು, ತಿಂಗಳುಗಳು, ನಕ್ಷತ್ರಗಳು, ಋತುಗಳು, ತಿಥಿಗಳು' ಇತ್ಯಾದಿ ಸಣ್ಣ ಸರಳ ಲೆಕ್ಕಾಚಾರಗಳನ್ನು ಬಿಟ್ಟರೆ ಮತ್ತಾವುದೂ ಗಣಿತದ ಹತ್ತಿರಕ್ಕೂ ಬರುವುದಿಲ್ಲ. ಸೊನ್ನೆಯ ಸಾಹಿತ್ಯಕ ಉಲ್ಲೇಖಗಳು ಕ್ರಿ.ಶ.ದ ಆರಂಭದ ಕಾಲದಲ್ಲಿ ದೊರೆಯುತ್ತವಲ್ಲದೆ ಅದರ ಮೊದಲ ಶಾಸನೋಲ್ಲೇಖ ದೊರಕುವುದು ಕ್ರಿ.ಶ. ೫೪೯ರಲ್ಲಿ. ಆದಾಗ್ಯೂ ಇದನ್ನು ಕಂಡುಹಿಡಿದ ಪಂಡಿತನಾರು ? ಸಂಶೋಧಕರ ಅನುಮಾನದ ಪ್ರಕಾರ ಕ್ರಿ.ಶ. ೨ನೆಯ ಶತಮಾನದಲ್ಲಿ ಜೀವಿಸಿದ್ದ, ಶೂನ್ಯವಾದದ ಪ್ರವರ್ತಕನಾದ ನಾಗಾರ್ಜುನ ಈ ಶೂನ್ಯದ ಕರ್ತೃ. ಭಾರತೀಯ ಗಣಿತಕ್ಕೆ ಜೈನ ಮುನಿಗಳ ಕೊಡುಗೆಯೂ ಅಪಾರ.

ಪ್ರಾಚೀನ ಗಣಿತವು ನಮಗೆ ದೊರಕುವುದು ವೇದಗಳಲ್ಲಲ್ಲ – ಬದಲಿಗೆ ಆರು ವೇದಾಂಗಗಳಲ್ಲಿ ಒಂದಾದ ಕಲ್ಪಸೂತ್ರಗಳಲ್ಲಿ ಬರುವ ಶ್ರೌತಸೂತ್ರಗಳ ಪರಿಶಿಷ್ಟ ಭಾಗವಾದ ಶುಲ್ಬ ಸೂತ್ರಗಳಲ್ಲಿ. ಇದರ ಕಾಲ ಹೆಚ್ಚೆಂದರೆ ಕ್ರಿ.ಪೂ. ೫ನೆಯ ಶತಮಾನವಿರಬಹುದು. ಮೊದಲೇ ಹೇಳಿದಂತೆ ಸೊನ್ನೆಯನ್ನು ಗಣಿತದಲ್ಲಿ ಉಪಯೋಗಿಸಲು ಕಡಿಮೆಯೆಂದರೆ ಮತ್ತೆ ಆರನೂರು ಏಳನೂರು ವರ್ಷಗಳು ಬೇಕಾಯ್ತು!

ಶುಲ್ಬ ಸೂತ್ರಗಳಲ್ಲಿ ಇದ್ದುದಾದರೂ ಏನು ? ಕೆಲವೊಂದು ನಿಯಮಗಳು. ಆದರೂ ಅದಕ್ಕೆ ಅತ್ಯಂತ ಮಹತ್ವವಿದೆ. ಏಕೆಂದರೆ ಅದು ಭಾರತೀಯ ಗಣಿತದ ಪ್ರಥಮ ಕೃತಿಯೆನ್ನಬಹುದು. ಅದರ ಒಂದು ಉದಾಹರಣೆಯನ್ನು ಕೊಡುವುದಾದರೆ –

'ಅಪಿ ವಾ ಪಂಚದಶ ಭಾಗಾನ್ ಕೃತ್ವಾ ದ್ವಾವುದ್ಧರೇತ್' ಅಂದರೆ, 'ಅಥವಾ (ವೃತ್ತದ ವ್ಯಾಸದ) ಹದಿನೈದು ಭಾಗ ಮಾಡಿ ಅದರಲ್ಲಿ ಎರಡು ಭಾಗ ಕಳೆಯಿರಿ. ಇದರಿಂದ ಸ್ಥೂಲ ರೂಪದಲ್ಲಿ ವರ್ಗದ ಭುಜವು ಪ್ರಾಪ್ತವಾಗುವುದು.'

ಗಮನಿಸಬೇಕಾದ ವಿಚಾರವೆಂದರೆ ಇಲ್ಲಿ ಕಂಡುಕೊಂಡಿರುವ ನಿಯಮಗಳು ಯಜ್ಞವೇದಿಯ ನಿರ್ಮಾಣದ ಸಲುವಾಗಿ ರಚಿಸಲ್ಪಟ್ಟ ಜ್ಯಾಮಿತಿಯ ನಿಯಮಗಳು.

> ಹಿಟ್ಲರನ ನಾಜಿಜಮ್ ಹೇಗಿತ್ತು, ಮುಸಲೋನಿಯ ಫ್ಯಾಸಿಸಮ್ ಹೇಗಿತ್ತು ಎಂದು ಇತಿಹಾಸದಲ್ಲಿ ಓದಿ ಮಾತ್ರ ತಿಳಿದ ನಾವು ಇಂದು ಅದರ ಭಯಾನಕವಾದ ಪ್ರಾಯೋಗಿಕ ಪ್ರದರ್ಶನವನ್ನು ಈ ಪುಣ್ಯಭೂಮಿಯಲ್ಲಿ ಕಾಣುವ ಭಾಗ್ಯವನ್ನು ಪಡೆದುದು ನಮ್ಮ ಹಾಗೂ ನಮ್ಮ ಪೂರ್ವಿಕರ ಕರ್ಮಫಲ ! ಈ ವ್ಯಾಖ್ಯಾನವನ್ನು ತಿರಸ್ಕರಿಸಿ ಕ್ರಿಯಾಶೀಲರಾಗಬೇಕಾದ ಅನಿವಾರ್ಯತೆ ನಮ್ಮ ಮುಂದಿದೆ.

**ಡಾ|| ಜಿ. ಭಾಸ್ಕರ ಮಯ್ಯ**

ಗುಪ್ತರ ಕಾಲದ ಯಾವುದೇ ಶಾಸನಗಳಲ್ಲಿ ಶೂನ್ಯದಿಂದ ಕೂಡಿದ ದಶಮಾಂಶ ಅಂಕ ಪದ್ಧತಿ ಕಂಡುಬರುವುದಿಲ್ಲ. ಭಾರತದ ಪ್ರಖ್ಯಾತ ಪ್ರಥಮ ಗಣಿತಜ್ಞನೆಂದರೆ ಆರ್ಯಭಟ. ಅವನ ಜನ್ಮಕಾಲ ಕ್ರಿ.ಶ. ೪೭೬. ಆತ ವಿಶ್ವದಲ್ಲೇ ಭೂಭ್ರಮಣ ಸಿದ್ಧಾಂತವನ್ನು ಪ್ರತಿಪಾದಿಸಿದ ಮೊದಲ ವ್ಯಕ್ತಿ. ಆತನದ್ದು ನಿಜಕ್ಕೂ ಒಂದು ಮಹತ್ವದ ಕೊಡುಗೆ. ವೇದದಲ್ಲಿ ಭೂಮಿಯನ್ನು 'ಪ್ರತಿಷ್ಠಾ' (ಸ್ಥಿರವಾದುದು) ಎಂದು ಕರೆದುದರಿಂದ ಪುರೋಹಿತವರ್ಗ ಹಾಗೂ ಅದರ ಹಿಡಿತದಲ್ಲಿದ್ದ ನಂತರದ ಎಲ್ಲಾ ಗಣಿತಜ್ಞರು ಆತನ ವಾದವನ್ನು ಕಟುಟೀಕೆಗೆ ಒಳಪಡಿಸಿದರು. ೬ನೆಯ ಶತಮಾನದ ವರಾಹಮಿಹಿರ, ೭ನೆಯ ಶತಮಾನದ ಬ್ರಹ್ಮಗುಪ್ತ ಮೊದಲಾದ ಗಣಿತಜ್ಞರೆಲ್ಲಾ ಆರ್ಯಭಟನನ್ನು ತೀವ್ರ ನಿಂದನೆಗೆ ಒಳಪಡಿಸಿದರು. ಎಲ್ಲಿಯವರೆಗೆಂದರೆ ಮಹಾವೇದಾಂತಿ ಅಪ್ಪಯ್ಯ ದೀಕ್ಷಿತ (೧೫೩೦-೧೬೦೦) ಆತನ ಗಣಿತವನ್ನು ಹೇಯವಾದುದೆಂದು ಕರೆದ. ಯುರೋಪಿನಲ್ಲಿ ವಿಜ್ಞಾನಿಗಳಿಗೆ ಯಾವ ದುಃಸ್ಥಿತಿ ಅಂದು

ಚರ್ಚುಗಳಿಂದಾಯಿತೋ ಅಂತೆಯೇ ಭಾರತದ ಪುರೋಹಿತಶಾಹಿಗಳೂ ಜ್ಞಾನದ ಬೆಳವಣಿಗೆಯನ್ನು ಭಗ್ನಗೊಳಿಸುವಲ್ಲಿ ಕಡಿಮೆ ನಿಸ್ಸೀಮರಾಗಿದ್ದಿರಲಿಲ್ಲ.

ಏನೇ ಇರಲಿ, ಗಣಿತಕ್ಕೆ ಪ್ರಾಚೀನ ಭಾರತದ ಕೊಡುಗೆಯನ್ನು ಶುಲ್ಬ ಸೂತ್ರಗಳಿಂದ ಹಿಡಿದು, ಆರ್ಯಭಟ, ವರಾಹಮಿಹಿರ, ಬ್ರಹ್ಮಗುಪ್ತ, ಭಾಸ್ಕರಾಚಾರ್ಯ ಮೊದಲಾದವರ ಗ್ರಂಥಗಳಲ್ಲಿ ಕಾಣಬಹುದು.

ಇದನ್ನೆಲ್ಲಾ ಬಿಟ್ಟು ಈ 'ವೇದ ಗಣಿತ' ಎಂದು ಯು.ಜಿ.ಸಿ. – ಭಾರತದ ಮಹೋನ್ನತ ಶಿಕ್ಷಣ ಪ್ರಾಧಿಕಾರ ಕರೆಯುವುದು ಯಾವುದನ್ನು? ಯಾವುದನ್ನು ಅದು ವಿಶ್ವವಿದ್ಯಾಲಯಗಳಲ್ಲಿ ಕಲಿಸಲು ಆದೇಶಿಸುತ್ತದೆ ?

ಸತ್ಯಸಂಗತಿಯೆಂದರೆ ವೇದಗಣಿತಕ್ಕೂ ವೇದಕ್ಕೂ ಯಾವುದೇ ಸಂಬಂಧ ಇಲ್ಲ. ಅದರ ಸಂಬಂಧ ಭಾರತೀಯ ಗಣಿತ ಪರಂಪರೆಯೊಂದಿಗಂತೂ ಖಂಡಿತವಾಗಿಯೂ ಇಲ್ಲ.

ಈ ವೇದಗಣಿತವೆಂದು ಕರೆಯಲ್ಪಡುವ ಸಿದ್ಧಾಂತ ಒಂದು ಮೋಸದ ಸಿದ್ಧಾಂತ. ವೇದದಲ್ಲಿ ಯಾವ ಗಣಿತವೂ ಇಲ್ಲ. ನಾಲ್ಕು ವೇದಗಳು, ಅವುಗಳ ಶಾಖೆಗಳು ಹಾಗೂ ಅವುಗಳ ಮೇಲಿನ ವ್ಯಾಖ್ಯಾನಗಳು ಇಂದು ಸಾಕಷ್ಟು ಸಂಶೋಧಿಸಲ್ಪಟ್ಟು ಸುಸ್ಪಷ್ಟವಾಗಿ ಉಪಲಬ್ಧವಿವೆ. ಅವುಗಳಲ್ಲೆಲ್ಲೂ ಇರದ ಈ 'ಗಣಿತ' ಇದೆಯೆಂದು ಯು.ಜಿ.ಸಿ. ಸಾಧಿಸುತ್ತಿರುವುದು ಹೇಗೆ? ವೇದಗಣಿತದ ಹೆಸರಿನಲ್ಲಿ ಇಂದು ಅದು ಕೋಟ್ಯಂತರ ರೂಪಾಯಿಗಳನ್ನು ಖರ್ಚು ಮಾಡಿದೆ. ಆದರೆ ಈ 'ವೇದಗಣಿತ'ವೆಂಬ ಮಹಾನ್ ಸೌಧ ನಿಂತಿರುವುದು ಒಂದು ಭಯಾನಕ ಸುಳ್ಳಿನ ಮೇಲೆ !

ಈ 'ವೇದಗಣಿತ' ಸಿದ್ಧಾಂತದ ಮೂಲಜನಕ ಜಗದ್ಗುರು ಸ್ವಾಮಿ ಶ್ರೀ ಭಾರತೀ ಕೃಷ್ಣ ತೀರ್ಥಜೀ ಮಹಾರಾಜ್. ಇವರು ಪುರಿಯ ಗೋವರ್ಧನ ಮಠದ ಶಂಕರಾಚಾರ್ಯರಾಗಿದ್ದರು. ೧೯೨೫ರಿಂದ (ಅವರು ಪೀಠಾರೋಹಣ ಮಾಡಿದ ಕಾಲ) ಅವರ ಸಾವಿನ (೧೯೬೦) ತನಕ ಈ ವೇದಗಣಿತದ ಹೆಸರಿನಲ್ಲಿ ಆ ಸ್ವಾಮೀಜಿ ಅಲ್ಲಲ್ಲಿ ಪ್ರಾತ್ಯಕ್ಷಿಕೆಗಳನ್ನು ಕೊಡುತ್ತಿದ್ದರು. ಅವರು ಬರೆದ ಪುಸ್ತಕ ೧೯೬೫ರಲ್ಲಿ ಪ್ರಕಟವಾಯಿತು. ಅದರ ಸಂಪಾದಕರು : ಡಾ|| ಎ. ಎಸ್. ಅಗರ್‌ವಾಲ್. ಪುಸ್ತಕದ ಕುರಿತು ಮುನ್ನುಡಿ ಬರೆದವರು ಮಂಜುಳಾ ತ್ರಿವೇದಿ. ಈರ್ವರೂ ಈ ಸ್ವಾಮೀಜಿಯ ಪರಮಭಕ್ತರು.

ಅನಂತರದ ಕಾಲಾವಧಿಯಲ್ಲಿ ಆ ಪುಸ್ತಕ ವೇದಮೂಲದ್ದೆಂದೂ, ಅಥರ್ವವೇದದ ಪರಿಶಿಷ್ಟಕ್ಕೆ ಸೇರಿದುದೆಂದೂ ಅದ್ಭುತ ಪ್ರಚಾರವನ್ನು ಪಡೆಯುತ್ತಾ ಬಂತು. ಗೋಬೆಲ್ಸ್‌ನ ಸುಳ್ಳಿನ ಸಿದ್ಧಾಂತದಂತೆ ಸುಳ್ಳು ಸತ್ಯದ ರೂಪವನ್ನು ಪಡೆಯಿತು. ಸ್ಥಾಪಿತ ಹಿತಾಸಕ್ತಿಗಳಾದ ಕೋಮುವಾದಿಗಳು ಈ ವಿಚಾರದಲ್ಲಿ ಸಾಕಷ್ಟು ಪ್ರಚಾರಾಂದೋಲನ ನಡೆಸಿದರು. ಇಂದು ಭಾರತದ ಫ್ಯಾಸಿಸ್ಟ್ ಪ್ರಭುತ್ವವಂತೂ ಇದರ ಮೇಲೆ ಕೋಟ್ಯಂತರ ರೂಪಾಯಿ ವ್ಯಯಿಸುತ್ತಿದೆ. ವೇದಗಣಿತದ ಹೆಸರಿನಲ್ಲಿ ಹಲವಾರು ಪುಸ್ತಕಗಳು ಪ್ರಕಟವಾಗಿವೆ. ಉತ್ತರ ಪ್ರದೇಶ, ಗುಜರಾತ್ ಸರ್ಕಾರಗಳು ಈ ಗಣಿತವನ್ನು ತನ್ನ ಪಠ್ಯಪುಸ್ತಕಗಳಲ್ಲಿ ಸೇರಿಸಿವೆ. ಈ ಸಂಗತಿಗಳೆಲ್ಲಾ ವೇದದ್ದೇ ಎಂದು ಸಾರಲಾಗಿದೆ.

ಸ್ವಾಮೀಜಿ ಜೀವಂತವಿರುವಾಗಲೇ ಅಂದರೆ ೧೯೫೦ರಲ್ಲಿಯೇ ಈ ದೇಶದ ಸುಪ್ರಸಿದ್ಧ ಗಣಿತಜ್ಞ, ಕೆ. ಎಸ್. ಶುಕ್ಲರವರು ಈ ಕುರಿತು ಸಂಶಯಗ್ರಸ್ತರಾಗಿ ಸ್ವಾಮೀಜಿಯವರನ್ನು ಭೇಟಿಯಾಗಿದ್ದರು. ಅವರು ಹೀಗೆಂದು ಪ್ರಶ್ನಿಸಿದರು; "ಸ್ವಾಮೀಜಿ, ನೀವು ಅಥರ್ವವೇದದ ಪರಿಶಿಷ್ಟವೆಂದು ಹೇಳುವ ಆ ಮೂಲ ಶ್ಲೋಕಗಳನ್ನು ದಯವಿಟ್ಟು ಉದ್ಧರಿಸಿ ಹೇಳುವಿರಾ ?" ಅದಕ್ಕೆ ಸ್ವಾಮೀಜಿ ಈಗ ಉಪಲಬ್ಧವಿರುವ ಗ್ರಂಥಗಳಲ್ಲಿ ಅದು ಇಲ್ಲದಿದ್ದರೂ ತನಗೆ ಅತೀಂದ್ರಿಯ ಜ್ಞಾನದಿಂದ ತಿಳಿದುಬಂತೆಂದು ಉತ್ತರಿಸಿದರು. ಇದನ್ನು ಕೆ. ಎಸ್. ಶುಕ್ಲ ತಮ್ಮ ಗ್ರಂಥದಲ್ಲಿ ವಿವರವಾಗಿ ಬರೆದಿದ್ದಾರೆ. ನಿಜವಾಗಿಯೂ ವೇದಗಣಿತವೆಂದರೆ ಅಥರ್ವವೇದದ ಪರಿಶಿಷ್ಟವಲ್ಲ. ಬದಲಿಗೆ ಭಾರತೀಕೃಷ್ಣ ಸ್ವಾಮೀಜಿಯವರ ಸ್ವಯಂ ಪರಿಶಿಷ್ಟ!

ಆ ಗ್ರಂಥದಲ್ಲಿರುವ ಸೂತ್ರಗಳೂ ಕೂಡ ಸಂದಿಗ್ಧ ಸೂತ್ರಗಳು. ಉದಾ : "ಏಕಾಧಿಕೇನ ಪೂರ್ವೇಣ" (ಅನು : ಹಿಂದಿನಕ್ಕಿಂತಲೂ ಒಂದು ಹೆಚ್ಚಾಗಿ). ಇದನ್ನು ದಶಮಾಂಶಗಳಾದ ೧/೧೯, ೧/೨೯, ೧/೩೯ ಕಂಡುಹಿಡಿಯಲು ಉಪಯೋಗಿಸಲಾಗುತ್ತದೆ ಎನ್ನಲಾಗಿದೆ. ಆದರೆ ಇದೇ ಸೂತ್ರವನ್ನು ೨೫, ೩೫, ೪೫ ಇವುಗಳ ವರ್ಗಗಳನ್ನು ಕಂಡುಹಿಡಿಯಲೂ ಉಪಯೋಗಿಸಲಾಗುತ್ತದೆ. ಅಂದರೆ, ಸೂತ್ರ ಏನೂ ಹೇಳುವುದಿಲ್ಲ. ಅದರ ವಿವರಣೆ ಸ್ವಾಮೀಜಿಯವರ ಆಧುನಿಕ ಗಣಿತದ ಪ್ರಾಥಮಿಕ ಜ್ಞಾನವನ್ನಷ್ಟೇ ತಿಳಿಸುತ್ತದೆ! ಈ ಸೂತ್ರಗಳನ್ನು ಅಧ್ಯಯನ ಮಾಡುವುದು ವಿದ್ಯಾರ್ಥಿಗಳಿಗಂತೂ ಅನಗತ್ಯ. ಗಣಿತಕ್ಕೆ ಬೇಕಾದ ಯಾವ ನಿಗದಿತ ಹೆಜ್ಜೆಗಳನ್ನೂ ಇದು ಹೇಳುವುದಿಲ್ಲ.

ವೇದಗಣಿತದ ಮಹಾತ್ಮೆಯನ್ನು ಸಾರಲು ಎಂತೆಂತಹ ಸುಳ್ಳುಗಳನ್ನು ಹೇಳಲಾಗುತ್ತಿದೆಯೆಂದರೆ ವೇದಗಳಲ್ಲಿ ತ್ರಿಕೋಣಮಿತಿ, ಜ್ಯಾಮಿತಿ ಎಂಬ ಶಬ್ದಗಳಿದ್ದವು ; ಅಲ್ಲದೆ, ವೇದಗಳಿಂದಲೇ ಈ ಶಬ್ದಗಳು ಪ್ರಪಂಚದಾದ್ಯಂತ ಬಳಕೆಯಾದವು ಎಂದೂ ಯು.ಜಿ.ಸಿ. ಪಂಡಿತರು ಉದ್‌ಘೋಷಿಸುತ್ತಾರೆ. ಆದರೆ, ಈ ಶಬ್ದಗಳಿಗೆ ನೂರು ವರ್ಷಗಳ ಇತಿಹಾಸ ಕೂಡಾ ಇಲ್ಲ. ಕಾಶಿಯ ಸಂಸ್ಕೃತ ಕಾಲೇಜಿನ ಗಣಿತ ಜ್ಯೋತಿಷ್ಯ ಪ್ರಾಧ್ಯಾಪಕರಾದ ಪ. ಬಾಪೂದೇವ ಶಾಸ್ತ್ರಿ ಮತ್ತು ಸುಧಾಕರ ದ್ವಿವೇದಿಯವರು ಕೆಲವು ದಶಕಗಳ ಹಿಂದೆ ಭಾಷಾಂತರವೆಂದು ಇವನ್ನು ಪ್ರಯೋಗಿಸಿದ್ದರು. ಹಿಂದೆ ಭಾರತದಲ್ಲಿ 'ಜ್ಯಾಮಿತಿ'ಯ ಅರ್ಥದಲ್ಲಿ ಜ್ಯಾ ಗಣಿತ ಎಂಬ ಶಬ್ದವೂ 'ತ್ರಿಕೋಣಮಿತಿ'ಯ ಅರ್ಥದಲ್ಲಿ 'ಕ್ಷೇತ್ರಮಿತಿ' ಎಂಬ ಶಬ್ದವೂ ಪ್ರಯೋಗದಲ್ಲಿತ್ತು.

ಅಂತೆಯೇ 'ರೇಖಾಗಣಿತ' ಎಂಬ ಶಬ್ದವೂ ಇವರು ಹೇಳುವ ವೇದಗಳದ್ದಲ್ಲ. ಬದಲಿಗೆ, ಭಾರತದಲ್ಲಿ ಈ ಶಬ್ದವು ಮೊತ್ತಮೊದಲಬಾರಿಗೆ ಸವಾಯಿ ಜಯಸಿಂಹ (೧೬೮೬-೧೭೪೩)ನೆಂಬ ರಾಜನ ದರ್ಬಾರಿನಲ್ಲಿದ್ದ ಜೋತಿಷಿ ಪಂಡಿತ ಜಗನ್ನಾಥ ರೂಪಿಸಿದ್ದು. ಆತ ಯೂಕ್ಲಿಡ್‌ನ ಜ್ಯಾಮಿತಿಯ ಅರಬೀ ಅನುವಾದವನ್ನು ಸಂಸ್ಕೃತದಲ್ಲಿ ಭಾಷಾಂತರ ಮಾಡುವಾಗ ಈ ಶಬ್ದವನ್ನು ಪ್ರಯೋಗಿಸಿದ್ದ. ಅದಕ್ಕೂ ಮುಂಚೆ ಈ ಶಬ್ದದ ಅಸ್ತಿತ್ವವೇ ಭಾರತದಲ್ಲಿರಲಿಲ್ಲ. ಆದರೆ ವೇದಗಣಿತದ ಪ್ರಕಾರ ಆ ಶಬ್ದ ವೇದದಲ್ಲೇ ಇದೆ !

**೨. ಜ್ಯೋತಿರ್ವಿಜ್ಞಾನ ಅಥವಾ ವೇದ ಜ್ಯೋತಿಷ್ಯ**

ತರ್ಕಬುದ್ಧಿ ಮತ್ತು ವೈಚಾರಿಕತೆಯ ಮೇಲೆ ಇಂದು ಕೇಂದ್ರ ಶಿಕ್ಷಣ ಖಾತೆ ಮಾರಕ ಹಲ್ಲೆಯನ್ನು ನಡೆಸುತ್ತಿದೆ. ಸಂವಿಧಾನದ ಮೂಲಭೂತ ಕರ್ತವ್ಯಗಳಲ್ಲಿ ಒಂದೆಂದರೆ ವೈಜ್ಞಾನಿಕ ಮನೋಭಾವವನ್ನು ಬೆಳೆಸುವುದು. ಇದನ್ನು ಇಂದು ಗಾಳಿಗೆ ತೂರಲಾಗಿದೆ. ಜಗತ್ತು ಇಂದು ವಿಜ್ಞಾನ ಯುಗದಲ್ಲಿ ದಾಪುಗಾಲು ಹಾಕಿ ಮುನ್ನಡೆಯುತ್ತಿದ್ದರೆ ನಮ್ಮ ಉನ್ನತ ಶಿಕ್ಷಣ ವಿಭಾಗ ನಮ್ಮನ್ನು ಮಧ್ಯಯುಗದತ್ತ ತಳ್ಳುತ್ತಿದೆ! ಇದು ಕಾಲದ ವಿರುದ್ಧ ನಮ್ಮ ಹಿನ್ನಡಿಗೆ. ಯು.ಜಿ.ಸಿ. ಪ್ರಕಾರ Atomic clock, Biological clock, Carbon, Uranium and Potassium dating – ಇವು ಯಾವುದೂ ಪಾಶ್ಚಾತ್ಯರಿಂದ ಶೋಧಿಸಲ್ಪಟ್ಟದ್ದಲ್ಲ! ಕೋಪರ್‌ನಿಕಸ್, ನ್ಯೂಟನ್ ಮತ್ತು ಐನ್‌ಸ್ಟೀನ್ – ಇವರು ಯಾರೂ ಸಂಶೋಧಕರಲ್ಲ. ಕಾಲದ ನಿಜವಾದ ಶೋಧನೆ ಆದುದೇ ವೇದ ಜ್ಯೋತಿಷ್ಯದಲ್ಲಿ! ಆ ಮಹನೀಯರು ಒಂದು ಪಕ್ಷ ಸಂಶೋಧನೆ ಮಾಡಿದ್ದಾರೆಂದುಕೊಂಡರೂ ಅದು ಸಂಪೂರ್ಣವಾಗಿ ಅರ್ಥಪೂರ್ಣ ಅಲ್ಲ. ಜಗತ್ತಿನ, ಭೂಮಿಯ ಸರಿಯಾದ ಕಾಲವನ್ನು ತಿಳಿದುಕೊಳ್ಳಬೇಕಾದರೆ ನೀವು ಮಾಡಬೇಕಾದ್ದೇನೆಂದರೆ ಅದನ್ನು ವೇದಜ್ಯೋತಿಷ್ಯದಲ್ಲಿ ಹುಡುಕಬೇಕು. ಅದು ಮಾತ್ರ ನಿಜವಾಗಿಯೂ ಒಂದು ವಿಜ್ಞಾನ. ಅಮೆರಿಕಾದವರು ಏಳು ದಿನಗಳಲ್ಲಿ ಸೃಷ್ಟಿಯಾಯಿತೆಂಬ ಬೈಬಲ್ ವಾದವನ್ನು ಸರಿಯೆಂದು ವಾದಿಸುವಾಗ ನಾವೇಕೆ ನಮ್ಮ ಪ್ರಾಚೀನ ಸಾಂಸ್ಕೃತಿಕ ಇತಿಹಾಸದೆಡೆಗೆ ಸಾಗಿ ನಮ್ಮದೇ ಜ್ಯೋತಿರ್ವಿಜ್ಞಾನವನ್ನು ಪ್ರಚುರಪಡಿಸಬಾರದು ? – ಎಂಬುದು ಅವರ ವಾದ.

ಭೂ ಭೌತಶಾಸ್ತ್ರಜ್ಞರುಗಳಿಗಿಂತ ನಿಖರವಾಗಿ ನಾವು ಭೂಕಂಪದ ಬಗ್ಗೆ ಭವಿಷ್ಯ ಹೇಳಲು ಸಮರ್ಥರಿರುವಾಗ ಪರಿಸರವಿಜ್ಞಾನದ ಹವಾಮಾನ ವರದಿಗೊ, ಉಪಗ್ರಹ ಮಾಹಿತಿಗೊ ಅಥವಾ ಗಣಿತಾಧಾರಿತ ವಿಜ್ಞಾನಕ್ಕೋ ಏಕೆ ಮೊರೆಹೋಗಬೇಕು ? ಬರೇ ಹವಾಮಾನವೇನು ; ನಾವು ಸ್ಟಾಕ್ ಮಾರ್ಕೆಟ್, ಚುನಾವಣೆಯಲ್ಲಿ ಜಯ, ಮಂತ್ರಿಯಾಗುವ ಸಾಧ್ಯತೆ, ಮಿಲಿಯಾಧಿಪತಿಯಾಗುವ ವಿಚಾರ – ಎಲ್ಲವನ್ನೂ ವೇದಜ್ಯೋತಿಷ್ಯದ ಆಧಾರದ ಮೇಲೆ ಹೇಳಲು ಶಕ್ತರಾಗಿದ್ದೇವೆ – ಇದು ಯು.ಜಿ.ಸಿ. ಉದ್ಘೋಷಣೆ !

ಯು.ಜಿ.ಸಿ. ವಿಶ್ವವಿದ್ಯಾಲಯಗಳಿಗೆ ಕಳುಹಿಸಿದ ಮಾರ್ಗದರ್ಶಿ ಸೂತ್ರಗಳಲ್ಲಿ ಹೀಗೆನ್ನುತ್ತದೆ –

"Vedic Astrology is not only one of the subjects of our traditional and classical knowledge but this is the discipline which lets us to know the events happening on time scale.....

Starting of the courses in vedic astrology in the universities will not only impart the knowledge of the subject to the people but will also add a new dimension for research in the fields of Hindu Mathematics, Vastushastra, Meteorological studies, agricultural science, space science etc."

ಈ ಮಾರ್ಗದರ್ಶಿ ಸೂತ್ರಗಳು ಎಷ್ಟೊಂದು ವಿಕ್ಷಿಪ್ತವಾಗಿವೆಯೆಂದರೆ, ಅದು ಮುಂದುವರಿದು ಹೀಗೆನ್ನುತ್ತದೆ –

"There is an urgent need to rejuvenate the science of vedic astrology in India to allow this scientific knowledge to reach the

society at large and provide opportunities to get this important science even exported to the world."

ವಿಶ್ವವಿದ್ಯಾಲಯಗಳಲ್ಲಿ ಜ್ಯೋತಿರ್ವಿಜ್ಞಾನ ಡಿಗ್ರಿ ಪಡೆದ ನಮ್ಮ ಪಂಡಿತರು, ಪುರೋಹಿತರು, ಇನ್ನು ಮುಂದೆ ಭೂಕಂಪ, ಚಂಡಮಾರುತ ಇತ್ಯಾದಿ ಪ್ರಾಕೃತಿಕ ದುರಂತಗಳ ಬಗೆಗೆ ಭವಿಷ್ಯ ನುಡಿಯುತ್ತಾರೆ! ಹೇಗೆಂದರೆ ಅಹಮದಾಬಾದ್ ಮತ್ತು ಭುಜ್‌ನಲ್ಲಿ ಭೂಕಂಪದಿಂದ ಮನೆಗಳು ನಾಶವಾದುದು ಅವುಗಳ ದುರ್ಬಲ ರಚನೆಗಳಿಂದಾಗಿ ಅಲ್ಲ; ಬದಲಿಗೆ ವಾಸ್ತುಶಾಸ್ತ್ರಕ್ಕೆ ಅನುಸಾರವಾಗಿ ಅವುಗಳನ್ನು ಕಟ್ಟದಿದ್ದುದೇ ಕಾರಣ ! ಎಂತಹ ಅದ್ಭುತ !

ಭಾರತ ಇತಿಹಾಸ ಸಮ್ಮೇಳನದಲ್ಲಿ – ನೊಬೆಲ್ ಪುರಸ್ಕಾರ ಹೊಂದಿದ ಅಮರ್ತ್ಯ ಸೇನ್ ಅವರು ''ಇಂದು ನಮಗೆ ಬೇಕಾಗಿರುವುದು ಮುಕ್ತ ಮನಸ್ಸು, ಪುರಾಣ ನಂಬಿಕೆಯ ಮೂಢಪಥದಿಂದ ಹೊರಬರುವುದು. ಅದನ್ನು ಬಿಟ್ಟು ವಿಜ್ಞಾನವು ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡು ರೂಢಿವಾದಿ ಪರಂಪರೆಗೇ ಜೋತುಬಿದ್ದರೆ ಅದು ಬಂಜೆಯಾಗಿಯೇ ಉಳಿಯುತ್ತದೆ'' ಎಂದುದು ಎಚ್ಚರದ ಮಾತು.

ಪಾಕಿಸ್ತಾನದಲ್ಲಿ ಆದುದೂ ಹೀಗೆಯೇ. ಪ್ರೊ|| ಪರ್ವೇಜ್ ಹುಡ್‌ಬಾಯ್ ತಮ್ಮ ಪುಸ್ತಕದಲ್ಲಿ ಪಾಕಿಸ್ತಾನವು ಹೇಗೆ ವಿಜ್ಞಾನವನ್ನು ಅವನತಿಯತ್ತ ದೂಡಿ ಇಸ್ಲಾಮಿಕ್ ಮೂಲಭೂತವಾದದ ಬೆಳವಣಿಗೆಗೆ ಕಾರಣವಾಯಿತು ಎಂಬುದನ್ನು ವಿವರಿಸಿದ್ದಾರೆ. ಅಲ್ಲಿ ವಿಜ್ಞಾನದ ಅಧ್ಯಾಪಕನಿಗೆ ವಿಜ್ಞಾನಕ್ಕಿಂತ ಕುರಾನಿನ ತಿಳುವಳಿಕೆ ಅತ್ಯಗತ್ಯ !

ಭಾರತದಾದ್ಯಂತ ಎಚ್ಚೆತ್ತ ವಿಜ್ಞಾನಿಗಳು ಯು.ಜಿ.ಸಿ.ಯ ಈ ನಿಲುವಿಗೆ ತೀವ್ರ ಪ್ರತಿರೋಧವನ್ನೊಡ್ಡಿದ್ದಾರೆ. ಯು.ಜಿ.ಸಿ.ಯ ಈ ಸೂತ್ರಗಳು ವಿಜ್ಞಾನದ ಮೂಲಭೂತ ನಿಯಮಗಳ ಮೇಲೆಯೇ ನಡೆಸಿದ ದಬ್ಬಾಳಿಕೆಯೆಂದು ಪ್ರತಿಭಟಿಸಿದ್ದಾರೆ. ಆದರೇನು ಪ್ರಯೋಜನ ? ಫ್ಯಾಸಿಸ್ಟರಿಗೆ ಕಿವಿಗಳಿವೆಯೆ ?

ಭಾರತೀಯ ವಿಜ್ಞಾನ ಅಕಾಡೆಮಿಯ ಪತ್ರಿಕೆ "Current Science"ನಲ್ಲಿ ಹೀಗೆ ಬರೆಯಲಾಗಿದೆ –

"It may be possible to rewrite history; it may even be possible to rewrite the history of sciences : but it is well nigh impossible to completely rewrite science."

ಪೂನಾದ ಅಯೂಕ ನಿರ್ದೇಶಕ ಡಾ|| ಜಯಂತ ನಾರ್ಲೀಕರ್ ಹೇಳುತ್ತಾರೆ –

''ವಿಜ್ಞಾನಕ್ಕೆ ಒಂದು ಶಿಸ್ತಿದೆ. ಊಹೆಗಳೂ ಕೂಡ ಅಲ್ಲಿ ಸುಸ್ಪಷ್ಟವಾಗಿ ಆಧಾರ ಸಹಿತವಾಗಿ ನಿರೂಪಿಸಲ್ಪಡುತ್ತವೆ. ಅದನ್ನು ಜಗತ್ತು ಮುಕ್ತವಾಗಿ ಪರೀಕ್ಷಿಸಬಹುದು. ಆದರೆ ಜ್ಯೋತಿಷ್ಯದ ಊಹೆಗಳು ಭ್ರಾಮಕವಾದವುಗಳು. ಒಬ್ಬೊಬ್ಬ ಜ್ಯೋತಿಷಿಯದು ಒಂದೊಂದು ಊಹೆ. ಸಾವಿರ ಸಿದ್ಧಾಂತ. ಇದನ್ನೊಂದು ವಿಜ್ಞಾನ ಎನ್ನಬಹುದೇ ? ವಿಜ್ಞಾನವು ಕಾಲಪ್ರವಾಹದಲ್ಲಿ ರುಜುವಾತಾದ ಸತ್ಯ. ಆದರೆ ಜ್ಯೋತಿಷ್ಯದ ಭವಿಷ್ಯವಾಣಿಗೆ ಯಾವುದೇ ಆಧಾರವಿಲ್ಲ. ನಾವು ವೈಜ್ಞಾನಿಕವಾಗಿ ಬಗೆಬಗೆಯಾಗಿ ವಾದಗಳನ್ನು ಮಂಡಿಸಿದೆವು. ಜ್ಯೋತಿಷ್ಯ ಅವೈಜ್ಞಾನಿಕ ಎಂದು ಮನದಟ್ಟು ಮಾಡಿಕೊಟ್ಟೆವು. ಆದರೆ ಸರಕಾರ ಹಾಗೂ ಯು.ಜಿ.ಸಿ. ನಮ್ಮ ಮಾತುಗಳನ್ನು ಕೇಳಲು ತಯಾರಿಲ್ಲ.''

ಅವರು ಮತ್ತೂ ಹೀಗೆಂದು ಒತ್ತಾಯಿಸಿದರು – ''ನಿಮಗೆ ಭಾರತೀಯ ಸಂಸ್ಕೃತಿಯ ಬಗ್ಗೆ ಪ್ರೀತಿಯಿದ್ದರೆ ವಿದ್ಯಾರ್ಥಿಗಳಿಗೆ ಆಯುರ್ವೇದ ಕಲಿಸಿ, ಯೋಗ ಕಲಿಸಿ, ವರಾಹ ಮಿಹಿರ, ಭಾಸ್ಕರ, ಬ್ರಹ್ಮಗುಪ್ತ ಇವರ ಗ್ರಂಥಗಳನ್ನು ಅವುಗಳ ಐತಿಹಾಸಿಕ ಮಹತ್ವಕ್ಕಾಗಿ ಅಧ್ಯಯನ ಮಾಡಿಸಿರಿ. ಏಕೆಂದರೆ ಗಣಿತ, ವಿಜ್ಞಾನ ಇಂದು ಅವರ ಕಾಲಕ್ಕಿಂತ ಎಷ್ಟೋ ಮುಂದೆ ಹೋಗಿದೆ. ಜೀವನದ ಸೋಲುಗಳಿಗೆ ನಕ್ಷತ್ರಗಳನ್ನೇಕೆ ದೂರಬೇಕು ? ಉನ್ನತ ಶಿಕ್ಷಣ ಇಲಾಖೆಯಿಂದ ನಾವು ಬಯಸುವುದು ಇದನ್ನೇ ? ಮಾನವ ಜನಾಂಗ ಇದುವರೆಗೂ ಸಂಪಾದಿಸಿದ ಜ್ಞಾನಕ್ಕಿಂತ ಇನ್ನೂ ಹೆಚ್ಚಿನ ಜ್ಞಾನಕ್ಕೆ ಪರಿಶ್ರಮಿಸಬೇಕಾದ, ತಡಕಾಡಬೇಕಾದ ಜವಾಬ್ದಾರಿ ಹೊತ್ತಿರುವ ಉನ್ನತ ಪೀಠ ಎಲ್ಲವನ್ನೂ ಗ್ರಹ ನಕ್ಷತ್ರಗಳ ಮೇಲೆ ಹಾಕಲು ಜನರನ್ನು ಪ್ರೇರೇಪಿಸುವುದು ಎಂಥ ವಿಡಂಬನೆ !''

ಆದರೆ ಯು.ಜಿ.ಸಿ.ಯ ನಿರ್ದೇಶಕ ಹರಿ ಗೌತಮ್ ಹೇಳುತ್ತಾರೆ – "If astrological predictions go wrong, doctors go wrong with their diagnosis

too." ಅದರರ್ಥವನ್ನು ಸರಳವಾಗಿ ಹೇಳುವುದಾದರೆ – if medicine is science so is astrology.

ಜಗತ್ಪ್ರಸಿದ್ಧ ಬ್ರಿಟಿಷ್ ಭೌತಶಾಸ್ತ್ರಜ್ಞ ಸ್ಟೀಫನ್ ಹಾಕಿಂಗ್ ನವದೆಹಲಿಯಲ್ಲಿ ಆಲ್ಬರ್ಟ್ ಐನ್‌ಸ್ಟೀನ್ ಸ್ಮಾರಕ ಉಪನ್ಯಾಸ ನೀಡುವಾಗ ಕೃಷ್ಣರಂಧ್ರಗಳ ವಿಶ್ಲೇಷಣೆ ಮಾಡುತ್ತಾ ಜ್ಯೋತಿಷ್ಯದ ಬಗ್ಗೆ ಹೀಗೆಂದಿದ್ದಾರೆ –

"Most of the scientists don't believe in astrology because it is not consistent with our theories which have been tested by experiment."

ಅವರು ಹೇಳಿದ ಇನ್ನೊಂದು ಮಾತು :

"When it was discovered that earth was not the centre of the universe, astrology became impossible."

**೩. ಇತಿಹಾಸದ ವಿಕೃತ ಪರಿಕಲ್ಪನೆ**

ಭಾರತದಲ್ಲಿ ಪ್ರಜಾಪ್ರಭುತ್ವವನ್ನು ಫ್ಯಾಸಿಸ್ಟ್ ಶಕ್ತಿಗಳು ತಮ್ಮ ನಿಯಂತ್ರಣಕ್ಕೆ ತೆಗೆದು ಕೊಂಡ ನಂತರ ಅವು ಭಾರತದ ಇತಿಹಾಸ ಸಂಶೋಧನಾ ಪರಿಷತ್ತಿನ ಮಹಾನ್ ಇತಿಹಾಸ ಕಾರರನ್ನೆಲ್ಲಾ ತೆಗೆದುಹಾಕಿ ತಮ್ಮ ಕಾರ್ಯಸೂಚಿಗೆ ಅನುಕೂಲವಾದ, ಹೆಸರಿಗೆ ಮಾತ್ರ ಇತಿಹಾಸಕಾರರಾಗಿರುವ ಕೋಮುವಾದಿಗಳನ್ನು ಆ ಸ್ಥಾನಗಳಿಗೆ ತುಂಬಿಕೊಂಡವು. ಅಂತರ್ ರಾಷ್ಟ್ರೀಯ ಖ್ಯಾತಿಯ ರೋಮಿಲಾ ಥಾಪರ್, ಆರ್. ಎಸ್. ಶರ್ಮಾ ಮೊದಲಾದವರ ಪುಸ್ತಕಗಳನ್ನು ಅಮಾನ್ಯಗೊಳಿಸಲಾಯಿತು.

ಇಂದು ಚರಿತ್ರೆಯ ರಚನೆ ಯಾವ ಮಟ್ಟಕ್ಕೆ ಮುಟ್ಟಿದೆಯೆಂದರೆ ಅದರ ಪ್ರಕಾರ ಭಾರತದಲ್ಲಿ ಯಾವೆಲ್ಲಾ - ಏನೆಲ್ಲಾ ಸಂಸ್ಕೃತಿಗಳಿವೆಯೊ ಅವುಗಳೆಲ್ಲವೂ ವೈದಿಕ ಸಾಹಿತ್ಯದಿಂದ ಹುಟ್ಟಿ ಕೊಂಡವು. ಆರ್ಯರು ಹೊರಗಿನಿಂದ ಬಂದವರಲ್ಲ, ಭಾರತದಿಂದಲೇ ಕೆಲವು ಪಂಗಡಗಳು ಹೊರಗೆ ಹೋಗಿ ಅಲ್ಲೆಲ್ಲಾ ಸಂಸ್ಕೃತಿಯ ಹಾಗೂ ನಾಗರಿಕತೆಯ ದೀಪ ಹಚ್ಚಿದರು. ಅವರ ಚರಿತ್ರೆಯ ಪ್ರಕಾರ ಚೀನಾದ ಪ್ರಾಚೀನ ಸಂಸ್ಕೃತಿಯೂ ಭಾರತದ್ದೇ ಕೊಡುಗೆ. ಆರ್ಯ ಜನಾಂಗ ಎಂಬುದೇನಿದೆಯೋ ಅದೇ ಪ್ರಪಂಚದಲ್ಲಿ ಮೊತ್ತಮೊದಲು ಆವಿರ್ಭವಿಸಿದುದು. ಪ್ರಥಮ ಮನುಷ್ಯನ ಆವಿರ್ಭಾವವಾದುದೇ ಈ ಹಿಂದುಸ್ತಾನದಲ್ಲಿ! ವೇದಗಳ ನಾಗರಿಕತೆಯ ಕಾಲ ಎಂಟುಸಾವಿರ ವರ್ಷಗಳಿಗೂ ಹಿಂದಿನದು. ಯಾವುದೇ (ಭಾರತೀಯ) ಹಳೆ ತಲೆಮಾರಿನ ಗಂಭೀರ ಇತಿಹಾಸಕಾರರು ಉದಾ – ಆರ್. ಜಿ. ಭಂಡಾರ್ಕರ್ ಇರಲಿ, ಆರ್. ಸಿ. ಮುಜುಂದಾರ್ ಇರಲಿ – ಈ ತನಕ ಇಂತಹ ಬಾಲಿಶ ಮಾತುಗಳನ್ನು ಹೇಳಿಲ್ಲ. ಈ ಫ್ಯಾಸಿಸ್ಟ್ ಚರಿತ್ರೆಯ ಪ್ರಕಾರ ಮೊದಲ ಮನುಷ್ಯ ಸರಸ್ವತೀ ನದೀ ತೀರದಲ್ಲಿ ಹುಟ್ಟಿದ. ಈ ನದಿಯು ಅವರ ಪ್ರಕಾರ ಕರನಾಲ್ - ಅಂಬಾಲಾ ಜಿಲ್ಲೆ(ಹರ್‍ಯಾಣ)ಯಲ್ಲಿ ಹರಿಯುತ್ತಿತ್ತು. ತಮಾಷೆಯ ಸಂಗತಿಯೆಂದರೆ ಮುರಳಿ ಮನೋಹರ ಜೋಶಿ ಇತಿಹಾಸಕಾರರ ಮೂಲ ಮಾನವ ಜಾತಿಯನ್ನು 'ರಾಮಾಪಿತಿಕಸ್'ನಲ್ಲಿ ಗುರುತಿಸುತ್ತಾರೆ. ಇದು ಮನುಷ್ಯ ಜಾತಿಯ ಪೂರ್ವಜ ಅಲ್ಲವೇ ಅಲ್ಲ, ಬದಲಿಗೆ ಕಾಡುಮನುಷ್ಯ (ಮಂಗ)ನ ಪೂರ್ವಜ !

ಈ ವಿಕೃತ ಇತಿಹಾಸಕಾರರ ಪ್ರಕಾರ ಇಲ್ಲಿಯ ಸಂಸ್ಕೃತಿಗಳೆಲ್ಲಾ ವೇದದಿಂದಲೇ ಹುಟ್ಟಿದವುಗಳಾದ್ದರಿಂದ ದ್ರಾವಿಡ ಮೂಲವೆಂಬುದು ಅವರ ಪ್ರಕಾರ ಒಂದು ಅಸಂಬದ್ಧ ಕಲ್ಪನೆ. ಇದರಿಂದಾಗಿ ದ್ರಾವಿಡರಿಗೆ ಸ್ವತಂತ್ರ ಅಸ್ತಿತ್ವ ಇಲ್ಲವಾದಂತಾಯಿತು ! ಎಲ್ಲಾ ದ್ರಾವಿಡ ಭಾಷೆಗಳಿಗೂ ಸಂಸ್ಕೃತವೇ ಮೂಲ ! ವಿಜ್ಞಾನದಲ್ಲಿ ಏನೆಲ್ಲಾ ಪ್ರಗತಿಗಳು ಸಾಧಿಸಲ್ಪಟ್ಟಿವೆಯೊ ಅವೆಲ್ಲವೂ ಕ್ರಿ.ಪೂ. ೬೦೦೦ ವರ್ಷಗಳ ಹಿಂದೆಯೇ ಆಗಿವೆ. ಈ ದೇಶದಲ್ಲಿ ಏನೆಲ್ಲಾ ಪ್ರಾಚೀನ ಸ್ಮಾರಕಗಳಿವೆಯೋ ಅವೆಲ್ಲವೂ ಹಿಂದೂಗಳ ರಚನೆ. ಉದಾ : ತಾಜಮಹಲ್ ಶಾಹಜಹಾನ್ ಕಟ್ಟಿಸಿದ್ದಲ್ಲ, ಅದು ಮಾನಸಿಂಗ್ ದೊರೆಯ ತೇಜೋಮಹಲ್, ಇಲ್ಲಿಯ ಕೋಟೆ, ಆಗ್ರಾ ಕೋಟೆ ಯಾವುದೂ ಮುಗಲರ ರಚನೆಗಳೇ ಅಲ್ಲ. ಈ ಸರ್ಕಾರಿ ಚರಿತ್ರೆ ಕಾರರ ಪ್ರಕಾರ ನಾವು ವೈಮಾನಿಕ ಶಾಸ್ತ್ರ, ಅಣುಬಾಂಬ್‌ಗಳನ್ನು ಕೂಡ ಬಲ್ಲವರಾಗಿದ್ದೆವು. ಇಂದು ವಿದೇಶಿಯರು ತಮ್ಮದೆಂದು ಹೇಳಿಕೊಳ್ಳುವ ಆವಿಷ್ಕಾರಗಳೆಲ್ಲವೂ ಎಂದೋ ವೇದಗಳಲ್ಲಿ ನಿರೂಪಿತವಾಗಿವೆ.

ಈ ಫ್ಯಾಸಿಸ್ಟರು ''ಹಿಂದೂ ಧರ್ಮ''ವನ್ನು ಕೂಡ ಅಪಾರ್ಥ ಮಾಡಿದ್ದಾರೆ. ಇಲ್ಲಿನ ಧರ್ಮಗಳಲ್ಲಿರುವ ಪ್ಯಾಂಥೆಯಿಸಮ್, ಮೋನೋಥೇಯಿಸಮ್, ಹೆಚ್ಚೇಕೆ ಶಂಕರಾ ಚಾರ್ಯರ ತತ್ವಶಾಸ್ತ್ರಕ್ಕೂ ಇಲ್ಲಿ ಜಾಗ ಇಲ್ಲ. ಗೌತಮ ಬುದ್ಧ ಏನು ಹೇಳಿದ ? ಮಹಾವೀರ ಏನು ಹೇಳಿದ ? – ಏನೂ ಹೇಳಿಲ್ಲ! ಏಕೆಂದರೆ ಎಲ್ಲಾ ತತ್ವಶಾಸ್ತ್ರಗಳನ್ನು ೮೦೦೦ ವರ್ಷಗಳ ಹಿಂದೆಯೇ ಹೇಳಿಯಾಗಿದೆ. ಅಶೋಕನಿಂದಾಗಿ ಬೌದ್ಧ ಧರ್ಮವೂ ವಿಶ್ವವ್ಯಾಪಿ ಧರ್ಮವಾಯಿತು. ಆದರೆ ಈ ಅಶೋಕನಿಗೇ ಅವರ ಇತಿಹಾಸದಲ್ಲಿ ಸ್ಥಾನವಿಲ್ಲ. ಏಕೆಂದರೆ, ಆತ ವೈದಿಕ, ಜೈನ, ಬೌದ್ಧ ಎಲ್ಲವನ್ನೂ ಸಮಾನವಾಗಿ ಕಾಣುತ್ತಿದ್ದ. ಅಹಿಂಸಾವಾದಿಯಾಗಿದ್ದ. ಇವು ಹಿಂದೂವಾದಿಗಳ ದೃಷ್ಟಿಯಲ್ಲಿ ಮಹಾಪರಾಧ.

ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ಆರ್.ಎಸ್.ಎಸ್.ನ ಓರ್ವ ಫ್ರೆಂಚ್ ಪ್ರಿಯಮಿತ್ರ ಹೀಗೆ ಬರೆದಿದ್ದ – 'ಅಶೋಕನ ಅಹಿಂಸೆಯಿಂದಾಗಿ ಭಾರತದಲ್ಲಿ ಎಂತಹ ಕೆಟ್ಟ ಪರಿಸ್ಥಿತಿ ಉಂಟಾಯಿತೆಂದರೆ ಅಲೆಕ್ಸಾಂಡರ್ ಭಾರತದ ಮೇಲೆ ವಿಜಯ ಸಾಧಿಸಿದ.' ಎಂತಹ ದಯನೀಯ ಸ್ಥಿತಿಯೆಂದರೆ ಈ ಲೇಖಕನಿಗೆ ಇತಿಹಾಸದ ಅ ಆ ಇ ಈ ಕೂಡ ಗೊತ್ತಿಲ್ಲ! ಅಲೆಕ್ಸಾಂಡರ್ ಅಶೋಕನಿಗಿಂತ ಬಹಳ ಹಿಂದೆಯೇ ಭಾರತಕ್ಕೆ ಬಂದಿದ್ದ. ಇತಿಹಾಸದ ಮೂಲ ಪಾಠಗಳನ್ನೇ ತಿರಿಚುವ ಈ ವಿಕೃತಿಗೆ ಯಾವ ರೀತಿ ಓರ್ವ ಇತಿಹಾಸದ ಗಂಭೀರ ವಿದ್ಯಾರ್ಥಿ ಸ್ಪಂದಿಸಬಲ್ಲ? ಪ್ರಖ್ಯಾತ ಇತಿಹಾಸಕಾರ ಇರ್ಫಾನ್ ಹಬೀಬ್ ಈ ಕುರಿತು ಹೀಗೆ ಬರೆಯುತ್ತಾರೆ – ''ಇಂಡಿಯನ್ ಎಕ್ಸ್‌ಪ್ರೆಸ್‌ನ ಈ ಬರಹವನ್ನು ನಾನು ಕುತೂಹಲದಿಂದ ಅದಕ್ಕೆ ಬರಬಹುದಾದ ಪ್ರತಿಕ್ರಿಯೆಗಳ ಬಗೆಗೆ ಗಮನಿಸುತ್ತಾ ಇದ್ದೆ. ಆದರೆ, ದುರದೃಷ್ಟ ವೆಂದರೆ ಯಾರೊಬ್ಬರೂ ಇಂಥ ಸುಳ್ಳಿನ ಬಗ್ಗೆ ಪ್ರತಿಕ್ರಿಯೆಯನ್ನೇ ವ್ಯಕ್ತಪಡಿಸಲಿಲ್ಲ.''

ಈ ಜೋಶಿ ಕೃಪಾಪೋಷಿತ ಇತಿಹಾಸದಲ್ಲಿ ಗೌತಮಬುದ್ಧನಿಗೇ ಸ್ಥಾನವಿಲ್ಲವೆಂದ ಮೇಲೆ ಇನ್ನು ಅಶೋಕನಿಗೆ ಹೇಗೆ ಸ್ಥಾನ ದೊರೆಯಬೇಕು ? ಇದೇ ರೀತಿ ಅವರು ಮಧ್ಯಯುಗದ ಇತಿಹಾಸದಲ್ಲಿ ಅಕ್ಬರನನ್ನೂ ತಿರಸ್ಕರಿಸಿದ್ದಾರೆ. ಅವರ ಪ್ರಕಾರ ಆತ ಪ್ರಚ್ಛನ್ನ ಹಿಂದೂ ವೈರಿ !

ಭಾರತೀಯ ವಿದ್ಯಾ ಭವನದವರಿಂದ ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತಹ ಒಂದು ದೊಡ್ಡ ಪ್ರದರ್ಶನವನ್ನು ದಿಲ್ಲಿಯಲ್ಲಿ ಆಯೋಜಿಸಲಾಗಿತ್ತು. ೩೦ ಲಕ್ಷ ರೂ. ವೆಚ್ಚದ ಈ ಬೃಹತ್ ಪ್ರದರ್ಶನದಲ್ಲಿ 'ಸಿಂಧೂ-ಸರಸ್ವತಿ' ನಾಗರಿಕತೆಯನ್ನು ಹಿರಿದಾಗಿ ಚಿತ್ರಿಸಲಾಗಿತ್ತು. ಆದರೆ, ಈ ಪ್ರದರ್ಶನದಲ್ಲಿ ಗಾಂಧಿ, ಟಾಗೋರ್ ಕೂಡ ಕಾಣೆಯಾಗಿದ್ದರು !

ಅತ್ಯಂತ ವಿಲಕ್ಷಣ ಸಂಗತಿಯೆಂದರೆ, ಅಂದು ಯಾರು ಬ್ರಿಟಿಷರಿಗೆ ಮಾಹಿತಿ ಒದಗಿಸುತ್ತಿದ್ದರೋ ಬ್ರಿಟಿಷರನ್ನು ಓಲೈಸುತ್ತಿದ್ದರೋ, ಅವರು ಅಥವಾ ಅವರಂಥವರು ಇಂದು ಅಪ್ರತಿಮ ಸ್ವಾತಂತ್ರ್ಯ ಹೋರಾಟಗಾರರು ! ಓರ್ವ ಮಹಾಮಹಿಮ ೧೯೪೨ರ ಚಳವಳಿಯಲ್ಲಿ ಕ್ರಾಂತಿಕಾರಿ ಹೋರಾಟಗಾರರನ್ನು ಬ್ರಿಟಿಷರಿಗೆ ಹಿಡಿದುಕೊಡಲು ಸಹಕರಿಸಿದ ವ್ಯಕ್ತಿ ತನ್ನ ವಿನಂತಿ ಪತ್ರವನ್ನು ಬ್ರಿಟಿಷ್ ಸನ್ನಿಧಾನಕ್ಕೆ ಸುಂದರವಾದ ಉರ್ದುವಿನಲ್ಲಿ ಬರೆದು ಅದಕ್ಕೆ ಇಂಗ್ಲಿಷ್‌ನಲ್ಲಿ ಸಹಿ ಮಾಡಿದ್ದ! ಇಂದು ಹಿಂದೀ ಉದ್ಧಾರಕ್ಕೆ ಟೊಂಕಕಟ್ಟಿ ನಿಂತ ಆ ಸ್ವಾತಂತ್ರ್ಯ ಹೋರಾಟಗಾರನೇ ನಮ್ಮ ದೇಶದ ಪ್ರಭುತ್ವದ ಉನ್ನತ ಪೀಠವನ್ನು ಅಲಂಕರಿಸಿದವ !

ಇಂಥ ಚರಿತ್ರೆ ನಮ್ಮ ವಿದ್ಯಾರ್ಥಿಗಳಿಗೆ ಇಂದು ಪಠ್ಯಪುಸ್ತಕಗಳು. ಫ್ಯಾಸಿಸಮ್ ತನ್ನ ಮಾರಕ ಆಕ್ರಮಣವನ್ನು ಮೊದಲು ಮಾಡುವುದೇ ಇತಿಹಾಸದ ಮೇಲೆ.

**೪. ಪುರಾತತ್ವ ಇಲಾಖೆಯ ಸಮಾಧಿ**

ಮಾನವ ನಿರ್ಮಿತ ಪುರಾತನ ಅವಶೇಷಗಳನ್ನು ಅನ್ವೇಷಿಸಿ ಅಧ್ಯಯನ ನಡೆಸಿ ಮಾನವ ಇತಿಹಾಸವನ್ನು ವೈಜ್ಞಾನಿಕವಾಗಿ ಸಂಶೋಧಿಸುವ ವಿಜ್ಞಾನದ ಒಂದು ಶಾಖೆಯೇ ಪುರಾತತ್ವಶಾಸ್ತ್ರ. ಭಾರತದಲ್ಲಿ ಈ ವಿಭಾಗಕ್ಕೆ ವಿಶ್ವದಲ್ಲಿಯೇ ಮಹತ್ವದ ಸ್ಥಾನವಿತ್ತು. ೧೭೮೪ರಲ್ಲಿ ಬಂಗಾಳದಲ್ಲಿ ಏಶಿಯಾಟಿಕ್ ಸೊಸಾಯಿಟಿ ಸ್ಥಾಪನೆಯಾಯಿತು. ಅಂದಿನಿಂದ ಈ ಶಾಸ್ತ್ರ ಇಲ್ಲಿ ಬೆಳೆಯತೊಡಗಿತು. ೧೮೬೧ರಲ್ಲಿ ಅಲೆಕ್ಸಾಂಡರ್ ಕನಿಂಗ್‌ಹ್ಯಾಮ್ ತಮ್ಮ ಪುರಾತತ್ವ ಸಂಶೋಧನೆಗಳನ್ನು ನಡೆಸಿ ಅವುಗಳ ವರದಿಗಳನ್ನು ''ಆರ್ಕಿಯಲಾಜಿಕಲ್ ಸರ್ವೇಸ್'' ಎಂಬ ಹೆಸರಿನಲ್ಲಿ ಪ್ರಕಟಿಸುತ್ತಿದ್ದರು. ಅವರ ಪ್ರಯತ್ನದಿಂದಾಗಿ ಈ ವಿಭಾಗಕ್ಕೆ ಭದ್ರಬುನಾದಿ ಪ್ರಾಪ್ತವಾಗಿತ್ತು. ೧೯೦೪ರಲ್ಲಿ ಪ್ರಾಚೀನ ಸ್ಮಾರಕಗಳ ರಕ್ಷಣಾ ಅಧಿನಿಯಮ ಜಾರಿಗೆ ಬಂತು. ಜಾನ್ ಮಾರ್ಶಲ್ ಮತ್ತು ಮಾರ್ಟಿಮರ್ ವ್ಹೀಲರ್ – ತಮ್ಮ ಉತ್ಖನನದ ವೈಜ್ಞಾನಿಕ ಸಾಧನಗಳನ್ನು ಅಭಿವೃದ್ಧಿಪಡಿಸುತ್ತಾ ಬಂದರು. ಪ್ರಾಚೀನ ಸ್ಮಾರಕಗಳು, ಸ್ಥಳಗಳು, ಶಾಸನಗಳು, ಪುರಾತತ್ವ ಸಂಶೋಧನಾ ಮಹತ್ವವುಳ್ಳ ಸ್ಥಾನಗಳು – ಇವುಗಳನ್ನೆಲ್ಲಾ ಅತ್ಯಂತ ಜಾಗರೂಕತೆಯಿಂದ ರಕ್ಷಿಸುವ ಕಠಿಣ ಕಾನೂನುಗಳು ಹಾಗೂ ತತ್‌ಸಂಬಂಧೀ ವ್ಯವಸ್ಥೆ ಜಾರಿಗೆ ಬಂತು. ಇದರಿಂದಾಗಿ ಅಂತಹ ಸ್ಮಾರಕ, ಸ್ಥಳ, ಅವಶೇಷಗಳ ವಿಸ್ತೃತವಾದ ಪಟ್ಟಿಯನ್ನು ಮಾಡಲಾಯಿತು.

ಸ್ವಾತಂತ್ರ್ಯಾನಂತರ ಈ ವಿಭಾಗವು ಸ್ವಾಭಾವಿಕವಾಗಿಯೇ ಭಾರತ ಸರಕಾರದ ಅಧೀನಕ್ಕೆ ಒಳಪಟ್ಟು ವಿಸ್ತೃತವಾಗಿ ಬೆಳೆಯಿತು. ಎ. ಘೋಷ್‌ರವರ ನೇತೃತ್ವದಲ್ಲಿ ಇದು ತನ್ನ ಕಾರ್ಯ ಚಟುವಟಿಕೆಗಳಿಂದಾಗಿ ಪ್ರಪಂಚದ ಗಮನವನ್ನು ಸೆಳೆದು ಗೌರವಕ್ಕೆ ಪಾತ್ರವಾಯಿತು.

ಉತ್ಖನನವೆಂಬುದು ಒಂದು ಅತೀ ಸೂಕ್ಷ್ಮ ಪ್ರಕ್ರಿಯೆ. ಉಪಲಬ್ಧವಾದ ಅವಶೇಷಗಳ ರಕ್ಷಣೆ, ಅವುಗಳ ಕ್ರಮಾಗತ ವರದಿ ಹಾಗೂ ಅವುಗಳ ವಿಶ್ಲೇಷಣೆ – ಇವುಗಳನ್ನು ನಿಯಮಿತವಾಗಿ ಪ್ರಕಟಿಸುವುದು ಈ ವಿಭಾಗದ ಕರ್ತವ್ಯವಾಗಿತ್ತು. ಏಕೆಂದರೆ, ಯಾವುದೇ

ಸ್ಮಾರಕ ಅಥವಾ ಪುರಾತತ್ವದ ಅವಶೇಷ ಕೇವಲ ಒಂದು ದೇಶದ ಸೊತ್ತಲ್ಲ, ಅದು ಜಗತ್ತಿನ ಸೊತ್ತು. ಆದ್ದರಿಂದ ಅವು ಅಂತರ್‌ರಾಷ್ಟ್ರೀಯ ಮಾನದಂಡ ಹಾಗೂ ನೀತಿ ಸಂಹಿತೆಯ ಪ್ರಕಾರ ನಡೆಯಬೇಕಾಗುತ್ತದೆ. ಸ್ಮಾರಕದ ಅವಶೇಷಗಳು ವಿಶ್ವದ ಎಲ್ಲರ ಗಮನಕ್ಕೂ ಅಧ್ಯಯನಕ್ಕೂ ಉಪಲಬ್ಧವಿರಬೇಕು. ಭಾರತದಲ್ಲಿ, ಈ ದಿಸೆಯಲ್ಲಿ ಮಹತ್ವಪೂರ್ಣವಾದ ಕೆಲಸವನ್ನು ಮಾಡಿದವರೆಂದರೆ ಎ. ಘೋಷ್ ಹಾಗೂ ಅನಂತರ ಬಂದ ಪುಣೆಯ ಡೆಕ್ಕನ್ ಕಾಲೇಜಿನ ಎಚ್. ಡಿ. ಸಂಕಾಲಿಯಾ.

ಆದರೆ, ದುಃಖದ ಸಂಗತಿಯೆಂದರೆ ಇತ್ತೀಚೆಗಿನ ದಶಕಗಳಲ್ಲಿ ಈ ವಿಭಾಗ ತನ್ನ ಅಂತಃಸತ್ವವನ್ನೇ ಕಳೆದುಕೊಂಡಿತು. ಉತ್ಖನನದ ವರದಿಗಳು ಕಾಲಕಾಲಕ್ಕೆ ವರದಿಯಾಗುವುದು ನಿಂತಿತು. ಪ್ರಕಟವಾದರೂ ಅದರ ಗುಣಮಟ್ಟ ಅತ್ಯಂತ ಕೆಳದರ್ಜೆಯದಾಗಿತ್ತು. ಈ ವಿಭಾಗದ ವರದಿಗಳ ನಿಯತಕಾಲಿಕಗಳು ವರ್ಷಗಟ್ಟಲೆಯಿಂದ ಬಾಕಿ ಉಳಿಯುತ್ತಾ ಬಂದಿವೆ. ಪುರಾತತ್ವ ಇಲಾಖೆಯ ಸಲಹಾ ಮಂಡಳಿ ಹನ್ನೆರಡು ವರ್ಷವಾದರೂ ಇನ್ನೂ ಸಭೆ ಸೇರಿಲ್ಲ. ೧೯೭೦ರಲ್ಲೆ ಅಯೋಧ್ಯೆಯಲ್ಲಿ ಉತ್ಖನನ ನಡೆಸಲಾಗಿತ್ತು. ಅದರ ವರದಿಯನ್ನು ಇವತ್ತಿಗೂ ಗುಪ್ತವಾಗಿರಿಸಲಾಗಿದೆ. ಉತ್ಖನನ ನಡೆಸಿದ ಬಿ.ಬಿ. ಲಾಲ್ ಅಂದು ಹೇಳುತ್ತಿದ್ದುದೇ ಒಂದು, ಈಗ ಹೇಳುತ್ತಿರುವುದೇ ಒಂದು ! ಕಾಲಕಾಲಕ್ಕೆ ವರದಿ ಪ್ರಕಟವಾಗಿರುತ್ತಿದ್ದರೆ ಈ ಅನುಮಾನಕ್ಕೆ ಎಡೆಯಿರುತ್ತಿತ್ತೆ ?

ಈಗಂತೂ ಈ ವಿಭಾಗದಲ್ಲಿ ವಿಕೃತ ಮನಸ್ಸಿನವರೇ ತುಂಬಿಕೊಂಡಿದ್ದಾರೆ. ಮೇಲಿನ ಆದೇಶವನ್ನನುಸರಿಸಿ ಇವರು ಉತ್ಖನನ ವರದಿಯನ್ನು ತಯಾರಿಸುತ್ತಾರೆ. ಅವಶೇಷಗಳನ್ನು ಸಾರ್ವಜನಿಕರಿಂದ ಮುಚ್ಚಿಡುತ್ತಾರೆ. ಕಪೋಲಕಲ್ಪಿತ ಕಥೆಗಳನ್ನೆ ಇಲಾಖೆಯು ತನ್ನ ಸಂಶೋಧನಾ ವರದಿಯೆಂದು ಪ್ರಚಾರಪಡಿಸುತ್ತಿದೆ.

ಹರಪ್ಪಾದಲ್ಲಿ ಒಂದು ಪುರಾಣ ಕಲ್ಪನೆಯ ಪ್ರಾಣಿಯ ಚಿತ್ರವನ್ನು ಈ ಶಾಸ್ತ್ರಜ್ಞರು 'ಕುದುರೆ' ಎಂದು ಸಾರಿ ಹರಪ್ಪಾ ನಾಗರಿಕತೆಯನ್ನು ವೇದಕಾಲೀನ ಸರಸ್ವತೀ ನದಿ ನಾಗರಿಕತೆಯಾಗಿ ಪರಿವರ್ತಿಸಿದ್ದಾರೆ. ರಾಜಾರಾಮ್ ಮತ್ತು ಡೆವಿಡ್ ಫ್ರಾಲಿಯ ಈ ಕೊಳಕು ಕಂಪ್ಯೂಟರ್ ಕಿತಾಪತಿಯನ್ನು ವಿಟ್ಜೆಲ್ ಬಯಲಿಗೆಳೆದಿದ್ದಾನೆ. ಈ ಪುರಾತತ್ವ ಶಾಸ್ತ್ರಜ್ಞರಿಗೆ ಬಾಬ್ರಿ ಮಸೀದಿಯ ಕೆಳಗೆ ಪರಿಪೂರ್ಣ ರಾಮಮಂದಿರ ಕಾಣಿಸುತ್ತದೆ. ಸಾಕ್ಷಿ ಆಧಾರ ಯಾರಿಗೆ ಬೇಕು ? – ಇವರು ಹೇಳಿದ್ದೇ ವೇದವಾಕ್ಯ. ಇಲ್ಲಿ ವಸ್ತುನಿಷ್ಠ ಜಿಜ್ಞಾಸೆ ಯಾವ ಮೂಲೆಯಲ್ಲೂ ಇಲ್ಲ.

ಉತ್ಖನನ ಇಲಾಖೆ ಮಾಡಿದ ಒಂದು ಘನಕಾರ್ಯವೆಂದರೆ ಸುಪ್ರಸಿದ್ಧ ಅಕ್ಬರನ ಅರಮನೆಯಾದ ಫತೇಪುರ ಸಿಕ್ರಿಯಲ್ಲಿ ಉತ್ಖನನ ನಡೆಸಿದ್ದು! ಬ್ರಿಟಿಷರ ಕಾಲದಲ್ಲಿ ಎಲ್ಲೆಂದರಲ್ಲಿ ಉತ್ಖನನ ನಡೆಸುವಂತಿರಲಿಲ್ಲ. ಅತಿ ಕಠಿಣ ಕಾನೂನು ಅಡಚಣೆಗಳನ್ನು ನಿವಾರಿಸಿಕೊಳ್ಳಲು ಸಾಧ್ಯವಾದಲ್ಲಿ ಮಾತ್ರ ಉತ್ಖನನ ನಡೆಸಲು ಅನುಮತಿ ದೊರಕುತ್ತಿತ್ತು. ಫತೇಪುರ ಸಿಕ್ರಿಯಂತೂ ಅತ್ಯಂತ ಮಹತ್ವದ ಪ್ರಾಚೀನ ಸ್ಮಾರಕ. ಅಕ್ಬರ ಅಥವಾ ಔರಂಗಜೇಬನು ಜೈನ ಮಂದಿರಗಳನ್ನು ನಾಶಮಾಡಲು ಕಾರಣನಿರಬಹುದೇ ಎಂಬುದನ್ನು ಪತ್ತೆ ಹಚ್ಚಲು ಭಾರತೀಯ ಪುರಾತತ್ವ ಇಲಾಖೆ ಇಲ್ಲಿ ಉತ್ಖನನ ನಡೆಸಿ, ಅಂಥ ಮಹತ್ವಪೂರ್ಣ ಸ್ಮಾರಕವನ್ನು ಹಾನಿಗೊಳಿಸಿದೆ.

೧೯೯೪ರಲ್ಲಿ ನಡೆದ ವಿಶ್ವಪುರಾತತ್ವ ಸಮ್ಮೇಳನದಲ್ಲಿ ಭಾರತದ ಈ ಅಕ್ರಮಗಳನ್ನು ತೀವ್ರವಾಗಿ ಖಂಡಿಸಲಾಯಿತು. ಭಾರತದ ಪುರಾತತ್ವ ಇಲಾಖೆಯನ್ನು ಅನೂರ್ಜಿತಗೊಳಿಸುವ ಒತ್ತಾಯವನ್ನೂ ತರಲಾಯಿತು. ಒಟ್ಟಿನಲ್ಲಿ ಗುಳೇಬಿದ್ದು ಹೋದ ಈ ಪುರಾತತ್ವ ವಿಭಾಗ ಭಾರತದ ಫ್ಯಾಸಿಸ್ಟರ ಒಂದು ಶಸ್ತ್ರ ಹಾಗೂ ಅವರ ಕಾರ್ಯತಂತ್ರದ ಒಂದು ಪ್ರಮುಖ ಅಂಗ. ಪ್ರಪಂಚದ ಪುರಾತತ್ವ ಶಾಸ್ತ್ರಜ್ಞರಿಗೆ ಭಾರತದ ಈ ಇಲಾಖೆ ಒಂದು ನಗೆಪಾಟಲಾಗಿದೆ. ಈ ಐತಿಹಾಸಿಕ ದುರಂತ ಭಾರತೀಯರಾದ ನಮಗೆ ಸರ್ವನಾಶದ ಕರೆಗಂಟೆಯೆಂಬುದರಲ್ಲಿ ಯಾವುದೇ ಸಂಶಯವಿಲ್ಲ.

**೫. ಹೊರ ದೇಶದ ಯಾವುದೇ ಪ್ರಗತಿಶೀಲ ವಿಚಾರವಿರಲಿ ಅದರ ಮೇಲೆ ಪ್ರತಿಬಂಧ**

ಇಂದಿನ ಭಾರತ ಎಷ್ಟರತನಕ ಫ್ಯಾಸಿಸ್ಟ್‌ಮಯವಾಗಿದೆಯೆಂದರೆ ಅದಕ್ಕೆ ಸತ್ಯವನ್ನು ಕನಸಿನಲ್ಲಿ ಕಂಡರೂ ಭಯ. ಅದಕ್ಕಾಗಿಯೇ ಅದು ವಿಶ್ವದ ತಜ್ಞರನ್ನು ಯಾವುದೇ ವಿಶೇಷ




..ಆ ಶಿಬಿರಕ್ಕೆ ಹೋಗೋಣ ಅಂದಿ-ದ್ದೀಯಲ್ಲ... ಬೇಗ ಮುಗಿಸಿಬಿಡ್ರಿ...

ಶಾಸ್ತ್ರದ ಬಗ್ಗೆ ಮಾತನಾಡಲು, ಆಹ್ವಾನಿಸಲು ಬಿಡುವುದಿಲ್ಲ. ಅವರಿಗೆ ಅವಕಾಶ ಕೊಡಲಾಗುವುದಿಲ್ಲ.

ಒಂದೆರಡು ಉದಾಹರಣೆಗಳನ್ನು ಕೊಡುವುದಾದರೆ ದೇಶದ ಪ್ರಮುಖ ಉನ್ನತ 'ಶಿಕ್ಷಣ-ಜ್ಞಾನ-ವಿಜ್ಞಾನ' ಕ್ಷೇತ್ರಗಳಿಂದ ಮೊದಲಿದ್ದ ಎಲ್ಲಾ ವಿದ್ವಾಂಸರನ್ನು ಕಿತ್ತುಹಾಕಲಾಗಿದೆ. ಇರ್ಫಾನ್ ಹಬೀಬ್, ಬಿಪನ್ ಚಂದ್ರ, ರೋಮಿಲಾ ಥಾಪರ್ ಮುಂತಾದವರನ್ನು ಅವರು ಸತ್ಯ ಹೇಳುವ ಪಾಪಿಗಳೆಂದು ಪರಿಗಣಿಸಿ ಅವರನ್ನು ತಮ್ಮ ತಮ್ಮ ಹುದ್ದೆಗಳಿಂದ ಕಿತ್ತೊಗೆಯಲಾಗಿದೆ. ಇಂದು ಆ ಎಲ್ಲಾ ವಿಭಾಗಗಳಲ್ಲಿ ಪ್ರಭುತ್ವದ ಬಾಲಬಡುಕರೇ ತುಂಬಿಕೊಂಡಿದ್ದಾರೆ.

ಕೇಂದ್ರ ಗೃಹ ಖಾತೆಯಿಂದ ಗುಪ್ತ ಮಾರ್ಗದರ್ಶಿ ಸೂತ್ರಗಳನ್ನು ವಿಶ್ವವಿದ್ಯಾಲಯಗಳಿಗೆ ಕಳುಹಿಸಲಾಗಿದೆ. (om. No. 25022/40/97/F. IV). ಅದರ ಪ್ರಕಾರ ವಿದೇಶೀ ತಜ್ಞರು "should not be generally considered to attend conferences of political, semi-political, communal or religious nature."

ಯಾವುದೇ ದೇಶದ ವಿದ್ವಾಂಸರು ಯಾವುದೇ ವಿಚಾರದ ಗೋಷ್ಠಿಗೆ ಸಂಬಂಧಿಸಿ ಭಾರತಕ್ಕೆ ಬರುವುದಿದ್ದಲ್ಲಿ ಗೃಹ ಖಾತೆ ಮತ್ತು ವಿದೇಶಾಂಗ ಖಾತೆಯ ಪೂರ್ವಾನುಮತಿಯನ್ನು ಪಡೆಯುವುದು ಅತ್ಯಗತ್ಯ.

ಹೀಗಾಗಿ ತಮಿಳಿನ "Temples : Myths : Sacrificial Marriage in the South Indian Saiva Tradition" ಎಂಬ ವಿದ್ವತ್‌ಪೂರ್ಣ ಪುಸ್ತಕವನ್ನು ಬರೆದ ಡೇವಿಡ್ ಶುಲ್ಮಾನ್‌ಗೆ ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಪ್ರಬಂಧ ಮಂಡನೆಗೆ ಅವಕಾಶ ಕೊಡಲಾಗಲಿಲ್ಲ.

ಅಂತೆಯೇ ಪೆಕಿಂಗ್ ಯೂನಿವರ್ಸಿಟಿಯ ಶುಕ್ಸಿಯಾಂಗ್ ಲಕ್ಸೋ ವಿಶ್ವವಿದ್ಯಾಲಯದಲ್ಲಿ ಭಾಗವಹಿಸಬೇಕಾದ ಸಂದರ್ಭದಲ್ಲಿಯೂ ಇಂತಹುದೇ ತಡೆಯಾಜ್ಞೆ ಬಂತು.

''ಅವರು ಸೆಮಿನಾರಿನಲ್ಲಿ ಮೌನವಾಗಿ ಕುಳಿತು ಭಾಷಣಗಳನ್ನು ಕೇಳಬಹುದು. ಆದರೆ ಎದ್ದುನಿಂತು ಮಾತನಾಡುವಂತಿಲ್ಲ. ಹಾಗೆ ಮಾಡಿದಲ್ಲಿ ಫಾರಿನರ್ಸ್ ಆ್ಯಕ್ಟ್ ಹಾಗೂ ವೀಸಾ ರೂಲನ್ನು ಅತಿಕ್ರಮಣ ಮಾಡಿದಂತಾಗುತ್ತದೆ'' ಎಂದು ಗೃಹಖಾತೆಯ ಕಾರ್ಯದರ್ಶಿ ಎಸ್. ಕೆ. ದಾಸ್ ಹೇಳಿದ್ದಾರೆ.

ಇದರರ್ಥ, ಸತ್ಯ ಹೇಳುವ ಯಾವ ಹೊರಗಿನವರೂ ಇಲ್ಲಿಗೆ ಬರಬಾರದು. ಇಲ್ಲಿಯವರು ಎಲ್ಲಾದರೂ ಸತ್ಯ ಹೇಳಿದರೆ ಅವರ ಶಿರಚ್ಛೇದ ಮಾಡಲಾಗುವುದು. ತುರ್ತು ಪರಿಸ್ಥಿತಿಯನ್ನು ಮಾತ್ರ ನಾವು ಭಯಾನಕ ಎಂದು ತಿಳಿದಿದ್ದೆವು. ಆದರೆ, ಇದು ಏನು ?

ಖ್ಯಾತ ಇತಿಹಾಸಕಾರ ಡಿ. ಎನ್. ಝಾ ಅವರ ''ಭಾರತದಲ್ಲಿ ಗೋಹತ್ಯೆ'' ಪುಸ್ತಕವನ್ನು ಮುಟ್ಟುಗೋಲು ಹಾಕಲಾಯಿತು. ದೇಶದ ಗಣ್ಯ ಪ್ರಕಾಶನ ಸಂಸ್ಥೆ ಮೋತಿಲಾಲ್ ಬನಾರಸಿದಾಸ್ ಪ್ರಕಟ ಮಾಡಿದ ಕೋರ್ಟ್‌ರೈಟ್ ಅವರ ಅತ್ಯಂತ ಗಂಭೀರ ಶಾಸ್ತ್ರೀಯ ಮತ್ತು ಆ ಕ್ಷೇತ್ರದಲ್ಲಿ ಈ ತನಕ ರಚಿಸಲ್ಪಡದ ವಿದ್ವತ್‌ಪೂರ್ಣ ಕೃತಿ – "Ganesha : Lord of Obstacles – Lord of Beginnings"ವನ್ನು ಪ್ರತಿಬಂಧಿಸಿ ಆ ಪ್ರಕಾಶಕ ಕ್ಷಮೆ ಯಾಚಿಸುವಂತೆ ಸರ್ಕಾರ ಮಾಡಿತು. ಅಂಗಡಿಗಳಲ್ಲಿ ಮಾರಾಟಕ್ಕಿದ್ದ ಎಲ್ಲಾ ಪುಸ್ತಕಗಳನ್ನು ಮುಟ್ಟುಗೋಲು ಹಾಕಿತು. ಹಾಗಿದ್ದರೆ, ಆ ಪುಸ್ತಕದಲ್ಲಿದ್ದ ತಪ್ಪೇನು ? ಅದರ ಮುಖಪುಟದಲ್ಲಿ ಪ್ರಕಟವಾದ ಪ್ರಾಚೀನ ಕಾಲದ ಕಂಚಿನ ಗಣಪತಿ ವಿಗ್ರಹದ ಲಿಂಗ ಭಾಗ ತೋರುತ್ತಿತ್ತು. ಇದು ಗಣಪತಿಗೆ ಅವಮಾನ, ಹಿಂದೂ ಸಂಸ್ಕೃತಿಗೆ ಅವಮಾನ ಎಂದು ಆ ಮಹಾನ್ ಹಿಂದೂವಾದಿಗಳು ಕೃತಿಯನ್ನು ಪ್ರತಿಬಂಧಿಸಿದರು.

ಹಿಟ್ಲರನ ನಾಜಿಜಮ್ ಹೇಗಿತ್ತು, ಮುಸಲೋನಿಯ ಫ್ಯಾಸಿಸಮ್ ಹೇಗಿತ್ತು ಎಂದು ಇತಿಹಾಸದಲ್ಲಿ ಓದಿ ಮಾತ್ರ ತಿಳಿದ ನಾವು ಇಂದು ಅದರ ಭಯಾನಕವಾದ ಪ್ರಾಯೋಗಿಕ ಪ್ರದರ್ಶನವನ್ನು ಈ ಪುಣ್ಯಭೂಮಿಯಲ್ಲಿ ಕಾಣುವ ಭಾಗ್ಯವನ್ನು ಪಡೆದುದು ನಮ್ಮ ಹಾಗೂ ನಮ್ಮ ಪೂರ್ವಿಕರ ಕರ್ಮಫಲ! ಈ ವ್ಯಾಖ್ಯಾನವನ್ನು ತಿರಸ್ಕರಿಸಿ ಕ್ರಿಯಾಶೀಲರಾಗಬೇಕಾದ ಅನಿವಾರ್ಯತೆ ನಮ್ಮ ಮುಂದಿದೆ.

■ ಜಿ. ಭಾಸ್ಕರ ಮಯ್ಯ
ಹಿಂದಿ ಪ್ರಾಧ್ಯಾಪಕರು, ಡಾ॥ ಭಂಡಾರ್ಕಾರ್ ಕಾಲೇಜು, ಕುಂದಾಪುರ

# ಗೋತ್ರ ಪದ್ಧತಿಯ ವೈಜ್ಞಾನಿಕ ಮತ್ತು ಸಮಾಜಶಾಸ್ತ್ರೀಯ ವಿಶ್ಲೇಷಣೆಗಳು

**ಈ**ಚೆಗೆ ಬಹಳ ತೀವ್ರಗತಿಯಲ್ಲಿ ಪ್ರಕಾಶಗೊಳ್ಳುತ್ತಿರುವ ಜೀವಶಾಸ್ತ್ರ, ಜೀವವಿಕಾಸ ವಿಜ್ಞಾನ, ಸಂತತಿ ವಿಜ್ಞಾನ ಇವುಗಳನ್ನು ಪರಿಶೀಲಿಸಿದಾಗ ಒಂದು ಸಮುದಾಯದಲ್ಲಿ ಆಂತರಿಕ ವಿವಾಹ ಸಂಬಂಧದ ನಿಷೇಧ ಹೇಗೆ ಮತ್ತು ಏಕೆ ಉದಯಿಸಿರಬೇಕೆಂಬ ಸುಳಿವು ಸಿಕ್ಕುತ್ತದೆ. ಗಂಡುಹೆಣ್ಣು ಜೋಡಿಗಳಿಂದ ನಿಃಸ್ವಾರ್ಥ ಕುಟುಂಬ ಪರಿಪಾಲನೆ, ಅನ್ಯೋನ್ಯ ದಾಂಪತ್ಯ, ಅವಿಭಕ್ತ ಕುಟುಂಬದೊಳಗಣ ಸಂಘಜೀವನದ ಸಹಕಾರ ಮತ್ತು ನಿರ್ವಹಣೆ, ಪರಿವಾರದ ಏಳಿಗೆಗಾಗಿ ತಮ್ಮ ಎಲ್ಲ ಸುಖಗಳನ್ನು ತ್ಯಜಿಸಿ ದುಡಿದು ಸಾಯುವ ಆಚರಣೆ, ಆಪ್ತಸಂಬಂಧಿ ಮತ್ತು ಸಹಚರರೊಳಗಣ ಸ್ನೇಹ ಮತ್ತು ನಿಷ್ಕಾಮ ಪ್ರೇಮ ಇತ್ಯಾದಿ ಪಕ್ಷಿಪ್ರಾಣಿಗಳ ಗುಣಗಳು ಈಗಷ್ಟೆ ಗುಣಗಳು; ಇವು ನರಜನ್ಮವನ್ನು ಸಾರ್ಥಕ ಮಾಡಿಕೊಳ್ಳು ವುದಕ್ಕೆ ದೇವರು ತಮಗೆ ಕೊಟ್ಟಿರುವ ಅದ್ಭುತ ಸದ್ಗುಣಗಳೆಂದು ಬಹಳ ಜನ ಭ್ರಮಿಸುತ್ತಾರೆ. ಲಕ್ಷಾಂತರ ವರ್ಷಗಳ ಹಿಂದೆಯೇ ಇಂತಹ ಸಹಜೀವನ ಮತ್ತು ಪರೋಪಕಾರಿ ವರ್ತನೆಗಳು ಜೀವಿಲಕ್ಷಣಗಳಾಗಿ ಬೆಳೆದಿದ್ದವು. ಇವು ಜೀವ ವಿಕಾಸದ ಲಕ್ಷಲಕ್ಷ ವರ್ಷಗಳ ಮಹಾಪ್ರವಾಹದ ಸಹಸ್ರ ಧಾರೆಗಳಲ್ಲಿ, ಅಲ್ಲಿ ಇಲ್ಲಿ ಮೊದಲ ಬಾರಿಗೆ, ನಂತರ ಬಹಳ ಕಡೆ ಗಳಲ್ಲಿ ಮತ್ತೆ ಮತ್ತೆ, ಕಾಣಿಸಿಕೊಂಡವು; ಪ್ರಯೋಗಶೀಲವಾಗಿ ವಿಸ್ತಾರಗೊಂಡು ಕ್ರಮೇಣ ಸಾರ್ಥಕತೆಯ ಘಟ್ಟವಾಯಿತು.

ಈ ಎಲ್ಲ ಗುಣಗಳಿಗೆ ಮೂಲಾಧಾರವಾದ ಲೈಂಗಿಕ ಸಂಬಂಧಗಳು ಮತ್ತು ವರ್ತನೆಗಳು, ಇವಕ್ಕೆ ಜೋಡಿಯಾದ ಪ್ರಜೋತ್ಪತ್ತಿ ವಿಧಾನಗಳು ಈಗಲೂ ಪ್ರಯೋಗಶೀಲವಾಗಿ ಶೀಘ್ರಗತಿಯಲ್ಲಿಯೆ ವಿಕಾಸಗೊಳ್ಳುತ್ತಿವೆ. ಈ ಲೈಂಗಿಕ ಮಹಾಪ್ರಕ್ರಿಯೆಯ ವಿವಿಧ ರೀತಿಗಳಲ್ಲಿ ರೂಢಿಗಳಲ್ಲಿ ನಿಯಮಗಳಲ್ಲಿ ಬಹಳಷ್ಟು, ಕೆಲವು ಲಕ್ಷ ವರ್ಷಗಳಷ್ಟು ಹಳೆಯ ಬುನಾದಿಯವು. ಈಗಿನ ಮಾನವ ಸಮಾಜಗಳ ಸ್ಥಿತಿಗತಿಗಳಿಗೆ ಇವುಗಳು ಹಿತಕರವೊ ಅಲ್ಲವೊ ಎಂಬ ವಿಷಯವನ್ನು ಬದಿಗಿಟ್ಟು, ಈ ಮಾತನ್ನು ಹೇಳಬಹುದು: ಈ ಗುಣರಾಶಿಗಳೆಲ್ಲ ಲಕ್ಷಾಂತರ ವಿವಿಧ ಜೀವಿಗಳಲ್ಲಿ ವಿಧವಿಧವಾಗಿ ಸುಧಾರಣೆಗೊಳ್ಳುತ್ತಿದ್ದು, ಅಂತಹ ಪ್ರತಿಯೊಂದು ಜೀವಿವರ್ಗದ ತಾತ್ಕಾಲಿಕ ಪರಿಸ್ಥಿತಿಗೆ ಮತ್ತು ಸ್ಥಳೀಯ ಪರಿಸರಕ್ಕೆ ಉಂಟಾಗುತ್ತಿದ್ದ ಸಂಘರ್ಷಗಳಿಗೆ, ಆಗಿನ ಒಂದು ತತ್ಕಾಲದ ಉತ್ತಮ ಪರಿಹಾರವಾಗಿ ಮೂಡಿಬಂದವೇ ಆಗಿವೆ. ಆಗ ಆ ಪರಿಹಾರಕ ಗುಣಗಳು ಪ್ರಯೋಗಾತ್ಮಕವಾಗಿ ಸಂತತಿವೃದ್ಧಿಯ ಮಹಾಧ್ಯೇಯವನ್ನು ಅರಿವಿಲ್ಲದವರಿಂದಲೂ ವರ್ತನೆಗೊಂಡು ಬಂದಿದ್ದರಿಂದಲೆ, ಆ ಅಳವಡುಕ ಜೀವಿಗಳು ಈವರೆಗೂ ಉಳಿದುಕೊಂಡು ಬಂದಿರುವುವು; ಹಾಗೆಯೆ ಮಾನವ ಮುಂತಾದ ಈ ಪ್ರಾಣಿಗಳು ಈಚೀಚಿನವರೆಗೂ ಮಂದಗತಿಯಲ್ಲಿಯೆ, ನೈಸರ್ಗಿಕವಾಗಿಯೆ ವಿಕಸಿಸುತ್ತಿರುವವು.

> **ಜಗತ್ತಿನೆಲ್ಲೆಡೆ ಪುರಾತನ ಬುಡಕಟ್ಟು ತಂಡಗಳಲ್ಲಿ ರಕ್ತಸಂಬಂಧದ ಗಂಡು ಹೆಣ್ಣು ಜೋಡಿಗಳ ಕೂಟ ಮತ್ತು ಮದುವೆಗಳ ಪದ್ಧತಿಗಳಲ್ಲಿ ಕೆಲವಾದರೂ ನಿಷೇಧಗಳಿವೆ. 'ಸಂಬಂಧಿಗಳ ಕೂಟ ಸಂತತಿಯ ಆರೋಗ್ಯಕ್ಕೆ ಹಿತಕರವಲ್ಲ' ಎನ್ನುವ ಅರಿವು ಮೂಡಿರದ ಸಂದರ್ಭ ಅದು. ಈಗಲೂ ಹಳೆಯ ನಂಬಿಕೆಗಳ ಕಾರಣಕ್ಕಾಗಿ, ಈ ನಿಜಾಂಶವನ್ನು ನಿರಾಕರಿಸುವವರೂ ಇದ್ದಾರೆ. ಹೀಗಿರುವಾಗ ಹಿಂದಿನ ಆದಿವಾಸಿ ಸಮಾಜಗಳಲ್ಲಿ ಈ ಪ್ರವೃತ್ತಿ ಉಂಟಾದದ್ದು ಹೇಗೆ ಮತ್ತು ಏಕೆ ?**

**ದೈವಿಕಮತಗಳ ಪಾತ್ರ ಮತ್ತು ಪ್ರಭಾವ**

ಬಹುಶಃ ಈ ವಿಚಾರವನ್ನು ಯಾವುದೇ ದೈವಿಕಮತೀಯರೂ ಒಪ್ಪಿಕೊಳ್ಳುವುದಿಲ್ಲ, ದೈವಸೃಷ್ಟಿವಾದವನ್ನು ಅಕ್ಷರಶಃ ನಂಬಿರುವವರಿಗಂತು ಇದನ್ನು ಒಪ್ಪುವುದು ಅಸಾಧ್ಯ. ಮಾನವನ ಸೃಷ್ಟಿಯ ನಂತರವೆ ಪ್ರಾಣಿಪಕ್ಷಿಗಳ ಸೃಷ್ಟಿಯಾಯಿತೆಂದು, ವಿವಿಧ ಜಂತು, ಕೀಟ, ಪ್ರಾಣಿ, ಪಕ್ಷಿ ಮತ್ತು ಮಾನವರಿಗೆ ಎಂತಹ ಪರಸ್ಪರ ಸಂಬಂಧಗಳೂ ಇಲ್ಲವೆಂದು ನಂಬಿದವರಿಗೆ ಈ ವಾದಗಳು ಬೇಕಾಗಿಯೆ ಇಲ್ಲ. ಸಕಲಸದ್ಗುಣಗಳು ಮಾನವಜನ್ಮಜಾತರಿಗೆ, ಯೋಗ್ಯತೆಗೆ ಅನುಸಾರವಾಗಿ, ದೈವದತ್ತವಾದುದೆಂದುಕೊಂಡಿರುವವರಿಗೆ ಯಾವ ಪ್ರಶ್ನೆಗಳೂ ಏಳುವುದೇ ಇಲ್ಲ. ಯಾವುದೇ ಕಾರಣಕ್ಕಿದ್ದರೂ, ದೈವಿಕಮತಗಳು ತಮ್ಮ ಪವಿತ್ರ ನೀತಿ ಧರ್ಮಗಳೆಂದು ಅನುಯಾಯಿಗಳ ಮದುವೆಗಳ ಮೇಲೆ ಹಾಕಿದ ಕಟ್ಟುಪಾಡುಗಳು ದೀರ್ಘಕಾಲದಲ್ಲಿ ಬಹಳಷ್ಟು ಪರಿಣಾಮಗಳನ್ನುಂಟುಮಾಡಿವೆ.

ಚರಿತ್ರೆಯಲ್ಲಿ ನಮಗೆ ರೂಢಿಗ್ರಸ್ತವಾಗಿರುವ ಅಲ್ಪಕಾಲದ ಮತ್ತು ಸೂಕ್ಷ್ಮದರ್ಶನದ ಸಂಕೋಚಗಳನ್ನು ಕಳಚಿ, ವಿಜ್ಞಾನದ ವಿಶಾಲ ದೃಷ್ಟಿಯಿಂದ ನೋಡಿದಾಗ, ಚರಿತ್ರೆಯ ಬುನಾದಿ ಜೀವವಿಜ್ಞಾನದಲ್ಲಿ ಹುದುಗಿರುವುದು ಕಾಣುತ್ತದೆ. ಆದಿಮಾನವ ತನ್ನ ಸಂಘಜೀವನದ ಜೀವಿ ಲಕ್ಷಣವನ್ನು, ವಿಕಾಸದ ತಿರುವೊಂದರಲ್ಲಿ, ಬುಡಕಟ್ಟು ಕುಲಗಳಾಗು ವುದಕ್ಕೆ ಪ್ರಯೋಗಿಸಿದ. ಆಗಲೆ ಅವನಲ್ಲಿದ್ದ ಅಲ್ಪಸ್ವಲ್ಪ ಅರಿವು, ಮಾಹಿತಿ, ಕಲೆ, ಆಯುಧಾಭ್ಯಾಸ, ಕದನಪಟುತ್ವ ಇವುಗಳ ಜೊತೆಗೆ, ದೈವಗಳನ್ನು ಕುರಿತ ಕಾವ್ಯಮಯ ಊಹೆ ಮತ್ತು ಕಟ್ಟುಕತೆ ಮುಂತಾದವುಗಳ ಸಂಕೀರ್ಣ ಮಿಶ್ರಣ, ಒಂದು ಸಂಗ್ರಹಿತ ಭಂಡಾರವಾಗಿ ಮನೋ ಶಕ್ತಿಯನ್ನು ಉಪಯೋಗಿಸಬಲ್ಲ ಸಾಧನವಾಯಿತು. ಈ ಮಿಶ್ರಭಂಡಾರ ಸುದೀರ್ಘ ಕಾಲದಲ್ಲಿ ಜನಶಕ್ತಿಯನ್ನು ನಿಯಂತ್ರಿಸಬಲ್ಲ ಶಸ್ತ್ರವಾಗಿ ರೂಪಗೊಂಡಾಗಲೆ ಆಯಾ ತಾಂಡೆಯಲ್ಲಿಯೇ ಒಂದೊಂದು ಸಂಸ್ಕೃತಿಯಾಗಿ ನಿಲ್ಲ ತೊಡಗಿತು. ಇಂತಹ ಸಂಸ್ಕೃತಿಗಳು ಸಾವಿರಾರು ಸಂಖ್ಯೆ ಗಳಲ್ಲಿ ತಾಂಡೆ ತಂಡಗಳಲ್ಲಿ ಬಿಡಿ ಬಿಡಿಯಾಗಿ ಹುಟ್ಟಿ ಸತ್ತು ನಿರ್ನಾಮವಾಗುತ್ತಿದ್ದವು. ಆದರೆ ಅಂತಹ ಭಿನ್ನ ಭಿನ್ನ ಸಂಸ್ಕೃತಿಗಳ ಹಿರಿತಂಡಗಳು ಒಂದರೊಡನೊಂದು ಸೆಣಸಿ ಬೆರೆತಾಗ, ಸಂಸ್ಕೃತಿಗಳ ನಿಜಾಂಶಗಳು ಬೆರೆತು ಉತ್ತಮ ಗೊಂಡು ಬೆಳೆಯುತ್ತಿದ್ದವು; ವಿಜಯಿತಂಡದ ದೈವಿಕಾಂಶಗಳು ಎರಡೂ ತಂಡಗಳ ದೈವಿಕಾಂಶಗಳಾಗಿ ಬಲಗೊಳ್ಳುತ್ತಿದ್ದವು.

ಇದೇ ಮಹಾವಿಕಾಸದ ಮತ್ತೊಂದು ತಿರುವಿನಲ್ಲಿ, ಸಂಸ್ಕೃತಿ ಭಂಡಾರಗಳ ಶಕ್ತಿನಿಯಂತ್ರಣವನ್ನು ನಡೆಸುತ್ತಿದ್ದ ದೈವಿಕ ಅಥವಾ ಪುರೋಹಿತ ವರ್ಗ ಮತ್ತು ರಕ್ಷಕ ಅಥವಾ ಆಡಳಿತ ವರ್ಗಗಳೆರಡೂ ಒಟ್ಟಾಗಿ ಮಿಕ್ಕವರ್ಗಗಳಿಗಿಂತ ಬಲಿಷ್ಠವಾದವು; ತಮ್ಮದೇ ಶಕ್ತಿವರ್ಧನೆಯ ಆಸೆಯಿಂದ ವಿಕಾಸದ ಧಾರೆಗಳನ್ನು ಅಡ್ಡಗಟ್ಟಿ, ತಮ್ಮ ಹಿಡಿತದಲ್ಲಿದ್ದ ಶಕ್ತಿಸಾಧಕವಾಗಿದ್ದ ದೈವಿಕಮತವನ್ನು ಶಾಶ್ವತಗೊಳಿಸುವ ಹೊಸತೊಂದು ಪ್ರಯೋಗವನ್ನು ಮಾಡಿದವು. ಶಕ್ತಿಯ ಪ್ರತೀಕವಾಗಿ ಆಗಲೆ ಸ್ಥಾಪಿತವಾಗಿದ್ದ ದೈವಿಕಾಂಶವನ್ನು ತಮಗೇ ಆರೋಪಿಸಿಕೊಂಡು, ಅದಕ್ಕೆ 'ಪವಿತ್ರತೆ' ಎನ್ನುವ ಹೊಸ ಹೆಸರಿಟ್ಟವು. ಜೀವಕೋಟಿಗಳಲ್ಲಿ ಹಿಂದೆಂದೂ ಇಂತಹ ಸ್ವರೂಪದಲ್ಲಿಲ್ಲದಿದ್ದ ಹೊಸದೊಂದು ತಾರತಮ್ಯದ ಶಕ್ತಿಮನ್ನಣೆಯನ್ನು ಪಡೆದ ಈ ಪುರೋಹಿತಾಡಳಿತ ವರ್ಗವೆ 'ಫ್ಯೂಡಲಿಸಂ'ನ ಸಂಸ್ಥಾಪಕ. ಅಂದಿನ ದೊಡ್ಡ ಸಮುದಾಯಗಳಲ್ಲಿ ಔನ್ನತ್ಯಕ್ಕೇರಿದ ಈ ಗುಂಪು, ತಾವು ದೈವಾಂಶಸಂಭೂತರಾದ್ದರಿಂದ ತಮ್ಮ ಕುಲವೆಲ್ಲ ಜನ್ಮತಃ ಪವಿತ್ರವೆಂದು, ತಮ್ಮಲ್ಲಿರುವಷ್ಟು ಜ್ಞಾನ ದೈವದತ್ತವಾದ್ದ ರಿಂದ ಪರಿಪೂರ್ಣವೆಂದು, ತಾವು ದೈವಗಳ ಪ್ರತಿನಿಧಿ ಗಳಾದ್ದರಿಂದ ತಮ್ಮಿಂದ ಮಾತ್ರ ಸಮುದಾಯದ ಆಯುರಾರೋಗ್ಯ ಅಭಿವೃದ್ಧಿಗಳು ಸಾಧ್ಯವೆಂದು, ಜನಗಳನ್ನು ನಂಬಿಸಿ ಬಹುಮಟ್ಟಿಗೆ ತಾನೂ ನಂಬಿತು. ಹೀಗೆ ಸಮುದಾಯದ ಎಲ್ಲ ಚಟುವಟಿಕೆಗಳ ಮೇಲೂ ಇವರಿಗೆ ನಿಯಂತ್ರಣದ ಶಕ್ತಿ ದೊರೆಯಿತು.

ಅವರೆಗೂ ವಿಕಾಸದ ಹಾದಿಯಲ್ಲಿ ಘಟ್ಟವನ್ನು ತಲುಪದಿದ್ದ ಅನೇಕ ದುಷ್ಪಪದ್ಧತಿಗಳು ಮತನೀತಿಗಳಾಗಿ 'ಶ್ರೇಷ್ಠ'ವೆನಿಸಿಕೊಂಡವು; ಪಶುಗಳಲ್ಲಿದ್ದುದಕ್ಕಿಂತ ಹೆಚ್ಚು 'ನಿಪುಣದುಷ್ಟ'ವಾಗಿ ಶಾಶ್ವತವೂ ಆಗಿಹೋದವು. ಒಂದೇ ಒಂದು ದೈವಿಕಮತ ವಿಜೃಂಭಿತ ಉದಾಹರಣೆ – ರಾಜರ ಮತ್ತು ಇತರ ಪವಿತ್ರರ ಬಹುಪತ್ನಿತ್ವ.

**ಡಾ|| ಎಂ. ಎಸ್. ಕೇಶವರಾವ್**

ಇಂತಹ ಚಟುವಟಿಕೆಗಳು, ಪ್ರವೃತ್ತಿಗಳು, ವಿಶ್ವದ ಅನೇಕ ಗುಂಪುಗಳಲ್ಲೂ, ದೇಶ ಕಾಲಗಳ ದೊಡ್ಡ ಅಂತರದಿಂದ ಪ್ರಭಾವರಹಿತರಾಗಿದ್ದ ಬುಡಕಟ್ಟು ತಂಡಗಳಲ್ಲೂ, ಹೆಚ್ಚು ಭಿನ್ನತೆಗಳಿಲ್ಲದ ಕ್ರಮ ಸರಣಿಯಲ್ಲಿ ನಡೆಯುತ್ತಿದ್ದವು.

ಅತಿ ಪ್ರಾಚೀನ ನಾಗರಿಕತೆಯಾಗಿದ್ದ ನೈಲ್ ನದಿತೀರದ ಈಜಿಪ್ಟ್ ಜನಾಂಗದಲ್ಲಿ ರಾಜ ಮನೆತನದ ಮತ್ತು ಪೂಜಾರಿಗಳ ಪವಿತ್ರತೆಯ ಫಲವಾಗಿ, ಅನೇಕ ಮದುವೆಗಳು ಸೋದರ ಸೋದರಿಯರಲ್ಲಿಯೆ ನಡೆಯುತ್ತಿದ್ದವು. ರಾಜ್ಯ, ಶ್ರೀಮಂತಿಕೆ, ಕುಲಪಾವಿತ್ರ್ಯಗಳ ಭದ್ರತೆಗೆ ಅನುಕೂಲವಾಗಿ ಅವರಿಗಿದ್ದುದು ಇದೊಂದೆ ಹಾದಿ. ಎಲ್ಲ ದೈವಿಕಮತಗಳ ಲಕ್ಷಣವಾದ ಪವಿತ್ರತೆಯ ಭ್ರಮೆಯ ಪ್ರತಿಫಲವಾಗಿಯೆ 'ಶ್ರೇಷ್ಠತೆ, ಶಕ್ತಿ, ಸಾಮರ್ಥ್ಯ, ಕಲೆ, ರಸಿಕತೆ, ಪಾಂಡಿತ್ಯ, ದೈವಭಕ್ತಿ ಮುಂತಾದ ಅರ್ಜಿತ ಗುಣಗಳೂ, ವಂಶಪರಂಪರೆಯಲ್ಲಿ ಜನ್ಮಸಿದ್ಧವಾಗಿಯೇ ಬರುವುವು' ಎನ್ನುವ ಮತ್ತೊಂದು ಶಂಕೆಯೂ ಮತೀಯರಿಗೆ ಅಂಟಿಕೊಂಡಿತು. ಸಾವಿರಾರು ವರ್ಷಗಳ ನಂತರವೂ, ಪ್ರತ್ಯಕ್ಷ ಪ್ರಮಾಣಗಳು, ಅನುಭವಗಳು ತದ್ವಿರುದ್ಧವಾಗಿದ್ದರೂ, ಅನೇಕ ಮತಗಳ ಎಲ್ಲ ಮತೀಯರನ್ನು ಈ ಭ್ರಮೆ ಇನ್ನೂ ಕಾಡುತ್ತಿದೆ. ಪ್ರಾಚೀನ ಭಾರತೀಯರ ವರ್ಣಾಶ್ರಮ ಧರ್ಮಗಳು, ಕಡೆಗೆ ವೃತ್ತಿಗಳು ಸಹ, ಜಾತಿಧರ್ಮಗಳಾಗಿ ಹೋಗಿದ್ದು ಇಂತಹ ನಂಬಿಕೆಗಳ ಮೇಲೆಯೆ ಮತ್ತು ಅವುಗಳನ್ನು ಅರಿಯದವರ ಮೇಲೆ ಹೇರುವುದಕ್ಕಾಗಿಯೇ.




ಪ್ರಾಚೀನ ಗ್ರೀಕರು, ಪರ್ಷಿಯನ್ನರು ಇತ್ಯಾದಿಗಳಲ್ಲಿ ಇದಕ್ಕೂ ಅತಿಯಾದ, ನಿಕಟ ಸಂಬಂಧಿಗಳ (ಎಂದರೆ, ತಂದೆತಾಯಿಯರೊಡನೆ ಸಂತಾನಗಳ) ಕೂಟ, ಮದುವೆಗಳು ನಡೆಯುತ್ತಿದ್ದುದನ್ನು ಅವರವರ ಆಗಿನ ದೈವಿಕ ಮತಗಳು ನಿಷೇಧಿಸಲೇ ಇಲ್ಲ. ಆದರೂ ಕ್ರಮೇಣ ವಿಕಾಸದ ಪರಿಣಾಮವಾಗಿ ಜನಗಳಲ್ಲಿ ಉಂಟಾದ ಜಿಗುಪ್ಸೆ (ಈಡಿಪಸ್ ಕಾಂಪ್ಲೆಕ್ಸ್)ಯ ಕಾರಣವಾಗಿ, ನೈತಿಕತೆಯ ಮೊಟ್ಟ ಮೊದಲನೆಯ ಪೀಳಿಗೆ (ಸೋದರ ಸೋದರಿಯರು)ಗೆ ಬದಲಾಯಿತು. ಇಂದಿನವರೆಗೂ ದೈವಿಕಮತಗಳ ಪ್ರೋತ್ಸಾಹದಲ್ಲೆ ಎರಡನೆಯ ಪೀಳಿಗೆಯ ಮದುವೆಗಳು ನಡೆಯುತ್ತಿವೆ. ಈ ವಿಷಯದ ಉಲ್ಲೇಖಗಳು ವಿಭಿನ್ನ ದೇಶಗಳ ಪುರಾಣಗಳು, ಬೈಬಲ್, ಜೆಂಡ್ ಅವೆಸ್ತಾ, ಕುರಾನ್ ಮುಂತಾದ ಮತಗ್ರಂಥಗಳಲ್ಲಿ ಸಿಕ್ಕುತ್ತವೆ. ಪಾರಸಿಕರಂತು, ಅಲ್ಪ ಮತ ಜನಸಂಖ್ಯೆಯವರಾಗಿ, ನಿಕಟ ಸಂಬಂಧಗಳಿಂದಲೆ ಮತವನ್ನು ಉಳಿಸಿಕೊಳ್ಳುತ್ತಿದ್ದಾರೆ. ಭಾರತದ ಬಹಳಷ್ಟು ಬುಡಕಟ್ಟುಗಳೂ ಇದೇ ಸಮಸ್ಯೆಯಿಂದ ನರಳುತ್ತಿವೆ.

ಭಾರತೀಯ ಗೋತ್ರಪದ್ಧತಿ ಇದೇ ಹಿನ್ನೆಲೆಯದ್ದಾದರೂ ಇತರ ಮತನೀತಿಗಳಿಂದ ಹಲವು ರೀತಿಗಳಲ್ಲಿ ಭಿನ್ನವಾಗಿದೆ.

**ಗೋತ್ರಪದ್ಧತಿಯ ಗುಣದೋಷಗಳು**

ಆಧುನಿಕ ಜೀವವಿಜ್ಞಾನ, ಜಾಗತಿಕ ವ್ಯಾಪ್ತಿಯ ಪ್ರಾಣಿಶಾಸ್ತ್ರದ ಅಪಾರ ಮಾಹಿತಿ, ಸಂತತಿ ವಿಜ್ಞಾನದ ಸಂಶೋಧಕ ಅಧ್ಯಯನಗಳು ಮತ್ತು ಸುಸಜ್ಜಿತ ವೈದ್ಯಕೀಯ ಜ್ಞಾನದ ಪುರವಣಿ ಇವುಗಳೆಲ್ಲ ಸುಲಭ ಲಭ್ಯವಾಗಿರುವ ಇಂದಿನ ಹಿನ್ನೆಲೆಯಲ್ಲಿ, ಪುರಾತನ ಗೋತ್ರಪದ್ಧತಿಯನ್ನು ತೂಗಿ ನೋಡಿದಾಗ ಮೊದಲು ಮನಮುಟ್ಟುವುದು ತಮ್ಮ ಅರಿವನ್ನು ಸಮರ್ಥವಾಗಿ ಬಳಸುವ ಅಂದಿನವರ ವಿಚಕ್ಷಣೆ, ಬಾಂಧವ್ಯ ನೀತಿ ಮತ್ತು ಕುಲಾಭಿವೃದ್ಧಿಯ ದೂರದೃಷ್ಟಿ.

ಆದರೆ ಅಂದಿನ ಸೀಮಿತ ಅರಿವಿನಲ್ಲಿ ಹುಟ್ಟಿದ ಈ ನೀತಿ, ದೈವಿಕಮತದ ಚೌಕಟ್ಟಿನಲ್ಲಿ ಬಂಧಿತವಾಗಿತ್ತು. ಪ್ರತ್ಯಕ್ಷ ಅನುಭವ ಮತ್ತು ಹೆಚ್ಚು ಹೆಚ್ಚು ವಿಶಾಲವಾಗುತ್ತಿದ್ದ ಸಮಾಜದ ವೀಕ್ಷಣೆಯ ಸದವಕಾಶ, ಇವೆರಡರಿಂದ ಅರಿವು ಬೆಳೆಯುತ್ತಿದ್ದಂತೆ, ಮುಕ್ತ ವಿಚಾರ ಮಾಡಿ, ಈ ನೀತಿಯನ್ನು ಪರಿಷ್ಕರಿಸಿಕೊಳ್ಳುವ ಸಾಧ್ಯತೆಯೇ ಇಲ್ಲವಾಯಿತು. ಹೀಗಿದ್ದರೂ, ಆ ಮತದ ಪುರೋಹಿತ ಮತ್ತು ರಾಜಕೀಯ ವರ್ಗಗಳು ತಮ್ಮ ಅನುಕೂಲಕ್ಕೆ ತಮ್ಮದೇ ನೀತಿಯನ್ನು ತಿರುಚಿಕೊಳ್ಳುತ್ತಿದ್ದ ಪ್ರಸಂಗಗಳು ಇರಲಿಲ್ಲವೆನ್ನುವಂತಿಲ್ಲ.

ಸಂತಾನದ ಹುಟ್ಟುಗುಣಗಳು ಸರಿಸಮಾನವಾಗಿ ತಂದೆತಾಯಿ ಇಬ್ಬರ ಮೂಲಕ ವಾಗಿಯೂ ಬರುವವು ಎಂಬ ಪ್ರತ್ಯಕ್ಷ ಪ್ರಮಾಣದ ಅರಿವು ದೀರ್ಘ ಕಾಲಾವಧಿಯಲ್ಲಾದರೂ ಮೂಡದೆ ಇರಲಿಕ್ಕಿಲ್ಲ. ಆರಂಭಿಕ ಜ್ಞಾನವಾಗಿದ್ದ ಸಸ್ಯವರ್ಗದ 'ಬೀಜಕ್ಷೇತ್ರ ನ್ಯಾಯ'ದಂತೆಯೇ ಮನುಷ್ಯರಲ್ಲೂ, ಭೂಸಮಾನರಾದ ಮಾತೆಯರಿಂದ ಬರಿಯ ಪೋಷಣೆಯ ಪರಿಣಾಮಗಳಷ್ಟೆ ಸಂತಾನದಲ್ಲಿರುವುದು ಸಾಧ್ಯ ಎನ್ನುವ ಮತಾನುಮೋದಿತ ಪೂರ್ವಗ್ರಹ, ಯಾವ ವಿಷಯದ ಸತ್ಯಮಥನಕ್ಕೂ ಎಡೆಗೊಡಲಿಲ್ಲ. ಅನೇಕ ಪುರಾತನ ಪುರಾಣ, ಶ್ರುತಿ, ಸ್ಮೃತಿ, ಶಾಸ್ತ್ರ, ಕಾವ್ಯಗಳಲ್ಲೂ ಈ ಪೂರ್ವಗ್ರಹ ಕೆಲವೆಡೆ ಪ್ರಕಟವಾಗಿ, ಹಲವೆಡೆ ಸೂಚ್ಯವಾಗಿ ಕಾಣಿಸಿಕೊಳ್ಳುತ್ತದೆ.

ಇದು ಒಂದು ಅಂಧವಿಶ್ವಾಸವೆಂಬ ಅರಿವಿಲ್ಲದವರಾಗಿದ್ದವರು, ಇಂತಹ ಒಂದು ದೈವದತ್ತ ಮತ್ತು ಆಗಮಪ್ರಮಾಣಿತ ನಂಬಿಕೆಯನ್ನು ಇಟ್ಟುಕೊಂಡಿದ್ದವರು, ತಮ್ಮ ಸಮಾಜ ಸತ್ಯಾಧಾರಿತವಾಗಿ ಪುರುಷಪ್ರಧಾನವಾಗಿದೆ ಎಂಬ ವಿಶ್ವಾಸವಿಟ್ಟುಕೊಂಡಿದ್ದರೆ ಆಶ್ಚರ್ಯವಿಲ್ಲ. ಹಾಗೆಯೆ ಅಂತಹವರು, ಪುರುಷಾರ್ಥಸಾಧನೆಗೆ ಸಲಕರಣೆಯಾಗಿದ್ದ ಮಾತೆಯರಿಗೆ ಮತ್ತು ಸ್ತ್ರೀ ಜನಕ್ಕೆ ಮಾನ್ಯತೆ ಕೊಡುವ ಮಾತನಾಡುತ್ತಿದ್ದದ್ದು ಬಹಳಷ್ಟು ಪ್ರಶಂಸನೀಯ.

ಅಂತಹ ಸನ್ನಿವೇಶದಲ್ಲಿ ಗೋತ್ರಗಳೆಲ್ಲ ಪುರುಷಪ್ರಧಾನವಾಗುವುದರ ಜೊತೆಗೆ ಸ್ತ್ರೀ ವರ್ಜಿತವೂ ಆಗಿಹೋಗಿವೆ. ಗಂಡುಮಕ್ಕಳು ಗೋತ್ರ (ಕುಲ ವಂಶ)ದವರಾದರೆ, ಹೆಣ್ಣುಮಕ್ಕಳು ಹುಟ್ಟಿದಾರಭ್ಯ ಹೊರಗಿನವರು. ಹೆಣ್ಣನ್ನು ಕೊಡುವಾಗ ತರುವಾಗ ಮಾತ್ರವೆ ಅವಳ ಗೋತ್ರದ ಮಾತು ಬರುತ್ತಿತ್ತು. ಇಂತಹ ಚರಸ್ವತ್ತುಗಳನ್ನು ಕೊಡುವಾಗ ತರುವಾಗ ಧನ ಕನಕ ಲೇವಾದೇವಿ ಮತ್ತು ಅವಳ ಸ್ವಾಮಿತ್ವದ ವರ್ಗಾವಣೆಯನ್ನು ಬಿಟ್ಟು ಹೆಣ್ಣಿನ ಹಕ್ಕುಗಳ ಪ್ರಶ್ನೆಗಳೇ ಏಳುತ್ತಿರಲಿಲ್ಲ. ಚರಆಸ್ತಿಯ ಸಂಗ್ರಹಣೆಯನ್ನೇ ಪುರುಷಾರ್ಥವಾಗಿಟ್ಟುಕೊಂಡಿದ್ದ ಅಂದಿನ ರಾಜವರ್ಗ ಶ್ರೀಮಂತವರ್ಗಗಳಿಗೆ ಇದು ಬಹು ಅನುಕೂಲ ನೀತಿಯೂ ಆಗಿತ್ತು. ಬಹಳ ಹಿಂದಿನಿಂದಲೂ ಇದ್ದ ಅನೇಕ ಮಾತೃಪ್ರಧಾನ ಕುಟುಂಬ ಪದ್ಧತಿಗಳು ಹೀಗೆ ನಿರರ್ಥಕವಾಗಿಹೋಗಿ, ಕಡೆಗೆ ವಿಕೃತಿಗಳೆನ್ನಿಸಿಕೊಂಡು ಪಳೆಯುಳಿಕೆಗಳಾಗಿಹೋದವು.

**ಸಮಾಜಗಳ ಮೇಲಿನ ದುಷ್ಪರಿಣಾಮಗಳು**

ಎಲ್ಲದಕ್ಕಿಂತ ಹೆಚ್ಚು ದುಷ್ಪರಿಣಾಮವಾದದ್ದು ಮುಂದಿನ ಪೀಳಿಗೆಯ ಮತ್ತು ಸಮಾಜದ ಆಯುರಾರೋಗ್ಯ ಹಿತಗಳ ಮೇಲೆ. ಹೆಣ್ಣಿನ ಜೊತೆಗೆ ಧನರಾಶಿಗಳನ್ನು ಕೊಟ್ಟ ಕುಲದಿಂದಾದದ್ದು ಉಪಕಾರವೆಂದೋ ಋಣವೆಂದೋ ಇಟ್ಟುಕೊಂಡದ್ದರಿಂದ, ತೀರಿಕೆಗಾಗಿ ನಡೆಯುತ್ತಿದ್ದ ಮರುಸಂಬಂಧಗಳು ಕಟ್ಟಳೆಗಳಾಗಿಹೋದವು. ಹೆಣ್ಣು ಕೊಟ್ಟ ಕುಲದ ಸುಪುತ್ರ ಎಂದರೆ ಋಣಿಕುಲದಲ್ಲಿನ ಮಾತುಲ (ಎಂದರೆ ನವವಧುವಿನ ಸೋದರ ಮಾವ)ನಿಗಿಂತ ಹೆಚ್ಚು ಹಕ್ಕುದಾರರು ಯಾರಾಗುವುದು ಸಾಧ್ಯ? ಈಗಲೂ ಬಹಳಷ್ಟು ಸಂಪ್ರದಾಯಸ್ಥ ವಿವಾಹಗಳಲ್ಲಿ, ಸೋದರಮಾವನಿಗೆ ಮೀಸಲಾದ ವಧುವಿನ ಮೇಲಿನ ಹಕ್ಕನ್ನು ಅವನಿಂದ 'ಬಿಡಿಸಿಕೊಳ್ಳುವ' ಆಚರಣೆ, ನಾಟಕಗಳು ನಡೆಯುತ್ತವೆ. ಇಷ್ಟೊಂದು 'ಶ್ರೇಷ್ಠ' ಎನ್ನಿಸಿಕೊಳ್ಳದಿದ್ದ ಇನ್ನೊಂದು ತರಹೆಯ ನಿಕಟ ಸಂಬಂಧ, ಸೋದರಮಾವನ ಅಥವಾ ಸೋದರತ್ತೆಯ ಮಗ ಅಥವಾ ಮಗಳೊಡನೆಯ ಸಂಬಂಧ. 'ಸಗೋತ್ರ ವಿವಾಹ' ಅಲ್ಲದ್ದರಿಂದ ಇದೂ ಉತ್ತಮವೆನಿಸಿಕೊಳ್ಳುತ್ತಿತ್ತು. ಸೋದರಮಾವನೊಡನೆಯ ಸಂಬಂಧ ಮೊದಲ ಪೀಳಿಗೆಯದಾದರೆ, ಇನ್ನೊಂದು ಎರಡನೆಯ ಪೀಳಿಗೆಯದು. ವೈಜ್ಞಾನಿಕವಾಗಿ ವಿಶ್ಲೇಷಿಸಿದರೆ, ಮೊದಲ ಸಂಬಂಧದಲ್ಲಿ ಹೆಣ್ಣು ತನ್ನ ವಂಶ ಪರಂಪರೆಯಾಗಿ ಪಡೆದು ಬಂದಿರುವ ಲಿಂಗಾಣು ಖಾತೆಯಲ್ಲಿ, ಗಂಡಿನ ಅಂತಹುದೇ ಖಾತೆಗಿಂತ, ಒಂದೇ ಒಂದು ಲಿಂಗಾಣು (ಹೆಣ್ಣಿನ ತಂದೆಯದು) ಭಿನ್ನವಾಗಿರುವ ಸಂಭವವಿದೆ. ಈ ಸಂಬಂಧ ಸಮಗ್ರಸಮನಾದ ಖಾತೆಗಳವರಾದ ಸೋದರ ಸೋದರಿಯರ ಸಂಬಂಧಕ್ಕಿಂತ ಒಂದೇ ಅಣುವಿನಷ್ಟು ಹೆಚ್ಚು ಸಹನೀಯ. ಇದೇ ತಾಳೆಯಲ್ಲಿ ನೋಡಿದಾಗ, ಎರಡನೆಯ ಪೀಳಿಗೆಯ ಸಂಬಂಧದಲ್ಲಿ ಎರಡೇ ಎರಡು ಲಿಂಗಾಣುಗಳ ಭಿನ್ನತೆ ಕಂಡುಬರುತ್ತದೆ; ಅದೂ ಈ ನವವಧೂವರರ ತಂದೆ ತಾಯಿಯರಲ್ಲಿ ಹೊರಗಿನಿಂದ ಬಂದವರಿಬ್ಬರಲ್ಲಿ ಯಾರೂ ಹಿಂದೆಂದೂ ಯಾವುದೇ ವಂಶಕ್ಕೂ ರಕ್ತಸಂಬಂಧಿಕರಲ್ಲದಿದ್ದರೆ ಮಾತ್ರ. ಈ ಎರಡು ತರಹೆಯ ಸಂಬಂಧಗಳೂ ಅಹಿತಕಾರಿಗಳಾಗಿದ್ದರೂ, ಸೋದರಮಾವನೊಡನೆಯ ಸಂಬಂಧ, ಅಣ್ಣ-ತಂಗಿಯರ ಅಕ್ಕ-ತಮ್ಮಂದಿರ ಮಕ್ಕಳೊಳಗಣ ಸಂಬಂಧಕ್ಕಿಂತ ಎರಡರಷ್ಟು ಹೆಚ್ಚು ಅಪಾಯಕಾರಿ. ಮುಸ್ಲಿಂರಲ್ಲಿ, ಹಳೆಯ ಕಾಲದ ಯಹೂದಿಗಳಲ್ಲಿ, ಪಾರ್ಸಿಗಳಲ್ಲಿ, ಭಾರತವೂ ಸೇರಿದಂತೆ ವಿಶ್ವದೆಲ್ಲೆಡೆಯ ಬುಡಕಟ್ಟು ಜನತಂಡಗಳಲ್ಲಿ ಪ್ರಚಲಿತವಿರುವ ಅಣ್ಣ-ತಮ್ಮಂದಿರ ಮಕ್ಕಳೊಳಗಣ ಮತ್ತು ಅಕ್ಕ-ತಂಗಿಯರ ಮಕ್ಕಳೊಳಗಣ ಮದುವೆಗಳು ಗೋತ್ರಪದ್ಧತಿಯಲ್ಲಿ ನಿಷಿದ್ಧವಾಗಿದ್ದರೂ, ಅದೇ ಗೋತ್ರಪದ್ಧತಿಯಲ್ಲಿ

ಮಾನ್ಯವಾದ ಅಣ್ಣ-ತಂಗಿಯರ ಮಕ್ಕಳೊಳಗಣ ಅಕ್ಕ-ತಮ್ಮಂದಿರ ಮಕ್ಕಳೊಳಗಣ ಸಂಬಂಧಗಳಿಗಿಂತ ಅಣುವಷ್ಟೂ ಹೆಚ್ಚು ಅಪಾಯಕಾರಿಯಲ್ಲ; ಜೊತೆಗೆ ಇವು ಯಾವವೂ ಗೋತ್ರಪದ್ಧತಿಯಲ್ಲಿ ಶ್ರೇಷ್ಠವೆನ್ನಿಸಿಕೊಂಡ ಸೋದರಮಾವನೊಡನೆಯ ಸಂಬಂಧದಷ್ಟು ಅನರ್ಥಕಾರಿಯಲ್ಲ. ಹಿಂದೂ ಮತದ ಸೋದರಮಾವನೊಡನೆಯ ಸಂಬಂಧ ಪ್ರಪಂಚದಲ್ಲಿ ಪ್ರಚಲಿತವಿರುವ ಎಲ್ಲ ಸಂಬಂಧಗಳಿಗಿಂತ ಹೆಚ್ಚು ಅಪಾಯಕಾರಿ.

ಮದುವೆಯ ಗಂಡುಹೆಣ್ಣುಗಳ ಎರಡೂ ವಂಶವೃಕ್ಷಗಳನ್ನು ತಾಳೆಮಾಡಿ ನೋಡಿದಾಗ ಎಷ್ಟೆಷ್ಟು ಹತ್ತಿರದ ಎಷ್ಟೆಷ್ಟು ಜನ ನೇರಸಾಲಿನ ಪೂರ್ವಜರು ಎರಡರಲ್ಲೂ ಕಂಡು ಬರುತ್ತಾರೋ ಅಷ್ಟು ಹೆಚ್ಚು ಸಂಭವನೀಯವಾಗಿ ವಂಶದಲ್ಲಿರಬಹುದಾದ ಆನುವಂಶೀಯ ರೋಗಗಳು ಮುಂದಿನ ಪೀಳಿಗೆಯವರನ್ನು ಕಾಡಬಹುದು. ಇಂತಹ ರೋಗಗಳಿಗೆ ಆ ವಂಶದಲ್ಲನೇಕರು ತಾವು ಸ್ವಲ್ಪವೂ ಈಡಾಗದಿದ್ದರೂ, ಮುಂದಿನ ಪೀಳಿಗೆಗೆ ರೋಗ ವಾಹಕರಾಗಬಹುದು; ಇದೂ ಒಂದು ಬಹುಮುಖ್ಯ ಅಂಶ. ಆದ್ದರಿಂದ ಮದುವೆಗೆ ಮುನ್ನವೇ, ಸಂತಾನ ಪಡೆಯುವುದಕ್ಕೆ ಸಾಕಷ್ಟು ಮೊದಲೇ, ಇಂತಹ ವಂಶವೀಕ್ಷಣೆಗಳನ್ನು ಮಾಡುವುದು ಅತ್ಯಗತ್ಯ. ಇದು ಬಹು ಸಾಮಾನ್ಯವಾಗಿ ನಡೆಯುತ್ತಿರುವ ಪಾಶ್ಚಿಮಾತ್ಯ ದೇಶಗಳಲ್ಲಿ ಸುಮಾರು ಐದು ಪೀಳಿಗೆಗಳನ್ನಾದರೂ ವೀಕ್ಷಿಸುವುದು ಉತ್ತಮವೆಂಬ ಅಭಿಪ್ರಾಯವಿದೆ. ಇದಕ್ಕೆ ವ್ಯತಿರಿಕ್ತವಾಗಿ, ಬಹಳಷ್ಟು ಭಾರತೀಯರು ಅತ್ಯವಶ್ಯಕವಾದ ಗಂಡು ಹೆಣ್ಣುಗಳ ಅತಿಸುಲಭದ ರಕ್ತವರ್ಗಪರೀಕ್ಷೆಯ ಅಂಶಗಳನ್ನು ಸಹ ತಾಳೆ ಮಾಡಿ ನೋಡದೆ, ನಿರರ್ಥಕವಾದ ಜಾತಕ ಗೋತ್ರಗಳಷ್ಟನ್ನೆ ನೆಚ್ಚಿಕೊಂಡಿರುವ ಅಂಧವಿಶ್ವಾಸದಲ್ಲಿ ನರಳುತ್ತಿದ್ದಾರೆ.

ಬಹುಸಾಮಾನ್ಯವಾಗಿ ಜೀವಿಗಳಲ್ಲಿ ಉಂಟಾಗುವ ಪ್ರದೋಷಗಳು (ಮ್ಯುಟೇಶನ್ ಅಥವಾ ವ್ಯತ್ಯಯಗಳು) ಪೀಳಿಗೆಯಿಂದ ಪೀಳಿಗೆಗೆ ಕಡಿಮೆಯಾಗುತ್ತ ಹೋಗುತ್ತವೆ. ಒಂದು ಜೀವಿ ತಂದೆತಾಯಿಯರಿಬ್ಬರಿಂದಲೂ ಒಂದೇ ದೋಷವನ್ನು ಅದೇ ರೀತಿಯಲ್ಲಿಯೇ ಹಾಗೆಯೇ ಪಡೆಯದಿರುವ ಸಂಭವತೆಯೇ ಇದಕ್ಕೆ ಒಂದು ಮುಖ್ಯ ಕಾರಣ. ಕೋಟ್ಯಂತರ ವರ್ಷಗಳ ವಿಕಾಸದ ಮಹಾಪ್ರಕ್ರಿಯೆಯಲ್ಲಿ, ಸಸ್ಯಜೀವಿಗಳಲ್ಲೆ ಉದ್ಭವಿಸಿದ್ದರೂ ಅವುಗಳಲ್ಲಿ ಹೆಚ್ಚು ಸಕ್ರಿಯವಾಗಿರದಿದ್ದ ಲೈಂಗಿಕ ಪ್ರಜೋತ್ಪತ್ತಿ ಕ್ರಿಯೆ, ಹೊಸ ಹೊಸ ಪ್ರಯೋಗಗಳಿಂದ ಪ್ರಬಲಗೊಂಡು ಅಪಾರ ವೈವಿಧ್ಯವನ್ನು ಮತ್ತು ಸಾರ್ಥಕ್ಯವನ್ನು ಪ್ರಾಣಿಜೀವಿಗಳಿಗೆ ತಂದುಕೊಟ್ಟದ್ದು ಇಂತಹ ಒಂದು ಅದ್ಭುತ ಸಾಮರ್ಥ್ಯವನ್ನು ವಿಕಸಿಸಿ ಕೊಂಡಿದ್ದರಿಂದಲೆ. ಆದ್ದರಿಂದ ಸಂತತಿಯಲ್ಲಿ ದೋಷನಿರ್ವಹಣೆ ಸಮರ್ಥವಾಗಿ ನಡೆಯುವುದು ತಂದೆತಾಯಿಯರು ನಿಕಟಸಂಬಂಧಿಗಳಾಗಿಲ್ಲದಿದ್ದರೆ ಮಾತ್ರ. ಅಲ್ಪ ಸಂಖ್ಯೆಯ ಜೀವಿಕುಲವರ್ಗವೊಂದರಲ್ಲಿ ನಿಕಟಸಂಬಂಧಿಗಳಲ್ಲಿಯೇ ಕೂಟಗಳು ಮರುಕಳಿಸುತ್ತಿದ್ದರೆ ಹಿಂದಿನಿಂದ ಇದ್ದ ದೋಷ, ಸಾಕಷ್ಟು ದೀರ್ಘಕಾಲಾವಧಿಯಲ್ಲಿ, ಆ ಕುಲವರ್ಗದ ಜೀವಿಲಕ್ಷಣವಾಗಬಹುದಾದ ಸಾಧ್ಯತೆಯೂ ಇದೆ. ಪ್ರದೇಶ ವಿಶಿಷ್ಟ ಜನಸಾಮಾನ್ಯ ಚಹರೆಗಳು ಮತ್ತು ದೈಹಿಕ ಲಕ್ಷಣಗಳು, ಕೆಲವು ವಿಕಲಾಂಗತೆಗಳು, ಅನೇಕ ವಂಶವಾಹಿತ ರೋಗಗಳೂ ಇಂತಹ ದೋಷಗಳೇ. ಹೆಮೊಫಿಲಿಯ, ಹಂಟಿಂಗ್‌ಟನ್ ಕಾಯಿಲೆ, ಥಾಲಸೆಮಿಯ, ಸಿಕಲ್‌ಸೆಲ್ ಅನೀಮಿಯ, ಸಿಸ್ಟಿಕ್ ಫೈಬ್ರೋಸಿಸ್ ಮತ್ತು ಕೆಲವು ವಿರಳ ಡಯಾಬಿಟಿಸ್ ತರಹೆಯ ಕಾಯಿಲೆಗಳು ಮುಂತಾದವು, ವಿವಿಧ ಜನಾಂಗಗಳಲ್ಲಿ ಮತ್ತು ಪ್ರದೇಶಗಳಲ್ಲಿ, ಭಿನ್ನ ಭಿನ್ನ ಸಾಂದ್ರತೆಗಳಲ್ಲಿ ಸಂಭವಿಸುತ್ತವೆ. ಇಂತಹ ಅನೇಕ ರೋಗಗಳನ್ನು ಕುರಿತು ಭಾರತದಲ್ಲಿ ಗಣನೆಗಳಾಗಿಲ್ಲ. ಆದರೆ ಸಾಕಷ್ಟು ಗಮನ ಸೆಳೆದಿರುವ ಥಾಲಸೆಮಿಯ ರೋಗವ್ಯಾಪ್ತಿಯ ಅಂದಾಜು ಹೀಗಿದೆ: ಮೂರು ಕೋಟಿ ಜನ ಇದರ ವಾಹಕರಿರಬಹುದು; ವರುಷಕ್ಕೆ ಹತ್ತು ಸಾವಿರದಷ್ಟು ಶಿಶುಗಳು ಈ ರೋಗಸಹಿತ ಹುಟ್ಟುತ್ತಿರಬಹುದು.

ಕಳೆದ ಇನ್ನೂರು ವರ್ಷಗಳಲ್ಲಿ ದಕ್ಷಿಣಭಾರತದಲ್ಲಿನ ಬಹಳ ಅವಿಭಕ್ತ ಕುಟುಂಬ ಗಳಲ್ಲಿ ಮತ್ತು ಎಲ್ಲ ಬುಡಕಟ್ಟುಗಳ ಬೆಡಗು ಬಳಿಗಳಲ್ಲಿ, ಬಹಳಷ್ಟು ಉಪಜಾತಿ ಪಂಗಡ ಗಳಲ್ಲಿ ಅತಿನಿಕಟ ಸಂಬಂಧದ ಮದುವೆಗಳು ಅತಿಸಾಮಾನ್ಯವಾಗಿ, ಹೆಚ್ಚು ಹೆಚ್ಚಿನ ಸಂಖ್ಯೆ ಗಳಲ್ಲಿ ನಡೆದಿವೆ. ವಯೋವೃದ್ಧ ಹಿರಿಯರು ತಮ್ಮ ಮುಂದಿನ ಮೂರು ಪೀಳಿಗೆಗಳ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಇವರುಗಳ ಮಹಾತಂಡದಲ್ಲಿ ಇಂತಹ ಅನಾರೋಗ್ಯಕರ ಸಂಬಂಧದ ಮದುವೆಗಳನ್ನು ತಮ್ಮ ಆಶಯ ಆದೇಶಗಳಂತೆ, ಕಿರಿಯರಿಗೆ ಮನಸ್ಸು ಬೆಳೆಯುವುದಕ್ಕೆ ಮುಂಚೆಯೇ, ಮತನಿಗದಿತ ಗೋತ್ರ ಪದ್ಧತಿಗೆ ಕಿಂಚಿತ್ ಧಕ್ಕೆಯೂ ಬಾರದಂತೆ, ಸರ್ವರ ಆಯುರಾರೋಗ್ಯಾಭಿವೃದ್ಧಿ ಐಕ್ಯಮತ್ಯಗಳನ್ನೇ

## ಫ್ಲೋರಿಡಾದ ರಸ್ತೆ ಕೆಲಸಗಾರ



ನಾನು ರಸ್ತೆ ಮಾಡುತ್ತಿದ್ದೇನೆ
ಕಾರುಗಳು ಹಾರುವುದಕ್ಕಾಗಿ
ತಾಳೆಮರಗಳ ತೋಪಿನಲ್ಲಿ ಬೆಳಕು,
ನಾಗರಿಕತೆ ಅರಳಿ ಚಿಮ್ಮಿ ಸಾಗುವುದಕ್ಕಾಗಿ

ಬಿಳಿಯ ಶ್ರೀಮಂತರಿಗಾಗಿ ಈ ರಸ್ತೆ
ದೊಡ್ಡ ದೊಡ್ಡ ಕಾರುಗಳು ರಭಸದಿಂದ
ನುಗ್ಗುವುದಕ್ಕೆ ಮತ್ತು
ನನ್ನನ್ನು ಇಲ್ಲೇ ನಿಲ್ಲಿಸಿ ಬಿಟ್ಟು ಹೋಗುವುದಕ್ಕೆ

ನಿಜ!
ರಸ್ತೆಗಳು ನಮಗೆಲ್ಲಾ ಎಷ್ಟು ಸಹಕಾರಿ!
ಬಿಳಿಯ ಜನ ಸವಾರಿ ಮಾಡುತ್ತಾರೆ
ನಾನು ಅವರ ಸವಾರಿಯನ್ನು ನೋಡುತ್ತೇನೆ.
ಇವರಷ್ಟು ಚಂದವಾಗಿ
ಕಾರು ನಡೆಸುವವರನ್ನು ನಾನು
ಈ ಹಿಂದೆ ಎಂದೂ ಕಂಡಿಲ್ಲ

ಸ್ವಾಮಿ
ಇಲ್ಲಿ ನೋಡಿ
ನಾನು ರಸ್ತೆ ಮಾಡುತ್ತಿದ್ದೇನೆ

ಲಾಂಗ್‌ಸ್ಟನ್ ಹ್ಯೂಸ್ (ಆಫ್ರಿಕನ್ ಕವಿ)

ಅನುವಾದ: ಎನ್. ವೆಂಕಟಕೃಷ್ಣ
ನಂ. [illegible], ಕಠಾರಿಪಾಳ್ಯ, ಕೋಲಾರ-[illegible]

ಧ್ಯೇಯವಾಗಿಟ್ಟುಕೊಂಡು ನಡೆಸುತ್ತಿದ್ದರು. ಇಂತಹ ನಿಕಟಸಂಬಂಧಿಗಳಲ್ಲಿನ ಮದುವೆಗಳು ಬಾಲ್ಯವಿವಾಹ ಪದ್ಧತಿಗೆ ಉತ್ತೇಜಕವೂ ಆಗಿರುತ್ತವೆ. ಇದು ಎಲ್ಲರಿಗೂ ತಿಳಿದಿರುವ ವಿಷಯ. ಈಗಲಾದರೂ ಎಲ್ಲರೂ ಸಮಸ್ಯೆಯ ತೀವ್ರತೆಯನ್ನು ಗಮನಿಸಿ, ರೂಢಿಗಳಲ್ಲಿ ತಲೆಮರೆಸಿಕೊಂಡಿರುವ ಇಂತಹ ಅನರ್ಥಕ ಪದ್ಧತಿಗಳನ್ನು ಹೊರಹಾಕುವ ಪ್ರಯತ್ನ ಮಾಡಬೇಕು.

**ಇಂದಿನ ದುಃಸ್ಥಿತಿ**

ಸುಮಾರು ನಲ್ವತ್ತೊಂಬತ್ತು ಅತಿಪುರಾತನ ಪ್ರವರ್ತಕ ಋಷಿಗಳ ಹೆಸರಿನಲ್ಲಿರುವ ಗೋತ್ರಗಳು ಬ್ರಾಹ್ಮಣರಲ್ಲಿ ಸ್ಥಿರವಾಗಿ ಉಳಿದುಬಂದಿವೆ. ಆದರೆ ಮಿಕ್ಕ ಜಾತಿಗಳಲ್ಲಿ, ಚೌಕಟ್ಟುಗಳು ಸಡಿಲವಾಗಿ, ಭಿನ್ನ ರೀತಿನೀತಿಗಳಿರುವ ಗೋತ್ರಗಳು ಆಗಾಗ ಬದಲಾಯಿಸಿಕೊಂಡು ಬರುತ್ತಿವೆ. ಹಳೆಯ ಗೋತ್ರಗಳ ಅಪಭ್ರಂಶದ ಹೆಸರುಗಳಲ್ಲೊ, ಅಂತಃಕಲಹದಲ್ಲಿ ಒಡೆದುಹೋದ ವಂಶದ ಹಳೆಯ ಮತ್ತು ಹೊಸ ಕುಲದೈವಗಳ ಹೆಸರುಗಳಲ್ಲೊ, ಓರ್ವ ವಿಶಿಷ್ಟ ವ್ಯಕ್ತಿಯ ಹೆಸರಿನಲ್ಲೊ, ಎಲ್ಲಕ್ಕಿಂತ ಹೆಚ್ಚಾಗಿ ಜಾತಿ ಕಸಬುಗಳ ಹೆಸರಿನಲ್ಲೊ, ಗೋತ್ರಪದ್ಧತಿಗಳು ಇನ್ನೂ ಬಲಗೊಂಡಿವೆ. ಉತ್ತರ ಭಾರತದ ಕಾಯಸ್ಥರಲ್ಲಿ, ಇದು 'ಗೋಟ್' ಎನ್ನುವ ಹೆಸರಿನಲ್ಲೂ, ದಕ್ಷಿಣದಲ್ಲಿ 'ಬಳಿ', 'ಬೆಡಗು' ಹೆಸರುಗಳಲ್ಲೂ ಈ ಪದ್ಧತಿಗಳು ಗುರುತಿಸಲ್ಪಡುತ್ತವೆ. ಉತ್ತರದಲ್ಲಿ ಗೋತ್ರದ ಹೆಸರನ್ನು ಆ ಗೋತ್ರದ ಪುರುಷರ, ಅವರ ಕುಟುಂಬಕ್ಕೆ ಸೇರಿದವರ ವ್ಯಕ್ತಿನಾಮಗಳ ಜೊತೆಗೆ ಜೋಡಿಸಿಡುವ ಅಭ್ಯಾಸ ಈವರೆಗೂ ನಡೆದುಬಂದಿದೆ. ಉದಾಹರಣೆಗೆ ಅಲ್ಲಿಯ ವೈಶ್ಯ (ಬನಿಯ) ಜಾತಿಯವರ ಗೋತ್ರಗಳು ಹೀಗಿರುತ್ತವೆ: ವೈಶ್, ಗರ್ಗ್, ಗೋಯಲ್, ಗುಪ್ತ, ಅಗ್ರವಾಲ್, ಬಂಸಲ್ ಇತ್ಯಾದಿ. ಇತ್ತೀಚಿನವರೆಗೂ ದಕ್ಷಿಣದಲ್ಲಿ ಬಹಳವಾಗಿ ನಡೆಯುತ್ತಿದ್ದ ಸೋದರಮಾವನ ಸಂಬಂಧ ಬಹಳ ಹಿಂದೆಯೇ ಉತ್ತರದಲ್ಲಿ ಕಡಿಮೆಯಾಗಿಹೋಯಿತು. ಅಲ್ಲಿ ಅತಿ ದಾರುಣವಾದ ಜಾತಿಪೋಷಿತವಾದ ವರದಕ್ಷಿಣೆಯ ರೋಗ ಮಾಡಿರುವ ಒಂದೇ ಒಂದು ಒಳ್ಳೆಯ ಕೆಲಸವೆಂದರೆ, ಅಲ್ಲಿನ ಮಾರುಕಟ್ಟೆಯಲ್ಲಿ ಈ ಸಂಬಂಧದ ಬೆಲೆಯನ್ನು ನಿಕೃಷ್ಟಗೊಳಿಸಿದ್ದು. ಆದರೆ ಆ ಹಳೇ ಪದ್ಧತಿಯ ಕುರುಹಾಗಿ, ಈಗಲೂ ಅಲ್ಲಿಯ ಸೋದರಮಾವನು ವಧುವಿಗೆ ವಸ್ತ್ರ ಒಡವೆ ಇತ್ಯಾದಿಗಳನ್ನು ತನ್ನ ಕೈಯಿಂದ ಕೊಡಲೇಬೇಕು. ಇದಕ್ಕೆ ಪ್ರತಿಯಾಗಿ ದಕ್ಷಿಣದಲ್ಲಿ, ಹಲವು ಪಂಗಡಗಳ ವಿವಾಹ ಮಂತ್ರಗಳ ನಾಟಕದಲ್ಲಿ, ವಧುವಿನ ಮೇಲಿರುವ ತನ್ನ ಮೀಸಲನ್ನು ಸ್ವೇಚ್ಛೆಯಿಂದ ಬಿಟ್ಟುಕೊಡುವ ಸೋದರಮಾವ ಕಾಣಿಕೆಗಳನ್ನು ಪಡೆಯುತ್ತಾನೆ.

ಯಾವುದೇ ಸಮಾಜಕ್ಕೆ ಏನೇ ವ್ಯಾಧಿ ಬಂದರೂ, ಅದರ ನೇರ ದುಷ್ಪರಿಣಾಮಗಳಿಂದ ಹೆಚ್ಚು ಸಾವು ನೋವು ನಷ್ಟಗಳನ್ನು ಅನುಭವಿಸುವವರು ಆ ಸಮಾಜದ ದಲಿತರು ಮತ್ತು ಕಡುಬಡವರು; ಅದಕ್ಕೂ ಹೆಚ್ಚಾಗಿ ಮಹಿಳೆಯರು; ಮತ್ತಷ್ಟು ಹೆಚ್ಚಾಗಿ ಆ ಸಮಾಜದ ಮಕ್ಕಳು ಮತ್ತು ಮುಂದಿನ ಪೀಳಿಗೆಯವರು. ಆದರೆ ಕಾರಣ ಮತ್ತು ಪರಿಣಾಮಗಳ ನಡುವಿನ ಕಾಲಾವಧಿ ಹೆಚ್ಚಿದಂತೆಲ್ಲ, ನಾವು ನಿಜಪ್ರಮಾಣವನ್ನು ಕಡೆಗಣಿಸುತ್ತಾ ಹೋಗುವುದರಿಂದ ನಿಜವನ್ನು ಕಾಣುವುದಿಲ್ಲ.

ಇತರ ಎಲ್ಲ ಸಮಸ್ಯೆಗಳಂತೆಯೇ ಈ ಜಾತಿಕುಲಗೋತ್ರ ಸಮಸ್ಯೆಯಲ್ಲಿಯೂ ಎಲ್ಲರಿಗಿಂತ ಹೆಚ್ಚು ಹಾನಿ ಹೊಂದುವವರು ದಲಿತರು ಮತ್ತು ಬಡವರೇ. ಭಾರತದ ಇಂದಿನ ಎಲ್ಲ ಸಮಾಜಗಳಲ್ಲೂ, ಉತ್ತಮ ಮತ್ತು ಮಧ್ಯಮ ಆರ್ಥಿಕ ವರ್ಗದ ಜನ, ಆಧುನಿಕ ಶಿಕ್ಷಣ ಮತ್ತು ವಿಜ್ಞಾನಗಳ ಪೂರ್ಣಲಾಭ ಪಡೆದುಕೊಂಡು, ತಮ್ಮ ತಮ್ಮ ಜಾತಿ ಮತಗಳ ಎಲ್ಲ ಸಂಪ್ರದಾಯ, ಪದ್ಧತಿ, ಆಚರಣೆಗಳನ್ನೂ ಹೊಗಳಿ, ವಿಜೃಂಭಿಸಿ, ಉತ್ಸವ ಮಾಡಿ, ಇತರರಿಗೆ ಬೋಧಿಸುತ್ತಿದ್ದರೂ, ತಮಗೆ ಹಿತವಲ್ಲದ ಆಚರಣೆ, ಪದ್ಧತಿಗಳಿಂದ ದೂರವಿದ್ದು, ತಮ್ಮ ತಮ್ಮವರ ಆಯುರಾರೋಗ್ಯ ಸುಖಸಂಪತ್ತುಗಳನ್ನು ರಕ್ಷಿಸಿಕೊಳ್ಳುತ್ತಿದ್ದಾರೆ. ಅಶಿಕ್ಷಿತರಾಗಿ ಉಳಿದು, ಆರ್ಥಿಕ ಕೆಳಮಟ್ಟದ ಸ್ಥಿತಿಯಲ್ಲಿ ಬಳಲುತ್ತಿರುವ ದಲಿತ ಜನ, ತಮ್ಮ ತಮ್ಮ ಜಾತಿಮತಗಳ ಕಟ್ಟುಪಾಡುಗಳು, ಉಪಜಾತಿಯ ಕಟ್ಟಳೆಗಳು, ವಂಶಕುಲಗಳ ರೂಢಿಗಳು, ಇವೆಲ್ಲವನ್ನೂ ನಡೆಸದಿದ್ದರೆ, ತಮ್ಮ ಕ್ರೂರದೇವತೆಗಳಿಗೆ ತಾವೇ ಬಲಿಯಾಗುವೆವೆಂದು ಭಯಗ್ರಸ್ತರಾಗಿ, ಪೂಜಾರಿಗಳಿಗೆ ದಂಡ ತೆರುತ್ತಲೇ ಇದ್ದು, ಎಲ್ಲ ಕಷ್ಟಗಳಿಗೂ ಹಿಂದೆಂದೋ ಮೀರಿದ ಕಟ್ಟಳೆಗಳ ಪಾಪಗಳೇ ಕಾರಣವೆಂದುಕೊಂಡು ಕಾಲ ನೂಕುತ್ತಿರುತ್ತಾರೆ. ತಮ್ಮದೇ ಜಾತಿಛಿದ್ರದ ಅತ್ಯಲ್ಪ ಜನಸಂಖ್ಯೆಯ ಕಾರಣಕ್ಕಾಗಿ ಗಂಡು ಹೆಣ್ಣುಗಳಿಗೆ ಜೋಡಿ ಸಿಕ್ಕದ ದೀನಸ್ಥಿತಿಯಲ್ಲಿ, ಬಳಿಬೆಡಗುಗಳ ನಿಷೇಧಗಳನ್ನು ಪೂಜಾರಿ ಹೇಳಿದಂತೆ ನಿಭಾಯಿಸಿದ ಮೇಲೂ, ಗುರುಹಿರಿಯರೂ ಒಪ್ಪುವ ನಿಕಟಸಂಬಂಧದ ಮದುವೆಗಳನ್ನು ತಳ್ಳಿಹಾಕುವ ಶಕ್ತಿ ಸಾಧ್ಯತೆಗಳನ್ನು ಉಳಿಸಿಕೊಂಡಿರುವುದಿಲ್ಲ. ಭಾರತದ ದಲಿತರಿಗೆ, ಬುಡಕಟ್ಟುಗಳಿಗೆ ಮತ್ತು ಜನಜಾತಿಗಳಿಗಂತೂ ಈ ದುಃಸ್ಥಿತಿ ಅತ್ಯಂತ ಹಾನಿಕರವಾದದ್ದು.

**ಮುಂದಿನ ಸಾಧ್ಯತೆಗಳು**

ಹಿಂದೆ ಲಕ್ಷಾಂತರ ವರ್ಷಗಳಲ್ಲಿ, ಸಹಸ್ರಾರು ಸಸ್ಯ ಮತ್ತು ಪ್ರಾಣಿವರ್ಗಗಳು ನಿಶ್ಶೇಷವಾದವು; ಈಗಲೂ ಆಗುತ್ತಿವೆ. ಅದೇ ರೀತಿಯಲ್ಲಿ, ಆದರೆ ಬೇರೆ ಕಾರಣಕ್ಕಾಗಿ, ಈ ಬುಡಕಟ್ಟು ಜಾತಿಗಳು, ತಮ್ಮ ತಮ್ಮ ಅತಿಸೀಮಿತ ಜಡ್ಡುಹಿಡಿದ ಲಿಂಗಾಣುಖಾತೆಗಳ ಇರುಕಿನಲ್ಲಿಯೆ ಮತ್ತೆ ಮತ್ತೆ ಸಂತತಿ ಪಡೆಯುತ್ತಿರುವುದರಿಂದ (ಇನ್‌ಬ್ರೀಡಿಂಗ್ ಅಥವಾ ಅಂತಃಸ್ಥಪ್ರಜೋತ್ಪತ್ತಿಯಿಂದ), ಹಳೆಯ ರೋಗಗಳಿಂದ ಹೊರಗೆ ಬಾರದೆಯೊ, ಹೊಸದೊಂದು ರೋಗದ ನಿಗ್ರಹಕಾಂಶಗಳ ನ್ಯೂನತೆಯಿಂದಲೊ, ಕ್ಷೀಣಿಸಿ ಹೋಗುತ್ತಿದ್ದಾರೆ. ಇಂತಹ ಸ್ಥಿತಿಯಲ್ಲಿರುವವರನ್ನೆಲ್ಲ ಎಲ್ಲರೊಡನೆ ಬೆರೆತು ಬಾಳಿ ಬೆಳೆಯುವುದಕ್ಕೆ ಪ್ರಬಲವಾಗಿಯೇ ಪ್ರಚೋದಿಸಬೇಕಾಗಿದೆ. ಜಾತಿ, ಕುಲ, ಬಳಿ, ಬೆಡಗು ಇತ್ಯಾದಿ ನಿರ್ಬಂಧಗಳನ್ನು ನಿರ್ಲಕ್ಷಿಸಿ, ಮದುವೆಗೆ ಹೊಸ ಸಂಬಂಧಗಳನ್ನು ಬೆಳೆಸಿಕೊಳ್ಳುವುದೊಂದೇ ಇವರಿಗಿರುವ ಆಪದ್ರಕ್ಷೆ. ಇವರ ಸಂಸ್ಕೃತಿಯನ್ನು ಉಳಿಸುವುದಕ್ಕಿಂತ ಇವರನ್ನು ಉಳಿಸುವುದು ಸಮಾಜದ ಹೆಚ್ಚು ಅಗತ್ಯದ ಕರ್ತವ್ಯವಾಗಬೇಕು. ಇಂತಹ ಸುಧಾರಣೆಗಳು ಖಂಡಿತವಾಗಿಯೂ ಅಸಾಧ್ಯವಲ್ಲ; ಚರಿತ್ರೆಯೇ ಸಾಕ್ಷಿ.

**ಡಾ|| ಎಂ. ಎನ್. ಕೇಶವರಾವ್**
೩೮೮, ವೆಂಕಟೇಶ ದಾಸ್ ರಸ್ತೆ, ಪದ್ಮನಾಭನಗರ, ಬೆಂಗಳೂರು - ೫೬೦ ೦೭೦

ಲಂಕೇಶರು ಕಾವ್ಯದ ಮೂಲಕ ಅಗಾಧವಾದುದನ್ನು ಸಾಧಿಸಲಿಲ್ಲ. ಲಂಕೇಶರು ಕಾವ್ಯ ರಚನೆಗೆ ಒಂದು ಮಿತಿಯನ್ನು ತಮಗೆ ತಾವೆ ಹಾಕಿಕೊಂಡು ಸಾಗಿದ್ದರು. ಒಳಗೊಳಗೆ ಕವಿತೆಯನ್ನು ಪ್ರೀತಿಸುತ್ತಿದ್ದ ಅವರು ಗದ್ಯಕ್ಕೆ ಕೊಟ್ಟಷ್ಟು ಮಹತ್ವ ಯಾಕೋ ಕವಿತೆಗೆ ಕೊಡಲಿಲ್ಲ. ಹಾಗಾಗಿದ್ದರೆ ಕಾವ್ಯ ಕ್ಷೇತ್ರದಲ್ಲಿ ಅವರು ಮಹತ್ವದ ಕವಿಯಾಗಿಯೂ ನಿಲ್ಲುತ್ತಿದ್ದರು.

## ಸತ್ಯಕ್ಕಿಂತ ಅನ್ನ ಮುಖ್ಯ



# ಲಂಕೇಶರ ಕಾವ್ಯ ಒಂದು ಚಿಂತನೆ

ದಸ್ತಗೀರ ಸಾಬ್ ದಿನ್ನಿ

ಕನ್ನಡ ನಾಡು ಕಂಡ ಅಪರೂಪದ ವ್ಯಕ್ತಿಗಳಲ್ಲಿ ಪಿ. ಲಂಕೇಶರು ಒಬ್ಬರು. ಹಲವು ಬಗೆಯ ಪ್ರಗತಿಶೀಲ ವಿಚಾರಧಾರೆಗಳಿಂದ ಆಕರ್ಷಿತರಾಗಿದ್ದ ಇವರು ಅನೇಕ ಜನಪರ ಚಳುವಳಿಗಳಲ್ಲಿ ಕೂಡ ತಮ್ಮನ್ನು ತೊಡಗಿಸಿಕೊಂಡಿದ್ದರು. ಬಾಲ್ಯದಲ್ಲಿರುವಾಗಲೇ ಸಾಹಿತ್ಯದ ಕಡೆ ವಾಲಿದ ಲಂಕೇಶರು ಕವಿಯಾಗಿ, ಕತೆಗಾರರಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ, ಅನುವಾದಕರಾಗಿ, ಸಿನಿಮಾ ನಿರ್ದೇಶಕರಾಗಿ ನಾಡಿನ ತುಂಬೆಲ್ಲ ಹೆಸರು ಮಾಡಿದ್ದರು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಹತ್ತು ವರ್ಷ ಸೇವೆ ಸಲ್ಲಿಸಿದ್ದ ಇವರು ಯಾವುದೋ ಕಾರಣಕ್ಕೆ ರಾಜೀನಾಮೆ ನೀಡಿ – 'ಲಂಕೇಶ್ ಪತ್ರಿಕೆ'ಯನ್ನು ಹುಟ್ಟುಹಾಕಿದರು. ಬರಹಗಾರರಿಗೆ ಉತ್ತಮ ವೇದಿಕೆಯಾಗಿ ರೂಪುಗೊಂಡ ಲಂಕೇಶ್ ಪತ್ರಿಕೆ ನಾಡಿನ ಪ್ರತಿಭಾವಂತ ಬರಹಗಾರರನ್ನು ಪತ್ತೆ ಹಚ್ಚಿ ಬೆಳಕನ್ನು ನೀಡಿದೆ. ಕನ್ನಡ ನಾಡಿಗೆ ಅವರ ಕ್ರಿಯಾಶೀಲ ವ್ಯಕ್ತಿತ್ವ, ಚಿಂತನೆಯನ್ನು ಪರಿಚಯಿಸಿದೆ. ವಿವಿಧ ಸಂಸ್ಕೃತಿ ಪ್ರದೇಶದಿಂದ ಬಂದ ಅವರಲ್ಲಿ ಆತ್ಮವಿಶ್ವಾಸ ಭರವಸೆಗಳನ್ನು ಬಿತ್ತಿದ ಕೀರ್ತಿ ಈ ಪತ್ರಿಕೆಗೆ ಸಲ್ಲುತ್ತದೆ. ಲಂಕೇಶರು ವಿಲಕ್ಷಣ ಸ್ವಭಾವದವರಾಗಿದ್ದರು. ಒಂದು ಕಾಲಕ್ಕೆ ಎಲ್ಲರನ್ನೂ ತಾವೇ ಕರೆದುಕೊಂಡು ಬೆಳೆಸಿದ ಲಂಕೇಶರು ಕೊನೆಗೆ ಅದೇ ಜನರನ್ನೇ ಪತ್ರಿಕೆಯಿಂದ ದೂರವಿಟ್ಟರು.

ಅನೇಕ ಬರಹಗಾರರು ತಮ್ಮ ಬರವಣಿಗೆಯನ್ನು ಕವಿತೆಯಿಂದಲೇ ಆರಂಭಿಸುತ್ತಾರೆ. ಇದಕ್ಕೆ ಲಂಕೇಶರು ಕೂಡ ಹೊರತಾಗಿರಲಿಲ್ಲ. ಲಂಕೇಶರು ಇಂಗ್ಲಿಷ್ ಆನರ್ಸ್ ವಿದ್ಯಾರ್ಥಿಯಾಗಿರುವಾಗಲೇ (೧೯೫೬) 'ಇಂಚರ' ಎಂಬ ಕವನ ಸಂಕಲನ ತಂದರು. ಸೆಂಟ್ರಲ್ ಕಾಲೇಜಿನ ಕನ್ನಡ ಸಂಘದಿಂದ ಪ್ರಕಟವಾದ ಈ ಸಂಕಲನ ಹನ್ನೆರಡು ಪುಟಗಳ ಪುಟ್ಟ ಪುಸ್ತಕ.

ಲಂಕೇಶರ ಯುವ ಮನಸ್ಸು ತನ್ನ ಇಡಿಯಾದ ವ್ಯಕ್ತಿತ್ವವನ್ನು; ಬದುಕಿನ ಅದಮ್ಯ ಉತ್ಸಾಹವನ್ನು; ತುಡಿತ ಮಿಡಿತಗಳನ್ನು; ಜಗದಗಲ ಮುಗಿಲಗಲವಾಗಿ ಹರಿದಾಡುವ ಚಿಂತನೆಯನ್ನು ಈ ರೀತಿ ಅಭಿವ್ಯಕ್ತಿಸಿದೆ. ಈ ಕವಿತೆಯ ಬಿಚ್ಚು ನುಡಿಗಳನ್ನು ಕಂಡು ಪ್ರಗತಿಶೀಲ ಕಾದಂಬರಿಕಾರರಾದ ಬಸವರಾಜ ಕಟ್ಟೀಮನಿಯವರು ಇದನ್ನು 'ಸಿಡಿಲ ಮರಿ' ಎಂದು ಬಣ್ಣಿಸಿದ್ದಾರೆ.

ನಭದುದ್ದ ಬೆಳೆಯುವೆನು
ಸ್ವರ್ಗವನು ಮೂಸಿ
ಲಂಕೆಯನು ಸೇರುವೆನು
ಸಾಗರವನೀಸಿ !
ಬೆಟ್ಟಗುಡ್ಡಗಳೆಸೆದು
ಸೇತುವೆಯ ಕಟ್ಟಿ
ಕರೆತರುವೆ ನನ್ನವಳ
ಹೆಮ್ಮೆಯನು ತಟ್ಟಿ!

ಬನಬನಂಗಳ ತುಳಿದು
ಹೊರಳಬಲ್ಲೆ!
ಎರಳೆ ಬಿಲ್ಲುಗಳ ಹಿಡಿದು
ತೆರಳಬಲ್ಲೆ!

'ಇಂಚರ' ಕವನ ಸಂಕಲನದ ನಂತರ ಲಂಕೇಶರು 'ಬಿಚ್ಚು' ಮತ್ತು 'ತಲೆಮಾರು' ಕವನ ಸಂಕಲನಗಳನ್ನು ಪ್ರಕಟಿಸಿದರು. ಲಂಕೇಶರು ಈ ಕವನ ಸಂಕಲನಗಳನ್ನು ಪ್ರಕಟಿಸಿದ ನಂತರ ಅನುವಾದಕ್ಕೆ ಕೈಹಾಕಿ ಪ್ರಪಂಚದ ಪ್ರಪ್ರಥಮ ನವ್ಯಕವಿ ಬೋದಿಲೇರನ ಇಪ್ಪತ್ತೈದು ಕವನಗಳನ್ನು ಅನುವಾದಿಸಿ 'ಪಾಪದ ಹೂಗಳು' ಎನ್ನುವ ಹೆಸರಿನಲ್ಲಿ (೧೯೭೫) ಸಂಕಲನವನ್ನು ಪ್ರಕಟಿಸಿದರು. ಬೋದಿಲೇರನ ವಿಶಿಷ್ಟ ಬದುಕು, ಖಯಾಲಿ, ಚಿಂತನೆ, ಅವನ ಕಾವ್ಯದ ನಾಜೂಕು, ಖಚಿತವಾದ ಲಯ, ಗೇಯತೆಯನ್ನು ಲಂಕೇಶರು ಇಲ್ಲಿ ಸಮರ್ಥವಾಗಿ ಅನುವಾದಿಸಿಕೊಟ್ಟಿದ್ದಾರೆ. ಲಂಕೇಶರೇ ಹೇಳುವಂತೆ ತನ್ನ ನೋವನ್ನೆಲ್ಲಾ ಕಾವ್ಯದಲ್ಲಿ ಚೆಲ್ಲಿಕೊಳ್ಳುತ್ತಲೇ ಅದಕ್ಕೆ ಸ್ವಂತ ಜೀವ ಬರುವಷ್ಟು ಕಲಾತ್ಮಕತೆ ತೋರಿರುವುದು ಬೋದಿಲೇರನ ಹಿರಿಮೆ.

ಗೋಪಾಲಕೃಷ್ಣ ಅಡಿಗರು ಹುಟ್ಟುಹಾಕಿದ ನವ್ಯ ಚಳುವಳಿಯ ಪ್ರಭಾವಕ್ಕೆ ಲಂಕೇಶರು ನೇರವಾಗಿ ಒಳಗಾದರು. ಹೀಗಾಗಿ ನವ್ಯದ ಈ ಘಾಟು, ಕವಿತೆಯಿಂದ ಹಿಡಿದು ಅವರ ಕತೆ-ಕಾದಂಬರಿಗಳ ಮೇಲೆಯೂ ತುಂಬಿ ತುಳುಕಿದೆ. ಲಂಕೇಶರು

ಸಂಪಾದಿಸಿ ಹೊರತಂದ ಪ್ರಾತಿನಿಧಿಕ ಕಾವ್ಯ ಸಂಗ್ರಹ 'ಅಕ್ಷರ ಹೊಸ ಕಾವ್ಯ' ಕಾವ್ಯ ಪ್ರಪಂಚದಲ್ಲೇ ಒಂದು ದೊಡ್ಡ ಮೈಲುಗಲ್ಲು. ಸುಮಾರು ಐವತ್ತು ಜನ ಕವಿಗಳ ಇನ್ನೂರಕ್ಕೂ ಹೆಚ್ಚು ಮಹತ್ವದ ಕವಿತೆಗಳು ಇಲ್ಲಿ ದಾಖಲೆಗೊಂಡಿವೆ. ಈ ಸಂಕಲನಕ್ಕೆ ಸುದೀರ್ಘವಾಗಿ ಬರೆದ 'ಹೊಸ ಕವಿ ಹೊಸ ಕಾವ್ಯ' ಶೀರ್ಷಿಕೆಯಡಿಯ ಸಂಪಾದಕರ ಮಾತುಗಳು ಅಭ್ಯಾಸಯೋಗ್ಯವಾಗಿವೆ. ಸಮಕಾಲೀನ ವಿದ್ಯಮಾನಗಳಿಗೆ ಕವಿಗಳು ಒಡ್ಡಿಕೊಂಡ ಅರ್ಥಪೂರ್ಣ ರೀತಿ ಇಲ್ಲಿದೆ. ಕವಿ ಸಮಾಜದ ಕೊರಳು. ಸಮಾಜದ ಪ್ರತಿನಿಧಿ. ಹೀಗಾಗಿಯೇ ಪ್ರಕೃತಿ ಪ್ರೀತಿ, ಸಮಾಜ, ಬದುಕು, ನಿರೀಕ್ಷೆ, ಕಾಮ, ಬೆಳಗು, ಮನೆ, ಮೋಡ, ಬೆರಗು, ಬೆಳದಿಂಗಳು, ಖಾಸ್‌ಬಾತ್, ಚಿಟ್ಟೆಹಾಡು, ಹಾಯ್ಕು ಹೀಗೆ ವೈವಿಧ್ಯಮಯ ದನಿಗಳು ಇಲ್ಲಿವೆ.

ಲಂಕೇಶರ ಸಮಗ್ರ ಕಾವ್ಯ 'ಚಿತ್ರಸಮೂಹ' ಪ್ರಕಟಗೊಂಡಿದೆ. ಲಂಕೇಶರು ಬರೆದ 'ಅಕ್ಕ-ತಮ್ಮ' ಕವಿತೆಯಲ್ಲಿ ಮುಗ್ಧ ಹುಡುಗನೊಬ್ಬ ಎದುರಿಸುವ ಮನುಷ್ಯ ಬದುಕಿನ ಸಂಬಂಧಗಳಿವೆ. ಅಕ್ಕ ಮತ್ತು ರಂಗ್ಯ, ಅಕ್ಕ ಮತ್ತು ಭಾವ, ಅಕ್ಕ ಮತ್ತು ಅಪ್ಪರ ನಡುವಿನ ಪ್ರೀತಿ, ಅದಕ್ಕೆ ವ್ಯತಿರಿಕ್ತವಾದ ಬದುಕು ಇಲ್ಲಿ ಹುಡುಗನನ್ನು ಗಾಢವಾದ ಚಿಂತನೆಯ ನೆಲೆಗೆ ಈಡುಮಾಡುತ್ತದೆ. ಅಕ್ಕ ಮತ್ತು ಅಪ್ಪನ ಕಣ್ಣುಗಳಲ್ಲಿ ನೀರು ಕಂಡ ಈ ಹುಡುಗ ಪುಸ್ತಕ ಹಿಡಿದು ಮೂಲೆಗೆ ಹೋಗುತ್ತಾನೆ. ಆ ಮೂಲಕ ಬದುಕಿನ ಪುಟಗಳ ಶೋಧನೆಗೆ ಕೈಹಾಕುತ್ತಾನೆ.

ಲಂಕೇಶರ ಮಹತ್ವದ ಕವಿತೆಯೆಂದರೆ 'ಅವ್ವ-೧'. ಕನ್ನಡ ಕಾವ್ಯ ಚರ್ಚೆಯ ಸಂದರ್ಭದಲ್ಲಿ ಬಿಡದೆ ಕೇಳಿಬರುವ ಕವಿತೆಗಳಲ್ಲಿ ಇದೂ ಒಂದು.

''ನನ್ನವ್ವ ಫಲವತ್ತಾದ ಕಪ್ಪು ನೆಲ
ಅಲ್ಲಿ ಹಸಿರು ಪತ್ರದ ಹರವು
ಬಿಳಿಯ ಹೂ ಹಬ್ಬ
ಸುಟ್ಟಷ್ಟು ಕಸುವು;
ನೊಂದಷ್ಟು ಹೂ ಹಣ್ಣು
ಮಕ್ಕಳೊದ್ದರೆ ಅವಳ
ಅಂಗಾಂಗ ಪುಳಕ
ಹೊತ್ತ ಬುಟ್ಟಿಯ ಇಟ್ಟು
ನರಳಿ ಎವೆ ಮುಚ್ಚಿದಳು
ತೆರೆಯದಂತೆ''

'ಅವ್ವ-೨', ಈ ಕವಿತೆ 'ಅವ್ವ-೧' ರಚನೆಯಾದ ಇಪ್ಪತ್ತೈದು ವರ್ಷಗಳ ನಂತರ ಬರೆದದ್ದು. ತನ್ನಿಂದ ದೂರವಾದ, ನೆನಪಾಗಿ ಕಾಡುವ ಅವ್ವಳ ಬಗೆಗಿನ ವಿವರಗಳು ಇಲ್ಲಿವೆ. ಅವ್ವ-೧ರಲ್ಲಿ ಮೂಡಿಬಂದ ಪ್ರತಿಮೆ- ಉಪಮೆಗಳಾವುವೂ ಇಲ್ಲಿ ಕವಿಗೆ ಕಾಡಿಲ್ಲ.

ದೂರದ ಜಿಲ್ಲೆಯ
ಹಸಿದ ಜೀವಕ್ಕೆ ನಾನು
ತುತ್ತು ನೀಡಿದ್ದು ಅವ್ವನಂತಲ್ಲ,
ನನ್ನ ಅಪ್ಪನಂತೆ
ಆತ ಕೊಡುವುದರಲ್ಲಿ ಸುಖ
ಕಾಣುತ್ತಿದ್ದ ಮನುಷ್ಯ
ಪೂರ್ತಿ ಕೊಟ್ಟು ಬಿಡುವ ಮುನ್ನ
ಮುಂದಿನ ಚಳಿಗಾಲಕ್ಕೆ
ಕಂಬಳಿಗೆಂದು ಕಾಸು ಇಟ್ಟುಕೊಂಡೆ
ಅದು ಅವ್ವನಂತೆ.

'ನಾನು ಗಾಂಧಿ ಮತ್ತು ನಮ್ಮ ಮೇಷ್ಟು' ಎನ್ನುವ ಕವಿತೆ ಗಾಂಧಿ ತೀರಿಕೊಂಡಾಗಿನ ವಿವರಣೆ ನೀಡುವುದರೊಂದಿಗೆ ಆರಂಭವಾಗುತ್ತದೆ. ಇಲ್ಲಿ ಲಂಕೇಶರ ಬಾಲ್ಯದ ವಿವರಣೆ ಇದೆ. ಶಾಲೆಗೆ ರಜೆ ನೀಡಿದುದರ ಬಗ್ಗೆ ವಿದ್ಯಾರ್ಥಿಗಳಿಗೆ ಹೇಳುತ್ತಲೇ ಮೇಷ್ಟು ಗಾಂಧೀಜಿಯನ್ನು ನೆನಪಿಸಿಕೊಂಡು ಅಳುತ್ತಾರೆ. ನಂತರ ಮೇಷ್ಟು ಕೂಡ ಸಾಯುತ್ತಾರೆ. ಗಾಂಧೀಜಿ ಸತ್ತದ್ದು ಮಾಸ್ತರು ಸತ್ತದ್ದು ಇಲ್ಲಿ ಕವಿಗೆ ನೆನಪಾಗುತ್ತದೆ.

ಕವಿಗೆ ಗಾಂಧೀಜಿ ಮತ್ತು ಮಾಸ್ತರರ ಸಾವುಗಳು ತನ್ನ ಸಾವಿನ ಕುರಿತಂತೆಯೂ ಆಲೋಚನೆಗೀಡುಮಾಡುತ್ತವೆ. ನಿರೂಪಕ ಇಲ್ಲಿ ಮಾಸ್ತರರ ಸಾವನ್ನು ಕಂಡಂತೆ ಗಾಂಧೀಜಿ ಸಾವನ್ನು ಕಣ್ಣಾರೆ ಕಂಡಿಲ್ಲ. ಆದರೂ ಈ ಎರಡೂ ಸಾವುಗಳು ಮನುಷ್ಯನ ನಿಜವಾದ ಬದುಕಿನ ಬಗೆಗೆ ಮುಖಾಮುಖಿಯಾಗಿ ಚಿಂತನೆಗೆ ಹಚ್ಚುತ್ತವೆ. ಕವಿತೆಯ ಕೊನೆಯ ಸಾಲುಗಳು ವಾಸ್ತವ ಸತ್ಯವನ್ನು ತೆರೆದಿಡುವ ರೀತಿ ಗಮನಾರ್ಹವಾಗಿದೆ.

''ದ್ವಂದ್ವಮಯ ಜಗಕ್ಕೆ
ಸತ್ಯವಾಗದು ಮಹಾತ್ಮ
ಅನ್ನ ಸತ್ಯವಾಗದು ಕಣೋ
ಮುಗಿಯಲು ಅಂಧಕ
ಹೆಳವನಾಗಬೇಕಾದಲ್ಲಿ
ಹತ್ತು ತಲೆಗಳು ಬಿದ್ದು
ಹುತ್ತ ಕೊನರುವ ಇಲ್ಲಿ ಬೆಂಕಿ.

ದ್ವಂದ್ವಮಯ ಜಗತ್ತನ್ನು ಗುರುತಿಸಿರುವ ನಿರೂಪಕರು ಇಲ್ಲಿ ಅನ್ನ ಮತ್ತು ಸತ್ಯಗಳು ಬೇರೆಯಾಗಿಯೇ ಉಳಿಯುತ್ತವೆ ಎನ್ನುವ ನಿಲುವನ್ನು ಪ್ರತಿಪಾದಿಸುತ್ತಾರೆ. ಮನುಷ್ಯನ ಸ್ವಾರ್ಥ ಸಂಘರ್ಷದ ಬದುಕಿನಲ್ಲಿ ಗೆಲ್ಲುವುದು ಅನ್ನವೇ ಹೊರತು ಸತ್ಯವಲ್ಲ ಎನ್ನುವ ಆಶಯವನ್ನು ಕವಿತೆಯ ಮೂಲಕ ಎತ್ತಿಹಿಡಿದಿದ್ದಾರೆ. ಹುತಾತ್ಮರಾದ ಗಾಂಧಿ ಕಣ್ಮರೆಯಾದ ಮೇಷ್ಟು ಆದರ್ಶವಾಗಿ ಕಾಣುವುದಿಲ್ಲ. ಹಲವು ಸವಾಲುಗಳನ್ನು ಎಸೆಯುವ ಬದುಕಿನ ಮುಂದೆ ಇವರ ಜೀವನ ವಿಧಾನ, ಸಮಾಜ ಸುಧಾರಣೆ, ಪ್ರಗತಿಪರ ಚಿಂತನೆಗಳು ಕವಿಗೆ ಇಲ್ಲಿ ಮಹತ್ವದ ವಿಚಾರಗಳಾಗಿ ಕಾಡಿಲ್ಲ.

ನೀಲುವಿನ ಹೆಸರಿನಲ್ಲಿ ಹೇರಳವಾಗಿ ಬರೆಯಲಾದ ಅವರ ಅನೇಕ ಚುಟುಕಗಳು ಲವಲವಿಕೆಯಿಂದ ಕೂಡಿವೆ, ಪರಿಣಾಮಕಾರಿಯಾಗಿವೆ. ಚುಟುಕಗಳು ಹೇಗಿರಬೇಕು ಎಂಬುದಕ್ಕೆ ಇವರ ಚುಟುಕಗಳು ಮಾದರಿಯಾಗಿ ನಿಲ್ಲುತ್ತವೆ.

ಹನಿ ನೀರು
ಕಿಂಚಿತ ಹಸಿರು
ಸೂರ್ಯನ ಕಿರಣ
ಇಷ್ಟು ಕಂಡಲ್ಲಿ
ಪುಟ್ಟ ಗೂಡು ಕಟ್ಟಿ
ತತ್ತಿ ಇಟ್ಟು
ಮರಿ ಮಾಡಿ
ತಿಂಗಳ ಸ್ವರ್ಗ ಕಾಣುವ
ಪಕ್ಷಿ ನಾನಾಗಲೆ ?

ದೀಪಾವಳಿಯ
ಕಗ್ಗತ್ತಲಿನ ರಾತ್ರಿಯೇ
ನನ್ನ ಮನದ
ಭಿತ್ತಿಯಾಗಿ
ನನ್ನವನ ಪ್ರೇಮ
ಕಾಮದ ಕತೆಗಳ
ಬರೆಯುವೆ.

ಒಟ್ಟಾರೆ ಹೇಳಬೇಕೆಂದರೆ, ಲಂಕೇಶರು ಕಾವ್ಯದ ಮೂಲಕ ಅಗಾಧವಾದುದನ್ನು ಸಾಧಿಸಲಿಲ್ಲ. ಲಂಕೇಶರು ಕಾವ್ಯ ರಚನೆಗೆ ಒಂದು ಮಿತಿಯನ್ನು ತಮಗೆ ತಾವೆ ಹಾಕಿಕೊಂಡು ಸಾಗಿದ್ದರು. ಲಂಕೇಶರು ಸೃಷ್ಟಿಸಿ ಹೋದ 'ಅವ್ವ'ದಂತಹ ಕೆಲ ಕವಿತೆಗಳನ್ನು ಮರೆಯಲು ಸಾಧ್ಯವಿಲ್ಲ. ಮನುಷ್ಯ ಸಂಬಂಧ ಮಾನವೀಯತೆಯ ಬಗೆಗೆ ಮಾತನಾಡುತ್ತಲೇ ವೈಚಾರಿಕ ಪ್ರಜ್ಞೆಯನ್ನು ಅವು ಬಿತ್ತುತ್ತವೆ. ಒಳಗೊಳಗೆ ಕವಿತೆಯನ್ನು ಪ್ರೀತಿಸುತ್ತಿದ್ದ ಅವರು ಗದ್ಯಕ್ಕೆ ಕೊಟ್ಟಷ್ಟು ಮಹತ್ವ ಯಾಕೋ ಕವಿತೆಗೆ ಕೊಡಲಿಲ್ಲ. ಹಾಗಾಗಿದ್ದರೆ ಕಾವ್ಯ ಕ್ಷೇತ್ರದಲ್ಲಿ ಅವರು ಮಹತ್ವದ ಕವಿಯಾಗಿಯೂ ನಿಲ್ಲುತ್ತಿದ್ದರು.

ದಸ್ತಗೀರ ಸಾಬ್ ದಿನ್ನಿ
ಕನ್ನಡ ಉಪನ್ಯಾಸಕ, ಟ್ಯಾಗೋರ ಸ್ಮಾರಕ ಪದವಿಪೂರ್ವ ಕಾಲೇಜ್, ರಾಯಚೂರು

# ಟಿ. ಟಿ. ಶರ್ಮರ ಹಿರಿಮೆ



**ಬೆಂ**ಗಳೂರಿನ ನವನೀತ ಪ್ರಕಾಶನದಿಂದ ಇತ್ತೀಚೆಗೆ ಪ್ರಕಟವಾದ ತಿರುಮಲೆ ತಾತಾಚಾರ್ಯ ಶರ್ಮರ ಪುಸ್ತಕ 'ನನ್ನ ಜೀವನ ಮತ್ತು ಧ್ಯೇಯ' ಬಹಳ ಮೌಲಿಕವಾದ, ಓದಿಸಿಕೊಂಡು ಹೋಗುವ ಒಂದು ಆತ್ಮಕಥನ. ಈ ಪುಸ್ತಕದಲ್ಲಿ ಶರ್ಮರು ಮದರಾಸಿನಲ್ಲಿದ್ದ ಭಾರತ ಪ್ರಾಚ್ಯ ವಿಮರ್ಶಾ ಶಾಖೆಯ ಶಿಲಾಶಾಸನಗಳ ವಿಭಾಗದಲ್ಲಿ ಅದರ ಮುಖ್ಯ ಅಧಿಕಾರಿಗಳಾಗಿದ್ದ ಹೊಸಕೋಟೆ ಕೃಷ್ಣಶಾಸ್ತ್ರಿಗಳ ಮಾರ್ಗದರ್ಶನದಲ್ಲಿ ಶಾಸನಗಳನ್ನು ಓದುವ ಕೆಲಸ ಮಾಡಿದ್ದರ ವರದಿಯನ್ನು ದಾಖಲಿಸಿದ್ದಾರೆ. ಅದರಷ್ಟೇ ಸ್ವಾರಸ್ಯಕರವಾಗಿ ತಾತಾಚಾರ್ಯ ಶರ್ಮರು ತಮ್ಮ ಮನೆತನದ ಹಿರಿಮೆಯ ಬಗೆಗೆ, ತಮ್ಮ ಹಾಡಿನ ಅಜ್ಜಿಯ ಬಗೆಗೆ, ತಮ್ಮ ಅಸಂಖ್ಯಾತ ಸ್ನೇಹಿತರ ಬಗೆಗೆ ಈ ಪುಸ್ತಕದಲ್ಲಿ ಬಹು ರೋಚಕವಾಗಿ ಹೇಳಿದ್ದಾರೆ. ತಿರುಮಲ ಎನ್ನುವುದು ತಾತಾಚಾರ್ಯ ಶರ್ಮರ ಮನೆತನದ ಹೆಸರು. ಈ ಮನೆತನದ ತಿರುಮಲ ವೆಂಕಟ ತಾತಾಚಾರ್ಯರು ವಿಜಯನಗರದ ಕೃಷ್ಣದೇವರಾಯನನ್ನು ಸಿಂಹಾಸನದ ಮೇಲೆ ಕೂಡಿಸಿ ಮುಕುಟಧಾರಣ ಮಹೋತ್ಸವವನ್ನು ನೆರವೇರಿಸಿದವರು; ರಾಜ ಗುರುಗಳು. ವಿಜಯನಗರ ಸಾಮ್ರಾಜ್ಯ ಖಿಲವಾದ ಮೇಲೆ ತಿರುಮಲ ಮನೆತನದವರು ಬೇರೆ ಬೇರೆ ಕಡೆಗೆ ಚದುರಿ ಹೋದರು. ತಿರುಮಲೆ ತಾತಾಚಾರ್ಯ ಶರ್ಮರದು ಪಟ್ರಕೇತದಲ್ಲಿ ತಿರುಮಲ ಮನೆತನ. ಈ ಮನೆತನದವರು ಸ್ವಯಂ ಆಚಾರ್ಯ ಪುರುಷರು. ಇವರಿಗೆ, ಚಿಕ್ಕಬಳ್ಳಾಪುರದಲ್ಲಿ ೧೨೮ ಅಂಕಣದ ಮನೆ ಇತ್ತಂತೆ. 'ನನ್ನ ಮನೆತನ ಮತ್ತು ನನ್ನ ಹೆಸರು ಎರಡೂ ನನಗೆ ವ್ಯಕ್ತಿತ್ವ ಮತ್ತು ವರ್ಚಸ್ಸು ಕೊಟ್ಟಿತು. ರಾಜಠೀವಿ, ರಾಜಗಾಂಭೀರ್ಯಕ್ಕೆ ಕಾರಣವಾದವು' ಎಂದು ಶರ್ಮರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ತಾತಾಚಾರ್ಯ ಶರ್ಮರ ತಂದೆ ಶ್ರೀನಿವಾಸ ತಾತಾಚಾರ್ಯರು, ಚಿಕ್ಕತಾತ ಶ್ರೀರಂಗಾಚಾರ್ಯರಿಗೆ ಶರ್ಮ ದತ್ತುಪುತ್ರರು. ದೊಡ್ಡತಾತ ಪುರಾಣಂ ರಾಮಾಚಾರ್ಯರು ಒಳ್ಳೆಯ ವೈದ್ಯರೂ ಕೂಡ.

ಅವರ ಪುರಾಣ ಸಿಂಹನಾದದಂತಿತ್ತು. ಅವರು ಪುರಾಣ ಶ್ರವಣ ಆರಂಭಿಸಿದರೆಂದರೆ ಜನ ನಾಲ್ಕೂ ದಿಕ್ಕಿನಿಂದ ಓಡೋಡಿ ಬಂದು ಸೇರುತ್ತಿದ್ದರು ಎಂದು ಅಜ್ಜಿ ಠೀವಿಯಿಂದ ಹೇಳುತ್ತಿದ್ದರಂತೆ. ಪುರಾಣಂ ರಾಮಾಚಾರ್ಯರು ಎಳನೀರು ಕುಡಿಯುವ ವೈಖರಿ ಹೀಗಿತ್ತು. ೪-೫ ಎಳನೀರನ್ನು ಕೆತ್ತಿ ಒಂದು ದಬರಿಗೆ ಹುಯ್ದು ಅದಕ್ಕೆ ಕೇಸರಿ, ಪಚ್ಚ ಕರ್ಪೂರ, ಏಲಕ್ಕಿ, ಹಾಕಿ, ಗಟಗಟನೆ ಕುಡಿಯುತ್ತಿದ್ದರಂತೆ. ತಾತಾಚಾರ್ಯ ಶರ್ಮರ ಇನ್ನೊಬ್ಬ ದೊಡ್ಡಪ್ಪ ರಾಜಗೋಪಾಲಾಚಾರ್ಯರು, ಸಂಸ್ಕೃತ ಪಾಠಶಾಲಾ ಅಧ್ಯಕ್ಷರು. ಚಿಕ್ಕಬಳ್ಳಾಪುರದಿಂದ ಪ್ರಜಾಪ್ರತಿನಿಧಿ ಸಭೆಗೆ ನಾಮಕರಣ ಮಾಡಲ್ಪಟ್ಟ ಸದಸ್ಯರು ಕೂಡ. ಕುಂಪಣಿ ಆಡಳಿತ ಆರಂಭವಾದ ೫೦ ವರ್ಷಗಳೊಳಗೇ ನಮ್ಮ ದೇಶದಲ್ಲಾದ ಒಂದು ಅವನತಿಯ ಬಗೆಗೆ ಶರ್ಮರು ನೊಂದು ಹೇಳುತ್ತಾರೆ. ಪಾಶ್ಚಾತ್ಯ ನಾಗರಿಕತೆಗೆ ಭಾರತ ಶರಣಾಯಿತು. ಆಂಗ್ಲಭಾಷೆಯ ಮೋಹ ಬೆಳೆಯಿತು. ಇದನ್ನು ತಡೆಗಟ್ಟುವ ಶಕ್ತಿ ವೈದಿಕ ಧರ್ಮಕ್ಕೆ ಇಲ್ಲವಾಯಿತು. ಆಚಾರ, ವಿಚಾರ, ಸಂಪ್ರದಾಯಗಳೆಲ್ಲ ಮಣ್ಣುಮುಕ್ಕಿದವು. ಅಣ್ಣಮಾಚಾರ್ಯರೆಂಬುವವರು, ಅವರ ಸ್ನೇಹಿತ ಶಾಸ್ತ್ರಿಯನ್ನು ಭೇಟಿಯಾದಾಗ ಹೀಗೆ ಹೇಳಿದರಂತೆ, 'ಈಗ ನಮ್ಮ ರಂಗ ಇಂಗ್ಲಿಷ್‌ನಲ್ಲಿ ದಸ್ಕತ್ ಮಾಡ್ತಾನೆ. ಏನು ಹೇಳೋಣ ಅವನ ಯೋಗ!' ಶಾಸ್ತ್ರಿಗಳು :- ಹೌದೇನು ? ಎಂದು ಹುಬ್ಬು ಹಾರಿಸಿದರಂತೆ. ಶರ್ಮರು ಮುಂದುವರೆದು ಹೇಳ್ತಾರೆ : 'ಚತುರ್ವೇದ ತತ್ವಜ್ಞರಿಗೆ ಗಿರಾಕಿ ಇಲ್ಲವಾಯಿತು. ಶಾಸ್ತ್ರ ಪರಿಣತರಿಗೆ ಹೊಟ್ಟೆ ತುಂಬಿಕೊಳ್ಳುವುದು ಕಷ್ಟವಾಯಿತು. ವಿದ್ಯದ ಗುರಿ ಸಾಧನೆ ಹೋಗಿ ಸಂಪಾದನೆಯಾಗಿ ಪರಿವರ್ತಿತವಾಯಿತು. ಮಹಾ ವಿದ್ವಾಂಸರ ಮನೆಗಳಲ್ಲಿ ಆಂಗ್ಲಭಾಷೆ ಅಭ್ಯಾಸ ಮಾಡುವುದರಿಂದಲೇ ತಮ್ಮ ಮೋಕ್ಷ ಎಂಬ ಭಾವನೆ ಹರಡಿತು. ಆಂಗ್ಲೋ-ವೆರ್ನಾಕ್ಯುಲರ್ ಸ್ಕೂಲುಗಳು ಎಲ್ಲ ಊರಲ್ಲೂ ತಲೆ ಎತ್ತಿದವು.'

ತಾತಾಚಾರ್ಯ ಶರ್ಮರೂ ಇಂಗ್ಲಿಷ್ ಕಲಿಯಲು ಚಿಕ್ಕಬಳ್ಳಾಪುರದ ಶಾಲೆಗೆ ಹೋಗುತ್ತಾರೆ. ಬೆಂಗಳೂರಿನಲ್ಲಿ ಎಸ್‌ಎಸ್‌ಎಲ್‌ಸಿ ಹಾಗೂ ಎಂಟ್ರೆನ್ಸ್ ಪಾಸ್ ಮಾಡಿ ಬಿ. ಎ. ಓದಲು ಮೈಸೂರು ಮಹಾರಾಜಾ ಕಾಲೇಜ್ ಸೇರುತ್ತಾರೆ. ಆ ವೇಳೆಗೆ ರಾಜಮ್ಮನವರೊಡನೆ ಅವರ ಮದುವೆಯೂ ಆಗಿರುತ್ತದೆ. ಶರ್ಮರು ಆರ್ಥಿಕ ಮುಗ್ಗಟ್ಟಿನಿಂದ ಕಾಲೇಜಿಗೆ ಶರಣು ಹೊಡೆದು ಬೆಂಗಳೂರಿಗೆ ಬರುತ್ತಾರೆ. ಮದುವೆಯಾದ ೫೦ ವರ್ಷದ ಮೇಲೆ ಶರ್ಮರು ಹೇಳುತ್ತಾರೆ: 'ನಾನೂ ನಮ್ಮಾಕೆಯೂ (ಅವರು ರಾಜಮ್ಮನವರನ್ನು ಏಕವಚನದಲ್ಲಿ ಎಂದೂ ಕರೆದದ್ದಿಲ್ಲ) ೫೦ ವರ್ಷ ದಾಂಪತ್ಯ ಜೀವನ ನಡೆಸಿದ್ದೇವೆ. ಸತಿ-ಪತಿಗಳಂತೆ, ತಂದೆ, ತಾಯಿಗಳಂತೆ, ದೇಶಸೇವಕರಂತೆ, ದೈವಭಕ್ತರಂತೆ, ಸದ್ಗೃಹಸ್ಥರಂತೆ ಜೀವನ ನಡೆಸಿದ್ದೇವೆ' ಎಂದು.

ಶರ್ಮರು ಬಾಲ್ಯದಲ್ಲಿ ತಮ್ಮ ಅಜ್ಜಿಯ ಜೊತೆಗೆ ದಿನಗಳನ್ನು ಕಳೆದದ್ದನ್ನು ಸ್ಮರಿಸುತ್ತಾರೆ. ಆ ಅಜ್ಜಿ ನಿರಕ್ಷರಕುಕ್ಷಿ. ತೆಲುಗು, ತಮಿಳು, ಕನ್ನಡ ಎಲ್ಲ ಭಾಷೆಯಲ್ಲಿಯೂ ಹಾಡುತ್ತಿದ್ದರು. ಶರ್ಮರು ಅವರಿಗೆ ನರಸಿಂಹಶತಕ, ವೇಣುಗೋಪಾಲಶತಕ, ಸರ್ವಜ್ಞ ವಚನಗಳನ್ನು ಕಲಿಸಿದ ಗುರು. ಅದಕ್ಕಾಗಿ ಚಕ್ಕುಲಿ, ಕೋಡುಬಳೆ ಲಂಚ ಶರ್ಮರಿಗೆ. ಅಜ್ಜಿ ಅಡುಗೆ ಮಾಡುವಾಗ, ರಂಗೋಲಿ ಹಾಕುವಾಗ, ಹುವ್ವ ಕುಯ್ಯುವಾಗ, ಪೂಜೆ ಮಾಡುವಾಗ, ಅಕ್ಕಿ ಬೀಸುವಾಗ, ಭತ್ತ ಕುಟ್ಟುವಾಗ, ಯಾವಾಗಲೂ ಹಾಡಿದ್ದೇ ಹಾಡಿದ್ದು. ಸಂಸ್ಕೃತ ಶ್ಲೋಕಗಳು, ಚೌಡಪ್ಪ, ವೇಮನ, ಸರ್ವಜ್ಞ, ಚಾಟುಪದ್ಯಗಳ ಅವಿಚ್ಛಿನ್ನ ಧಾರೆ. ನೂರಾರು ಶತಕಗಳು. ಈ ಸಾಹಿತ್ಯ ಸರಸ್ವತಿಗೆ ಶರ್ಮರು ೧೦ ವಯಸ್ಸಿನವರಿದ್ದಾಗ ಗುರು. 'ಚೋಟುದ್ದದ ಮೊಮ್ಮಗ ಗೇಣುದ್ದದವನಾಗಿ ಕಂಡಿರಬೇಕು ಆ ಅಜ್ಜಿಗೆ' ಎನ್ನುತ್ತಾರೆ ಶರ್ಮರು.

ಅಜ್ಜಿ ಹಾಡುತ್ತಿದ್ದ ಒಂದು ಹಾಡು ಇದು :

ಅಧಿಕ ವಿದ್ಯಾವಂತಲು ಅಪ್ರಯೋಜಕಲೈರಿ  
ಪೂರ್ಣ ಶುಂಠುಲು ಸಭಾ ಪೂಜ್ಯುಲೈರಿ  
ಕೋತಿಕ ಜಲತಾರಿ ಕುಳ್ಳಾಯಿ ಏಟಿಕಿ  
ವರ ಜಾಜಿ ಪೂದಂಡ ವಿಧವಕೇಲ  
ಪುಂಡರೀಕಾಕ್ಷನಾ ರೆಂಡು ಕನ್ನುಲುನಿಂಡ  
ನಿನ್ನ ಚೂಚಿಟೆ ಭಾಗ್ಯಮೆನ್ನಡಯ್ಯ.

**ಎಚ್. ಎಸ್. ದೊರೆಸ್ವಾಮಿ**

ಒಂದೊಂದು ಸಾಲನ್ನು ಹಾಡುವಾಗಲೂ ಅಜ್ಜಿ 'ಜೀವನ ಮಹಾದರ್ಶನ'ವನ್ನೇ ಕಾಣುತ್ತಿದ್ದರು ಎನ್ನುತ್ತಾರೆ ಶರ್ಮಾಜಿ.

ಇನಿಮಿಂಚೇನಪಲ್ಲಿ – ಇನಮುಮಿಂಚನಪಲ್ಲಿ – ಚಿಕ್ಕಬಳ್ಳಾಪುರದ ಪಾಳೆಗಾರರ ಮನೆತನದ ಇಬ್ಬರು ಸೋದರಿಯರು ವಾಸಮಾಡುತ್ತಿದ್ದ ಗ್ರಾಮ. (೧೯೦೫) ದೊಡ್ಡಮ್ಮಣ್ಣಿ ಚಿಕ್ಕಮ್ಮಣ್ಣಿ ಇವರ ಹೆಸರು. ಇವರಿಗೆ ಸರ್ಕಾರದಿಂದ ತಲಾ ೩೦೦ರೂ. ಮಾಸಾಶನ ದೊರೆಯುತ್ತಿತ್ತು. ಅಜ್ಜಿಯಿಂದ ಐರಾವತ ಕತೆ ಕೇಳಲು ಇವರು ಬರಮಾಡಿಕೊಂಡರು. ಎತ್ತಿನಗಾಡಿಯಲ್ಲಿ ಅಜ್ಜಿ ಮೊಮ್ಮಗ ಬಂದಿಳಿದರು. ಅಜ್ಜಿ ದಿನವೆಲ್ಲ ಹಾಡಿದರು. ಗುರುವಲಮ್ಮನಿಗೂ ಓದು ಬರದು. ಪಾಳೆಗಾರ್ತಿಗಳಿಗೂ ಓದು ಬರದು. ಆದರೂ ಅಜ್ಜಿ ಹಾಡಿನಲ್ಲಿ ಕತೆ ಹೇಳಿದ್ದೂ ಹೇಳಿದ್ದೇ. ಪಾಳೆಗಾರ್ತಿ ಕೇಳಿದ್ದೂ ಕೇಳಿದ್ದೇ. 'ಐರಾವತ ವನ್ನಲ್ಲ, ಸ್ವರ್ಗವನ್ನೇ ಭೂಲೋಕಕ್ಕೆ ಇಳಿಸಿಬಿಟ್ರಿ ಅಮ್ಮಾವ್ರೆ. ನೀವು ಹಾಡತಿದ್ರೆ ನಾವು ಭೂಲೋಕದಲ್ಲಿಲ್ಲ ಸ್ವರ್ಗದಲ್ಲೇ ಇದೀವಿ ಅನ್ನಿಸ್ತಿತ್ತು' ಎಂದರು ಹಿರಿಯ ಪಾಳೆಯಗಾರ್ತಿ.

ಅಜ್ಜಿ : ನಾನೇನು ಸಂಗೀತ ವಿದ್ವಾಂಸಳೆ, ಶಿಲ್ಪ ಕಲಾವಿದಳೆ ? ಇದಕ್ಕೆಲ್ಲ ನಿಮ್ಮ ಮನಸ್ಸಿನ ಸ್ಥಿತಿಯೇ ಕಾರಣ.

ದೊಡ್ಡಮ್ಮಣ್ಣಿ : ನೀವು ಹಾಡಿದ ಹಾಡು ಎಂದಿಗಿಂತ ಇಂದು ಇಂಪು. ಕೇಳತಾ ಕೇಳತಾ ಮನಸ್ಸು ಚೊಕ್ಕಟ ವಾಗತೆ. ನಾನೀ ಭೂಮಿ ಮೇಲಿರೋದೇ ಇಲ್ಲ.

ಅಜ್ಜಿ : ಚೆನ್ನಾಗಿ ಹೇಳಿದಿ ಅಮ್ಮಣ್ಣಿಯವರೇ.

ಪಾಂಡವರು, ಇಂದ್ರ, ಕುಂತಿ, ಗಾಂಧಾರಿ, ಐರಾವತ ಇವೆಲ್ಲಾ ಮೈಮರೆತ ಮೇಲೆ ಎಲ್ಲಿರುತ್ತೆ? ಪರವಶತೆ ಯುಂಟಾಗಿ ಹೇಳಲಾಗದ ಸಂತೋಷ ಉಂಟಾಗುತ್ತದೆ. ಅದೇ ಈ ಹಾಡಿನ ಮಹಿಮೆ. ಅದಕ್ಕಾಗಿಯೇ ಜನ 'ಐರಾವತ' ಅಂದರೆ ಪ್ರಾಣಬಿಡ್ತಾರೆ.

ಅವರಿಬ್ಬರ ಮಾತನ್ನೂ ಕೇಳಿ ಶರ್ಮ ಹೀಗೆ ಉದ್ಗಾರ ತೆಗೆಯುತ್ತಾರೆ, ಅವರಿಬ್ಬರೂ ಓದುಬರಹ ಇಲ್ಲದವ ರಾದರೂ ಏನು ಮಾತು? ಎಷ್ಟು ಸರಿ? ಅದೆಷ್ಟು ಸುಂದರ, ಮನೋಹರ! ವಿಚಾರಘನ, ಆನಂದ, ದಿವ್ಯ ?

ಅಜ್ಜಿ ಊರಿಗೆ ಹೊರಡಲು ಸಿದ್ಧರಾದರು. ಅಮ್ಮಣ್ಣಿ ರಾಜಯೋಗ್ಯವಾದ ತಾಂಬೂಲವನ್ನು ಅಜ್ಜಿಗೆ ಕೊಟ್ಟರು.

ಕಾಲೇಜು ಬಿಟ್ಟು ಬಂದ ಶರ್ಮರು ಬೆಂಗಳೂರು ಸೇರಿದರು. ಬೆಂಗಳೂರಿನಲ್ಲಿ ಕೈಲಾಸಂ, ರಾಘವ ಇವರ ಸ್ನೇಹ ಲಭ್ಯವಾಗುತ್ತದೆ. ಶರ್ಮಾಜಿ – ಹವ್ಯಾಸಿ ಕಲಾವಿದರ ಎಡಿಎ ನಾಟಕ ಕಂಪೆನಿಯಲ್ಲಿ ಪಾತ್ರಧಾರಿಯಾದರು. ನಾಟಕ ಬರೆಯತೊಡಗಿದರು. ಭಕ್ತಪ್ರಹ್ಲಾದ ನಾಟಕದಲ್ಲಿನ ವರದಾಚಾರ್ಯರು ಹಿರಣ್ಯಕಶಿಪು ಪಾತ್ರ ಮಾಡಲು ಬಳ್ಳಾರಿ ರಾಘವ ಅವರು ವಿಜಯನಗರ ಪತನ ನಾಟಕದಲ್ಲಿನ

ಪಠಾಣ್ ರುಸ್ತುಂ ಪಾತ್ರ ಮಾಡಲೇ ಹುಟ್ಟಿದರೇನೋ ಅನಿಸುತ್ತಿತ್ತಂತೆ ಆ ನಾಟಕಗಳನ್ನು ನೋಡಿದಾಗ ಶರ್ಮರಿಗೆ. ಹಿರಣ್ಯಕಶಿಪುವಿಗೆ ಪ್ರಹ್ಲಾದನ ಮೇಲೆ ಅಪಾರವಾದ ಪ್ರೇಮ. ಆದರೆ ಈ ಪ್ರೇಮದ ಪುತ್ಥಳಿ, ನಾರಾಯಣನ ಭಕ್ತ. ಇದು ಹಿರಣ್ಯಕಶಿಪುವಿಗೆ ಒಪ್ಪಿಗೆ ಇಲ್ಲ. ಅದಕ್ಕಾಗಿ ಮಗನನ್ನು ಬೆಟ್ಟದಿಂದ ತಳ್ಳುತ್ತಾನೆ, ವಿಷ ಕುಡಿಸುತ್ತಾನೆ ಇತ್ಯಾದಿ. ಭಕ್ತ ಪ್ರಹ್ಲಾದದಲ್ಲಿ ವಿಷ ಕುಡಿಸುವ ಸಂದರ್ಭದಲ್ಲಿ ವರದಾಚಾರ್ಯರ ಮನ ಮುದುಡುತ್ತದೆ. ವಿಷದ ಬಟ್ಟಲನ್ನು ಹೆಂಡತಿಯ ಕೈಗೆ ಕೊಟ್ಟು ಕುಡಿಸು ಎಂದು ಆಜ್ಞೆ ಮಾಡುತ್ತಾರೆ. ಆಕೆ ಪ್ರಹ್ಲಾದನಿಗೆ ಬಟ್ಟಲೆತ್ತಿ ಕುಡಿಸಲು ಹೋದಾಗ, ಆ ದೃಶ್ಯವನ್ನು ನೋಡಲೂ ಅವರಿಂದ ಆಗದು. ಆದ್ದರಿಂದ ವರದಾಚಾರ್ಯರು ಬೇರೆ ಕಡೆಗೆ ತಿರುಗಿಕೊಂಡು ನಿಲ್ಲುತ್ತಿದ್ದರಂತೆ. ತಾಯಿ ವಿಷದ ಬಟ್ಟಲನ್ನು ಪ್ರಹ್ಲಾದನ ತುಟಿಗೆ ಸೋಕಿಸಿದಾಗ, ವರದಾಚಾರ್ಯರು ರಭಸದಿಂದ ಮುನ್ನುಗ್ಗಿ ಬಟ್ಟಲನ್ನು ಕಿತ್ತೆಸೆಯುತ್ತಾರೆ. ಆದರೆ ಆ ವೇಳೆಗಾಗಲೇ ಬಟ್ಟಲಲ್ಲಿದ್ದ ವಿಷ ಪ್ರಹ್ಲಾದನ ಗಂಟಲಿನಲ್ಲಿಳಿದಿರುತ್ತದೆ. ಹಿರಣ್ಯಕಶಿಪುವಿನ ಮಾನಸಿಕ ಯಾತನೆಯ ಆ ದಾರುಣ ದೃಶ್ಯವನ್ನು ನೋಡಿದ ಪ್ರೇಕ್ಷಕರು ಗಳಗಳನೆ ಅತ್ತುಬಿಡುತ್ತಿದ್ದರಂತೆ.



'ವಿಜಯನಗರ ಪತನ' ನಾಟಕದಲ್ಲಿ ಬಳ್ಳಾರಿ ರಾಘವ ಪಠಾಣ್ ರುಸ್ತುಂ ಪಾತ್ರ ಮಾಡುತ್ತಿದ್ದರು. ರುಸ್ತುಂ ರಾಮರಾಯನ ಮಗ. ತಾಯಿ ಕರ್ನಾಟಕ ಸಿಂಹಾಸನಾಧೀಶ್ವರ – ಬಿಜಾಪುರದ ಆದಿಲ್‌ಷಾಹಿಯ ಪ್ರಜೆ. ಮಗ ಪಠಾಣ್ ರುಸ್ತುಂ ಹಿಂದೂ ರಾಜ್ಯದ ರಕ್ಷಕನಾಗಬೇಕೆ ? ಮುಸ್ಲಿಂ ರಾಜ್ಯದ ರಕ್ಷಕನಾಗಬೇಕೆ ? ಈ ಘರ್ಷಣೆಯ ಝುಂಝಾವಾತಕ್ಕೆ ಸಿಕ್ಕಿದ ರುಸ್ತುಂ ದಿಕ್ಕು ಕಾಣದ ಹಕ್ಕಿಯಂತೆ ಆಗುತ್ತಾನೆ. ತಂದೆ ರಾಮರಾಯನನ್ನು ಕೊಲ್ಲುತ್ತಾನೆ, ಹುಚ್ಚನಾಗುತ್ತಾನೆ, ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಈ ಪಾತ್ರದಲ್ಲಿ ಬಳ್ಳಾರಿ ರಾಘವ ಅವರನ್ನು ನೋಡಿದವರೇ ಧನ್ಯರು ! ಎನ್ನುತ್ತಾರೆ ಶರ್ಮ. ಷೇಕ್ಸ್‌ಪಿಯರ್ ಜಗತ್ತೆಲ್ಲ ಒಂದು ರಂಗಭೂಮಿ ಎಂದರೆ ಬಳ್ಳಾರಿ ರಾಘವ ರಂಗಭೂಮಿಯೇ ನನ್ನ ಜಗತ್ತು ಎನ್ನುತ್ತಿದ್ದರಂತೆ.

ಬೆಂಗಳೂರಿನ ದೇಶೀಯ ವಿದ್ಯಾಶಾಲೆಗೂ ಶರ್ಮರಿಗೂ ನಂಟು. ಸಂಪದ್ಗಿರಿರಾಯರು, ಕೆ. ಎಸ್. ಕೃಷ್ಣಯ್ಯರ್, ಎಚ್. ರಾಮರಾವ್, ತಾತಾಚಾರ್ಯ ಶರ್ಮರು, ಕಂದಾಡೆ ಕೃಷ್ಣಯ್ಯಂಗಾರ್ಯರು ಇವರದೊಂದು ಗ್ಯಾಂಗು. ಆ ಕೂಟದ ಹೆಸರು ತುಂಟರ ಗುಂಪು. ಅವರು ಇಂಗ್ಲಿಷಿನಲ್ಲಿ ದೇಶೀಯ ವಿದ್ಯಾಶಾಲೆಯ ಹೆಸರಿನಲ್ಲಿ ಮೂರು ತಿಂಗಳಿಗೊಮ್ಮೆ ಪತ್ರಿಕೆ ಹೊರಡಿಸಲು ತೀರ್ಮಾನಿಸಿದರು. ಆಮೇಲೆ ಅದನ್ನು ಕನ್ನಡದಲ್ಲೇ ಹೊರತರುವ ವಿಚಾರ ಬಂದು, ಶರ್ಮರು ಆ ಕೆಲಸ ನಿರ್ವಹಿಸಿದರು. ದೇಶೀಯ ವಿದ್ಯಾಶಾಲಾ ಪತ್ರಿಕೆ ಬಹಳ ದಿನ ನಡೆಯಿತು. ಸಂಪದ್ಗಿರಿರಾಯರು, ಕಂದಾಡೆ ಕೃಷ್ಣಯ್ಯಂಗಾರ್ಯರು, ಕೈಲಾಸಂ, ಶರ್ಮ, ನಂಗಪುರಂ ವೆಂಕಟೇಶ ಅಯ್ಯಂಗಾರ್, ಹೊಯ್ಸಳ, ಅನಕೃ, ಭಾರತಿ, ಮಾಸ್ತಿ, ಬೆಟಗೇರಿ ಕೃಷ್ಣಶರ್ಮ, ಡಿ. ಕೆ. ಭಾರದ್ವಾಜ್, ವಿಸೀ, ಯಳಂದೂರ್ ನಾರಾಯಣಮೂರ್ತಿ, ಜಿ. ಸದಾಶಿವಯ್ಯ, ಎಲ್. ಗುಂಡಪ್ಪ, ಸರ್ದಾರ್ ಕೆ. ಎ. ವೆಂಕಟರಾಮಯ್ಯ ಇವರೆಲ್ಲ ಆ ಪತ್ರಿಕೆಗೆ ಲೇಖನ ಬರೆಯುತ್ತಿದ್ದರು. ತುಂಟರೊಬ್ಬೊಬ್ಬರೂ, ಚಿಳ್ಳಿ, ಪಿಳ್ಳಿ, ಕೊಳ್ಳಿ, ಗೊರವಿ, ಕೊಂಟ, ದತ್ತ ಎಂಬ ಹೆಸರುಗಳಲ್ಲಿ ಬರೆಯುತ್ತಿದ್ದರಂತೆ.

ಬೆಳಗಾಂವಿ ಕಾಂಗ್ರೆಸ್ ಅಧಿವೇಶನದ ಕಾಲಕ್ಕೆ ಕನ್ನಡದಲ್ಲಿ ಹಾಗೂ ಇಂಗ್ಲಿಷಿನಲ್ಲಿ ಒಂದು ಕೈಪಿಡಿ ಹೊರತರಬೇಕು. ಅದರಲ್ಲಿ ಕರ್ನಾಟಕದ ಸಂಪೂರ್ಣ ಇತಿಹಾಸ ಇರಬೇಕು. ಭಾಷೆ-ಸಾಹಿತ್ಯ, ವಾಸ್ತುಶಿಲ್ಪ, ಗಾಯನ, ವಾದನ, ಧರ್ಮ ದರ್ಶನ ಇವೇ ಮೊದಲಾದ ಅಂಶಗಳನ್ನು ಒಳಗೊಂಡ ಪ್ರಬಂಧಗಳಿರಬೇಕು, ಹಾಗೆಯೇ, ಅಂಕಿಅಂಶಗಳು, ಆಕರ್ಷಕವಾದ ಚಿತ್ರಗಳೂ ಇರಬೇಕು ಎಂದು ಶರ್ಮರೂ, ಸಂಪದ್ಗಿರಿರಾಯರೂ ಕೃಷ್ಣಯ್ಯಂಗಾರ್ಯರೂ 'ಮಂಕುದಿಣ್ಣೆ'ಯ ಮೇಲೆ ಕೂತು ನಿಶ್ಚಯಿಸಿದರಂತೆ. ಇಂಗ್ಲಿಷ್ ಪುಸ್ತಕಕ್ಕೆ Karnataka Handbook ಎಂದು ಹೆಸರು ಕೊಡಲಾಯಿತು. ಆ ಗ್ರಂಥಗಳೆರಡೂ ಡಿ. ಕೆ. ಭಾರದ್ವಾಜರ ಪ್ರಭಾವದಿಂದ ಕರ್ನಾಟಕ ಪ್ರಾಂತ ಕಾಂಗ್ರೆಸ್ ಸಮಿತಿಯಿಂದ ಪ್ರಕಟಗೊಂಡವು. ಪಂಜೆ ಮಂಗೇಶರಾಯರು ಈ ಪುಸ್ತಕ ನೋಡಿ 'ತುಂಟರ ಗುಂಪಿನ ದೂರದೃಷ್ಟಿಗೆ ಮಣಿಯಲೇ ಬೇಕು' ಎಂದು ಉದ್ಗಾರ ತೆಗೆದರಂತೆ.

ಈ ಆತ್ಮಕಥನವನ್ನು ಶರ್ಮರು ವಿಶ್ವಕರ್ನಾಟಕ ಪತ್ರಿಕೆ ಹೇಗೆ ಆರಂಭವಾಯಿತು ಎಂಬುದನ್ನು ಹೇಳುವುದರೊಂದಿಗೆ ಮುಗಿಸುತ್ತಾರೆ. ಸ್ವಾತಂತ್ರ್ಯ ಪಡೆದುಕೊಳ್ಳುವುದರಲ್ಲಿ ಕರ್ನಾಟಕ ಏಕೀಕರಣಕ್ಕೆ ನಾಂದಿ ಹಾಡುವುದರಲ್ಲಿ ವಿಶ್ವಕರ್ನಾಟಕದ ಪಾತ್ರ ಕುರಿತು ಶರ್ಮರ ಲೇಖನಿಯಿಂದಲೇ ಒಂದು ಪುಸ್ತಕ ಹೊರಬಂದಿದ್ದರೆ, ಅದೊಂದು ಅಪೂರ್ವವಾದ ದಾಖಲೆಯಾಗುತ್ತಿತ್ತು. ಆ ಹೋರಾಟದ ಬದುಕಿನ ಪರಿಚಯ ಲಭಿಸದೇ ಹೋದದ್ದು ನಮಗೆ ಮಾತ್ರವಲ್ಲ, ಇಡೀ ಕರ್ನಾಟಕಕ್ಕೆ ಆದ ತುಂಬಲಾಗದ ನಷ್ಟ.

ತಿರುಮಲೆ ತಾತಾಚಾರ್ಯ ಶರ್ಮರು ಹಣಕಾಸಿನ ತೊಂದರೆಯಿಂದ ವಿದ್ಯಾಭ್ಯಾಸಕ್ಕೆ ಶರಣು ಹೊಡೆದು ಮೈಸೂರಿನಿಂದ ಬೆಂಗಳೂರಿಗೆ ಹಿಂದಿರುಗಿದ ಕೆಲತಿಂಗಳಲ್ಲಿ ಅವರಿಗೆ ಮದರಾಸಿನಲ್ಲಿದ್ದ ಭಾರತಪ್ರಾಚ್ಯ ವಿಮರ್ಶನಾ ಶಾಖೆಯ ಶಿಲಾಶಾಸನಗಳ ವಿಭಾಗದ ಮುಖ್ಯಾಧಿಕಾರಿಗಳಾಗಿದ್ದ ವಿದ್ವಾಂಸರಾದ ಹೊಸಕೋಟೆ ಕೃಷ್ಣಶಾಸ್ತ್ರಿಗಳ ಭೇಟಿಯಾಗುತ್ತದೆ. ಕೃಷ್ಣಶಾಸ್ತ್ರಿಗಳೂ ಶರ್ಮರ ಯೋಗಕ್ಷೇಮ ವಿಚಾರಿಸಿ, 'ನಿಮ್ಮ ತಾತ ವಿದ್ವಾನ್ ರಾಜಗೋಪಾಲಾಚಾರ್ಯರು ಲೂಯಿ ರೈಸ್ ಅವರಿಗೆ ಹಳೆಯ ಶಾಸನಗಳನ್ನು ಪತ್ತೆ ಮಾಡುವುದರಲ್ಲಿ, ಓದುವುದರಲ್ಲಿ ನೆರವಾಗುತ್ತಿದ್ದರು. ರೈಸರು ನಂದಿಬೆಟ್ಟಕ್ಕೆ ಬಂದಾಗಲೆಲ್ಲ ನಿಮ್ಮ ತಾತನವರು ಒಂದು ಮಕ್ಕರಿ ತುಪ್ಪದಲ್ಲಿ ಕರಿದ ಅತಿರಸ ತೆಗೆದುಕೊಂಡುಹೋಗಿ ಕೊಡುತ್ತಿದ್ದರು. ಅವರ ಮೊಮ್ಮಗನಾದ ನೀನೂ ನನಗೇಕೆ ಸಹಾಯ ಮಾಡಬಾರದು' ಎಂದು ಹೇಳಿ ಮದರಾಸಿಗೆ ಕರೆಸಿಕೊಂಡು ಶಿಲಾಶಾಸನ, ತಾಮ್ರಶಾಸನಗಳನ್ನು ಅಧ್ಯಯನ ಮಾಡಲು ತಮ್ಮ ಸಹಾಯಕನನ್ನಾಗಿ ನೇಮಿಸಿಕೊಂಡರು. ಒಂದು ವಾರ ಕಾಲ ಕಚೇರಿಯಲ್ಲಿ ಕೂತು, ಹಿಂದಿನ ವರ್ಷಗಳಲ್ಲಿ ಕೈಗೊಂಡ ಸಂಶೋಧನೆಯ ವರದಿಗಳನ್ನು ಓದಲು ಶರ್ಮರಿಗೆ ಹೇಳಿದರು. ಆ ನಂತರ ಶರ್ಮರನ್ನು ಕರೆದುಕೊಂಡು ಬೆಜವಾಡಾ, ಸಿಂಹಾಚಲ, ಅಮರಾವತಿ, ಬಾಪಟ್ಲಾ ಮುಂತಾದೆಡೆಗೆ ಅಧ್ಯಯನಕ್ಕಾಗಿ ಹಾಗೂ ತರಬೇತಿಗಾಗಿ ಕೃಷ್ಣಶಾಸ್ತ್ರಿಗಳು ಹೊರಡುತ್ತಾರೆ. ಕೃಷ್ಣಶಾಸ್ತ್ರಿಗಳು ಶಾಸನಗಳ ಅಧ್ಯಯನ ಕಾರ್ಯದ ಪರಿಚಯ ಮಾಡಿಸಿದ್ದು ಹೀಗೆ :-

'ನಾನು ಶಾಸನ ಓದುತ್ತಾ ಹೋಗುತ್ತೇನೆ ನೀನು ಬರೆದುಕೊ' ಎಂದು ಶರ್ಮರಿಗೆ ಹೇಳಿದವರು, ಬರೆದ ಕಾಗದವನ್ನು ಓದುವಷ್ಟು ಸುಲಭವಾಗಿ ಅವರು ಸಿಂಹಾಚಲದ ಎಲ್ಲಾ ಶಾಸನಗಳನ್ನು ಓದುತ್ತಾ ಹೋದರಂತೆ. ಈ ಪೈಕಿ ಕೆಲ ಶಾಸನಗಳು ಓದುವುದಕ್ಕೆ ಹೊರಟರೆ ಲಿಪಿಶಾಸ್ತ್ರ ಪಂಡಿತರನ್ನು ಅವು ಕಂಗಾಲಾಗಿಸುತ್ತಿದ್ದುವು. ಸಿಂಹಾಚಲ ಶೈವ ಕ್ಷೇತ್ರವೇ, ವೈಷ್ಣವ ಕ್ಷೇತ್ರವೇ ಎಂಬ ಬಗ್ಗೆ ಜಿಜ್ಞಾಸೆ ನಡೆಯಿತು. ಗಂಗರು ಚೋಳರ ಮಧ್ಯೆ ವೈವಾಹಿಕ ಬಾಂಧವ್ಯ ಬೆಳೆದುಬಂದ ಕಾರಣದಿಂದ ವೈಷ್ಣವ, ಶೈವ ಉಭಯ ದೇವತೆಗಳ ಬಗೆಗೆ ಅವರು ಉದಾರಚರಿತರಾದರು ಎಂಬ ತೀರ್ಮಾನಕ್ಕೆ ಬರಲಾಯಿತು.

ಸಿಂಹಾಚಲದಲ್ಲಿದ್ದಾಗ ಕೃಷ್ಣಶಾಸ್ತ್ರಿಗಳಿಗೆ ವಿಜಯನಗರ ಅರಸರಿಂದ ಕರೆಬಂದಿತು. ಅಲ್ಲಿಗೆ ಹೋದ ಸಂದರ್ಭದಲ್ಲಿ ದ್ವಾರಂ ವೆಂಕಟಸ್ವಾಮಿ ನಾಯ್ಡು ಅವರು ಪ್ರಾಂಶುಪಾಲರಾಗಿದ್ದ ಸಂಗೀತ ಕಾಲೇಜಿನಲ್ಲಿ ಸಂಗೀತ ಕಚೇರಿ ನಡೆಯಿತು. ದ್ವಾರಂ ಅವರು ಸುಪ್ರಸಿದ್ಧ ಪಿಟೀಲ್ ವಿದ್ವಾಂಸರು. ಆದರೆ ಅಂಧರು. ಅವರ ವಿದ್ವತ್ತಿನ ಪ್ರಸಿದ್ಧಿಯ ಕಾರಣದಿಂದ ಭಾರತದ ಉದ್ದಗಲಕ್ಕೂ ಅವರನ್ನು ಅಭಿಮಾನಿಗಳು ಕರೆಸಿ, ಕಚೇರಿಗಳನ್ನು ಏರ್ಪಡಿಸುತ್ತಿದ್ದರು. 'ಕನ್ಯಾಶುಲ್ಕ' ನಾಟಕ ಬರೆದು ಪ್ರಸಿದ್ಧರಾದ ಗುರುಜಾಡ ಅಪ್ಪಾರಾವ್ ಕೂಡ ಅಲ್ಲಿಯವರೇ. ಟಿ. ಟಿ. ಶರ್ಮರಿಗೂ ಅಪ್ಪಾರಾವ್ ಅವರಿಗೂ ಹಿಂದೆಯೇ ಪರಿಚಯ ಇತ್ತು, ಗುರುಜಾಡ ಅಪ್ಪಾರಾಯರೇ ತಮ್ಮ ನಾಟಕವನ್ನು ಈ ಹಿಂದೆ ಶರ್ಮರಿಗೆ ಓದಿ ಹೇಳಿದ್ದರು. ಆದರೆ ಈಗ ಅವರು ತೀರಿಕೊಂಡಿದ್ದಾರೆ ಎಂದು ತಿಳಿದುಬಂದ ಮೇಲೆ ಆ ಮಹಾನಾಟಕಕಾರ ಇದ್ದ ಮನೆಯನ್ನಾದರೂ ನೋಡಿ ಕೊಂಡು ಬರೋಣ ಎಂದು ಶರ್ಮರು ಅವರ ಸಹೋದ್ಯೋಗಿಯಾದ ರಾಮಕೃಷ್ಣಾಚಾರ್ಲು ಅವರೊಂದಿಗೆ ಹೋಗಿಬಂದರು.

ಸಿಂಹಾಚಲದಲ್ಲಿ ಹೊಸಕೋಟೆ ಕೃಷ್ಣಶಾಸ್ತ್ರಿಗಳ ನೇತೃತ್ವದಲ್ಲಿ ೫೩೦ ಶಾಸನಗಳನ್ನು ಓದಲಾಯಿತೆಂದೂ, ೨೦೦-೩೦೦ ಹೊಸ ಶಾಸನಗಳ ಪ್ರತಿಗಳನ್ನು ಮಾಡಿಕೊಳ್ಳಲಾಯಿತು ಎಂದೂ ತಿ. ತಾ. ಶರ್ಮರು ಹೇಳಿಕೊಂಡಿದ್ದಾರೆ.

ಈ ಕೆಲಸ ಮುಗಿಸಿ ಶರ್ಮರು ಮದ್ರಾಸಿನ ಕಚೇರಿಗೆ ಹಿಂದಿರುಗಿದಾಗ ರಾಮಕೃಷ್ಣಾಚಾರ್ಯರು ಶರ್ಮರಿಗೆ ಹೇಳಿದರಂತೆ 'ಕಚೇರಿಯಲ್ಲಿ ಕೂತು ಕಲಿಯಲಾಗದ್ದನ್ನೂ, ನಾಲ್ಕು ತಿಂಗಳಲ್ಲಿ ನೀವು ಕಲಿತಿದ್ದೀರಿ. ನಿಮಗೆ ಕೃಷ್ಣಶಾಸ್ತ್ರಿಗಳ ಮಾರ್ಗದರ್ಶನ ಸಿಕ್ಕಿದ್ದು ನಿಮ್ಮ ಭಾಗ್ಯ ! ನಮಗಿಲ್ಲದ ಭಾಗ್ಯ ನಿಮ್ಮದು' ಎಂದು.

ಶಾಸನಗಳ ಅಧ್ಯಯನಕ್ಕಾಗಿ ಮುಂದೆ ಬೆಜವಾಡಾ (ಇಂದಿನ ವಿಜಯವಾಡ) ಆರಿಸಿಕೊಳ್ಳಲಾಯ್ತು. ಮದ್ರಾಸಿನಿಂದ

ಗುಂಟೂರಿಗೆ ರೈಲಿನಲ್ಲಿ ಹೋಗಿ ಅಲ್ಲಿಂದ ಕಚೇರಿ ವಾಹನದಲ್ಲಿ ಬೆಜವಾಡಕ್ಕೆ ಹೋಗುವ ಏರ್ಪಾಡಾಗಿತ್ತು. ಗುಂಟೂರಿನಲ್ಲಿ ರೈಲಿಳಿದು ಊಟಕ್ಕೆಂದು ಶರ್ಮರು ಒಂದು ಭೋಜನ ಶಾಲೆಗೆ ಹೋದರು, ಬಾಳೆಲೆ ಹಾಕಿ, ಅದರ ಮೇಲೆ ಒಂದು ಅನ್ನದ ಗುಡ್ಡೆ, ಆಮೇಲೆ ತುಪ್ಪ, ವ್ಯಂಜನ, ಗೊಂಗೂರ, ಆಕಲು ತೊವ್ವೆ ಬಡಿಸಿದರಂತೆ. ಇವರು ಕೊಂಚ ಕಲಸಿ ತಿನ್ನುವಷ್ಟರಲ್ಲಿ ಎದುರು ಸಾಲಿನ ಏಳು ಎಲೆಗಳ ಅನ್ನದ ಗುಡ್ಡೆ ಕರಗಿಹೋಗಿತ್ತು. ಎರಡನೆಯ ಅನ್ನದ ಗುಡ್ಡೆ ಪ್ರತ್ಯಕ್ಷವಾಯಿತು. ಅದನ್ನು ಸಾರಿನಲ್ಲಿ ಕಲಸಿದ ಮಹಾನುಭಾವರು ಮೂರನೆ ಗುಡ್ಡೆಗೆ ತಯಾರಾದರು. ಮೊಸರಿನಲ್ಲಿ ಅದನ್ನು ಕಲಸಿ ಹೊಡೆದರು. ಶರ್ಮರಿಗೆ ಪೂರ್ತಿ ಊಟಕ್ಕೆ ಒಂದು ಗುಡ್ಡೆ ಅನ್ನವನ್ನು ಕರಗಿಸುವುದಕ್ಕೆ ಆಗಲಿಲ್ಲ. ಬಡಿಸುವಾಕೆ, ಶರ್ಮರ ಊಟದ ವೈಖರಿ ನೋಡಿ 'ನಿಮ್ಮಂತಹ ಜನವೇ ನಮ್ಮ ಹೊಟೆಲ್‌ಗೆ ಬರುವುದಾದರೆ ನಾನು ಜನ್ಮದಲ್ಲಿ ಮಹಲ್ ಕಟ್ಟಿಸಿಯೇನು' ಎಂದು ಹೇಳಿದರಂತೆ. ಗುರುಜಾಡ ಅಪ್ಪಾರಾಯರು 'ಕನ್ಯಾಶುಲ್ಕ' ನಾಟಕದ ಮುಖಾಂತರ, ಅನ್ನರಾಶಿಯ ತಂದರು, ಅಗ್ನಿಹೋತ್ರಾವಧಾನಿಗಳು, ಕರಟಕ ಶಾಸ್ತ್ರಿಗಳು, ಲುಬ್ಧಾವಧಾನಿಗಳು ಈ ಮಹಾಪಾತ್ರಗಳನ್ನು ಪರಿಚಯಿಸಿದ್ದರಂತೆ. ಇಂತಹವರನ್ನೆಲ್ಲ ಗುಂಟೂರು ಪಟ್ಟಣದಲ್ಲಿ ಪ್ರತ್ಯಕ್ಷವಾಗಿ ನೋಡುವಂತಾಯಿತು ಎನ್ನುತ್ತಾರೆ ಶರ್ಮಾಜಿ.

ಅಮರಾವತಿಯಲ್ಲಿ ಕೃಷ್ಣಶಾಸ್ತ್ರಿಗಳ ನೇತೃತ್ವದಲ್ಲಿ ಅಧ್ಯಯನ ಮಾಡಿದ ಶಾಸನದ ಬಗೆಗೆ ಶರ್ಮರು ಬರೆದಿದ್ದಾರೆ. ೨ನೇ ಶತಮಾನದಲ್ಲಿ ನಿರ್ಮಿತವಾದ ಕಲಾಕೌಶಲದಿಂದ ಕೂಡಿದ್ದ ಬೌದ್ಧ ಸ್ತೂಪಗಳು ಈಗ ಸ್ಮಶಾನ ಸದೃಶವಾಗಿವೆ. ನಾಗಾರ್ಜುನಕೊಂಡ, ಭಟ್ಟಿಪ್ರೋಲು, ಗುಮ್ಮಡಿ ದಿರ್ರು, ಘಂಟಸಾಲ, ಗುಡಿವಾಡಗಳಲ್ಲೂ ಸ್ತೂಪಗಳಿವೆ. ಅಲ್ಲಿಯ ಬಿಸಿಲಿನ ತೀವ್ರತೆಯ ಬಗೆಗೆ ಎಚ್ಚರಿಕೆ ನೀಡಿದ ಕೃಷ್ಣಶಾಸ್ತ್ರಿಗಳು ಬೇಗ ಎದ್ದು ಶರ್ಮರನ್ನೂ ಕರೆದುಕೊಂಡು ಕೃಷ್ಣಾ ನದಿಯಲ್ಲಿ ಸ್ನಾನಮಾಡಿ, ಅಮರೇಶ್ವರ ದರ್ಶನ ಮುಗಿಸಿ ಶಾಸನಗಳ ಅನ್ವೇಷಣೆಯ ಕೆಲಸಕ್ಕೆ ಹೋಗುತ್ತಿದ್ದರು. ಅಮರೇಶ್ವರ ದೇವಾಲಯದ ಗರ್ಭಗೃಹದ ಅಮೃತಶಿಲಾ ಲಿಂಗ ೧೦ ಅಡಿ ಎತ್ತರ ಇದೆಯಂತೆ.

ಅಲ್ಲಿಂದ ಮುಂದೆ ಶರ್ಮರು ಬಾಪಟ್ಲಾ ತಾಲ್ಲೂಕಿನ ಪೆದ್ದ ಜರಕೂರಿಗೆ ಹೋಗುತ್ತಾರೆ. ಆ ಊರು ಕಂಬಮಯವಾಗಿದೆ. ಅದರ ನಾಲ್ಕೂ ಕಡೆ ಕೆತ್ತಲಾಗಿದೆ. ಕಂಬಗಳನ್ನು ಪತ್ತೆ ಹಚ್ಚಿ, ಶಾಸನ ಪ್ರತಿಗಳನ್ನು ತಯಾರು ಮಾಡಿ ತನ್ನಿ ಎಂದು ಕೃಷ್ಣಶಾಸ್ತ್ರಿಗಳು ಸೂಚನೆ ಇತ್ತಿದ್ದರು. ಅನನುಭವಿ ಹುಡುಗನಿಗೆ ಜವಾಬ್ದಾರಿ ಕೆಲಸ ವಹಿಸಿದರಲ್ಲಾ ಎಂದು ಶರ್ಮರಿಗೆ ನಿಜವಾಗಿ ಸಂತೋಷ ಆಯಿತು. ಅಲ್ಲಿಂದ ಮುಂದೆ ಕೃಷ್ಣಶಾಸ್ತ್ರಿಗಳು ತಾತಾಚಾರ್ಯ ಶರ್ಮರನ್ನೂ ಸ್ವತಂತ್ರವಾಗಿ ಶಾಸನಗಳ ಅಧ್ಯಯನಕ್ಕೆ ಬೇರೆ ಬೇರೆ ಕಡೆಗೆ ಕಳುಹಿಸಿಕೊಡುತ್ತಾರೆ.

ಸೇಲಂ, ಕೊಯಮತ್ತೂರು, ನೀಲಗಿರಿ ಜಿಲ್ಲೆಗಳ ಬಹುಭಾಗ ಒಂದು ಕಾಲಕ್ಕೆ ಕನ್ನಡ ರಾಜ್ಯಕ್ಕೆ ಸೇರಿತ್ತು. ಧರ್ಮಪುರಿಯಲ್ಲಿರುವ ಒಂದು ಸ್ಮಾರಕ ಶಿಲೆಯಲ್ಲಿ ಕಾವ್ಯ ಗುಣದಿಂದ ಕೂಡಿದ ಬಂಧ ಇರುವ ಶಾಸನವೊಂದು ಕನ್ನಡದಲ್ಲಿದ್ದುದನ್ನು ಶರ್ಮರು ಅಧ್ಯಯನ ಮಾಡಿದರು.



ದಿನಾಂಕ ೧೩-೩-೨೦೦೪ರಂದು, ನವಕರ್ನಾಟಕ ಪ್ರಕಟಣೆಗಳಾದ ಶ್ರೀಮತಿ ನೇಮಿಚಂದ್ರ ಅವರ 'ಪೆರುವಿನ ಪವಿತ್ರ ಕಣಿವೆಯಲ್ಲಿ', ಮತ್ತು ಶ್ರೀ ಸಿ. ಆರ್. ಕೃಷ್ಣರಾವ್ ಅವರ 'ಇದು ಅಮೆರಿಕ' ಕೃತಿಗಳನ್ನು ಶ್ರೀಮತಿ ಜ್ಯೋತ್ಸ್ನಾ ಕಾಮತ್ ಪುಸ್ತಕ ಲೋಕಕ್ಕೆ ಸಮರ್ಪಿಸಿದರು. ನ್ಯಾಯವಾದಿ ಶ್ರೀಮತಿ ಹೇಮಲತಾ ಮಹಿಷಿ ಅವರು ಅಧ್ಯಕ್ಷತೆ ವಹಿಸಿದ್ದರು. ಪ್ರಾಧ್ಯಾಪಕ ಡಾ|| ರಹಮತ್ ತರೀಕೆರೆ ಕೃತಿಗಳ ಪರಿಚಯ ಮಾಡಿಸಿದರು. ಸಮಾರಂಭದಲ್ಲಿ ಲೇಖಕರು, ಪ್ರಕಾಶಕರು, ಓದುಗರು ಭಾಗವಹಿಸಿದ್ದರು.

ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ, ಕಾರ್ಕಳ, ಮೂಡಬಿದರೆ, ವೇಣೂರು ಕಡೆಗೆ ಹೋಗಿ ಶಾಸನಗಳ ಅನ್ವೇಷಣೆ ಮಾಡುತ್ತಾರೆ. ಕದರಿ, ಮಂಜುನಾಥ ದೇವಾಲಯಗಳ ಅನ್ವೇಷಣೆ ನಡೆಯಿತು. ಕದರಿಗುಡ್ಡದಲ್ಲಿ ಶಾಸ್ತ್ರೀಯವಾಗಿ ಭೂ ಸಂಶೋಧನೆ ನಡೆದಲ್ಲಿ ಸ್ತೂಪಗಳು ವಿಹಾರಗಳು ಸಿಗಬಹುದು ಎಂದು ಕಂಡುಬಂತು. ಉಡುಪಿಯ ಅಷ್ಟಮಠಕ್ಕೆ ಸಂಬಂಧಪಟ್ಟ ಶಾಸನಗಳು ಸಿಕ್ಕಿಲ್ಲ. ಆ ಮಠ ಯಾವ ಕಾಲದ್ದು ಎಂಬುದೂ ತಿಳಿಯದಾಗಿದೆ. ಕದರಿಯ ಮಂಜುನಾಥ ದೇವಾಲಯದಲ್ಲಿ ಬ್ರಹ್ಮನೆಂದು ಕರೆಯಲ್ಪಡುವ, ನಾರಾಯಣನೆಂದು ಕರೆಯಲ್ಪಡುವ ಎರಡು ಪಂಚಲೋಹದ ಮೂರ್ತಿಗಳಿವೆ. ಅವುಗಳನ್ನು ಕಣ್ಣಾರೆ ಕಂಡು ತಲೆದೂಗಬೇಕು. ಈ ಮಹಾಶಿಲ್ಪದ ವಿಶ್ವಕರ್ಮ ಯಾರೋ ಗೊತ್ತಿಲ್ಲ. ಈ ಅಜ್ಞಾತ ಕಲಾವಿದನಿಗೆ ನಮಸ್ಕಾರ ಎನ್ನುತ್ತಾರೆ ಶರ್ಮರು. ೧೧ನೇ ಶತಮಾನದ ಈ ವಿಗ್ರಹವನ್ನೂ ತಯಾರಿಸಿದ ಶಿಲ್ಪಿಯನ್ನೂ ಹೆತ್ತ ಕರ್ನಾಟಕ ಮಾತೆಯ ಭಾಗ್ಯಕ್ಕೆ ಎಣೆಯೇ ಇಲ್ಲ. ಇವು ಶಿವ ವಿಷ್ಣು ಅಲ್ಲವೇ ಅಲ್ಲ. ಬೌದ್ಧ ದೇವಗಣದಲ್ಲಿ ಇವನೊಬ್ಬನಿರಬಹುದೇ ಎಂದು ಹಲವರ ಊಹೆ.

ನೀಲಗಿರಿಯ ಬಗೆಗೆ ಶರ್ಮರು ನೊಂದು ನುಡಿಯುತ್ತಾರೆ. ೧. ಆಂಗ್ಲರು ಈ ಪ್ರಾಂತಕ್ಕೆ ಪ್ರವೇಶ ಮಾಡಿದ ಮೇಲೆ, ಹೆಚ್ಚಿನ ಹೆಂಗಸರು ವ್ಯಭಿಚಾರಿಗಳಾದರು. ಅನೇಕ ಖಾಯಿಲೆಗಳಿಗೆ ತುತ್ತಾದರು. ಉಪದಂಶ ರೋಗ (ಸಿಫ್ಲಿಸ್) ಅವರನ್ನು ಕಾಡುತ್ತಿದೆ. ೨. ತೋಡರು, ಕೋಟರು ಅಚ್ಚ ಕನ್ನಡಿಗರು. ಅವರಿಗೆ ಕ್ರಿಶ್ಚಿಯನ್ ಪಾದ್ರಿಗಳು ಅವರ ಉದ್ಧಾರಕ್ಕೆ ತಮಿಳು ಭಾಷೆ ಕಲಿಸಿದರು. ಅವರೆಲ್ಲ ಕನ್ನಡಿಗರು, ಕನ್ನಡ ಕಲಿಸಬೇಕು ಎಂದು ಅವರಿಗೆ ಅನ್ನಿಸಲಿಲ್ಲ. ಈ ಕಾರಣದಿಂದ ನೀಲಗಿರಿ, ತಮಿಳುನಾಡಿನಲ್ಲಿ ಐಕ್ಯವಾಗಿ ಹೋಯಿತು. ಇದು ಸಾಮಾನ್ಯ ನಷ್ಟವಲ್ಲ.

ಗಂಗರ ಕೈಲಿ ದ್ವಾರಸಮುದ್ರದ ಹೊಯ್ಸಳರ ಕೈಲಿ ಇದ್ದ ನೀಲಗಿರಿ, ವಿಜಯನಗರ ಕಾಲದಲ್ಲೂ, ಕನ್ನಡಿಗರ ಕೈಲೇ ಇತ್ತು. ಅದನ್ನು ತಮಿಳರು ಕಬಳಿಸಿಬಿಟ್ಟರು. ಕನ್ನಡಿಗರ ಅಭಿಮಾನ ಶೂನ್ಯತೆಗೆ ನಿದರ್ಶನ ಇದು ಎನ್ನುತ್ತಾರೆ ಶರ್ಮಾಜಿ.

ಶಿಲಾಶಾಸನದಲ್ಲಿ ಕಂಡುಬರುವ ಕೆಲ ಕನ್ನಡ ಕವಿಗಳು ಎಂಬ ಮಹಾಪ್ರಬಂಧವನ್ನು ರಚಿಸಿ ಕೃಷ್ಣಶಾಸ್ತ್ರಿಗಳಿಗೆ ಶರ್ಮರು ತೋರಿಸಿದರು. ಶಾಸ್ತ್ರಿಗಳು ಇದನ್ನು ಭಾರತ ಸರ್ಕಾರಕ್ಕೆ ಕಳುಹಿಸಿ. This may be included in the Series and Memories published by the Department ಎಂದು ಸೂಚಿಸಿದರು. ಇದನ್ನು ಇಂಗ್ಲಿಷಿಗೆ ಮಾಡಿಕಳಿಸಲು ನಿಮ್ಮ Young Assistantಗೆ ಹೇಳಿ ಎಂದು ದೆಹಲಿಯಿಂದ ಉತ್ತರ ಬಂತು. ತಾತಾಚಾರ್ಯರು ಇದಕ್ಕೆ ಒಪ್ಪಲಿಲ್ಲ. ಕನ್ನಡಿಗರಿಗೆ ಇದು ಸಂಬಂಧಿಸಿದ್ದಾದ್ದರಿಂದ ಇದನ್ನು ಇಂಗ್ಲಿಷಿಗೆ ತರ್ಜಮೆ ಮಾಡಿ ಪ್ರಕಟಿಸುವ ಅಗತ್ಯವಿಲ್ಲ ಎಂದು ಶರ್ಮರು ದೆಹಲಿಗೆ ತಿಳಿಸಿದರು. ಭಾರತ ಸರ್ಕಾರ ತನ್ನ ತೀರ್ಮಾನವನ್ನು ಪುನಃ ಪರಿಶೀಲಿಸಿ ಮುಂದೆ ಕನ್ನಡದಲ್ಲೇ ಅದನ್ನು ಹೊರತಂದಿತು.

೧೯೨೩ರಲ್ಲಿ ಶರ್ಮರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ವಿಶ್ವಕರ್ನಾಟಕ ಪತ್ರಿಕೆಯನ್ನು ಹೊರತರಲು ಸನ್ನದ್ಧರಾದರು. ೧೯೨೭ರಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಕಟವಾಗುತ್ತಿದ್ದ ಕನ್ನಡ ಪತ್ರಿಕೆಗಳ ಸೆನ್ಸಾರ್ ಕೆಲಸವನ್ನು ಮದರಾಸ್ ಸರ್ಕಾರ ಮಾಡುತ್ತಿತ್ತು. ಬೆನಗಲ್ ರಾಮರಾಯರು Chief Translator to Govt. of Madras ಆಗಿದ್ದರಿಂದ, ಅವರ ಕಚೇರಿಯಲ್ಲಿ ಈ ಸೆನ್ಸಾರ್ ಕೆಲಸ ನಡೆಯುತ್ತಿತ್ತು. ಮುಂದೆ ತಾತಾಚಾರ್ಯಶರ್ಮರು ವಿಶ್ವಕರ್ನಾಟಕ ಪತ್ರಿಕೆ ನಡೆಸುತ್ತಿದ್ದಾಗ ಮದರಾಸಿನಲ್ಲಿ ಬೆನಗಲ್ ರಾಮರಾಯರನ್ನು ಸಂಧಿಸಿದಾಗ ಅವರು ಶರ್ಮರನ್ನು ಕುರಿತು ವಿಶ್ವಕರ್ನಾಟಕದ ಪಾಲಿಗೆ ನಾನೊಬ್ಬ ಪೊಲೀಸಿನವನಾಗಿದ್ದೇನೆ. ನಿಮ್ಮ ಪತ್ರಿಕೆಯಲ್ಲಿ ಏನು ಬಂದರೂ ರೆಸಿಡೆಂಟರಿಗೆ ಭಯ. ಭಾರತ ಸರ್ಕಾರಕ್ಕೆ ರಹಸ್ಯವಾಗಿ ಇದನ್ನೆಲ್ಲ ರೆಸಿಡೆಂಟರು ತಿಳಿಸುತ್ತಾರೆ. ನಾನು ಭಾಷಾಂತರ ಮಾಡುವಾಗ ಎಷ್ಟೋ ತೇಲಿಸಿ, ಮಹಾಪರಾಧವೆನಿಸದಂತೆ ಮಾಡುತ್ತೇನೆ. ಆದರೂ ಕೆಟ್ಟಕಾಲ. ಎಚ್ಚರಿಕೆಯಿಂದಿರಿ. ಏನಾದರೂ ನಿಮಗೆ ಕೆಡುಕಾದರೆ ಅದು ನನ್ನ ಭಾಷಾಂತರದ ಮೂಲಕ ಆಯಿತೆಂಬ ನೋವು ನನಗೆ ತಟ್ಟಬಾರದು ಎಂದು ಕಿವಿಮಾತು ಹೇಳಿದರಂತೆ.

ದಕ್ಷಿಣ ಭಾರತದಲ್ಲಿ ಹೊರಡುವ ಅನೇಕ ಪತ್ರಿಕೆಗಳನ್ನು Black Listಗೆ ಸೇರಿಸಲಾಗಿತ್ತು. ಮೈಸೂರು ಸಂಸ್ಥಾನದಲ್ಲಿ ಹಾಗೆ ಆ ಪಟ್ಟಿಗೆ ಸೇರಿದ ಪತ್ರಿಕೆ ವಿಶ್ವಕರ್ನಾಟಕ ಒಂದೇ. Gandhian Paper ಎಂದು ವಿಶ್ವಕರ್ನಾಟಕವನ್ನು ಬ್ರಿಟಿಷರು ಹೆಸರಿಸಿದ್ದರು. ಯಾವ ಪತ್ರಿಕೆಗೆ ಉಂಟು ಈ ಭಾಗ್ಯ ! ಎಂದು ಹೆಮ್ಮೆಪಡುತ್ತಾರೆ ತಿರುಮಲೆ ತಾತಾಚಾರ್ಯ ಶರ್ಮರು.

ತಾತಾಚಾರ್ಯ ಶರ್ಮರ ರಸವತ್ತಾದ ಪುಸ್ತಕವನ್ನು ಎಲ್ಲ ಕನ್ನಡಿಗರೂ ಓದಬೇಕೆಂದು ನಾನು ಅಭಿಪ್ರಾಯಪಡುತ್ತೇನೆ.

ಎಚ್. ಎಸ್. ದೊರೆಸ್ವಾಮಿ
೧೮/ಬಿ, ೭ನೇ ಕ್ರಾಸ್, ಎಸ್.ಆರ್. ಕಾಲೋನಿ, ಬೆಂಗಳೂರು - ೫೬೦ ೦೧೯

ಕೆ. ಎಸ್. ರವಿಕುಮಾರ್

# ಸುತ್ತಿಗೆಯ ಶ್ರಮ ರೂಪಿಸಿದ ಕಬ್ಬಿಣದ ಕಂಬ

ನಮ್ಮ ರಾಜಧಾನಿ ದೆಹಲಿಯಲ್ಲಿರುವ ಮೆಹರೌಲಿಗೆ ಪ್ರವಾಸಿಗರಾಗಿ ಭೇಟಿಕೊಟ್ಟವರನ್ನು ಕೇಳಿನೋಡಿ, ದೆಹಲಿಯ ಪ್ರೇಕ್ಷಣೀಯ ಸ್ಥಳಗಳಲ್ಲೆಲ್ಲ ನಿಮ್ಮನ್ನು ಹೆಚ್ಚು ಆಕರ್ಷಿಸಿದ್ದು ಏನು, ಎಂದು. ಅವರು ಕುತುಬ್ ಮಿನಾರ್ ಎಂದು ಉತ್ತರಿಸುತ್ತಾರೆ. ಅನುಮಾನವಿಲ್ಲ. ಏಕೆಂದರೆ ಕುತುಬ್ ಮಿನಾರಿನ ಭವ್ಯ ನಿಲುವು, ಎತ್ತರ, ವಾಸ್ತುಶಿಲ್ಪಗಳು ನಮ್ಮನ್ನು ಸೂಜಿಗಲ್ಲಿನಂತೆ ಸೆಳೆಯುತ್ತವೆ. ಈ ಬೃಹತ್ ಮಿನಾರಿನ ಪಕ್ಕದಲ್ಲೇ ಕುವತ್-ಉಲ್-ಇಸ್ಲಾಂ ಮಸೀದಿಯ ಅವಶೇಷಗಳ ನಡುವೆ ಕಬ್ಬಿಣದ ಕಂಬವೊಂದು ನಿಂತಿದೆ. ಕುತುಬ್ ಮಿನಾರಿಗೆ ಹೋಲಿಸಿದರೆ ಇದರ ಎತ್ತರ ಏನೇನೂ ಅಲ್ಲ. ಆನೆಯೆದುರು ಅಳಿಲು ನಿಂತಂತೆ.

ಪ್ರವಾಸಿಗರು ಈ ಕಂಬವನ್ನು ಗಮನಿಸಿದರೂ ತಲೆಯೊಳಗೆ ದಾಖಲಿಸಿಕೊಳ್ಳಹೋಗುವುದಿಲ್ಲ. ಏಕೆಂದರೆ ಈ ಕಂಬದ ಇತಿಹಾಸ ಅವರಿಗೆ ಮುಂಚಿತವಾಗಿಯೇ ತಿಳಿದಿರುವುದಿಲ್ಲ. ಅದೇಕೆ ಅಲ್ಲಿದೆ ಎಂದಷ್ಟೆ ಅಂದುಕೊಂಡು ಹೋಗುತ್ತಾರೆ. ಹೆಚ್ಚೆಂದರೆ ಅವರಿಗೊಂದು ಮಾಹಿತಿ ತಿಳಿಯಬಹುದು. ಅದೆಂದರೆ ಸಾವಿರಾರು ವರ್ಷಗಳಿಂದ ತುಕ್ಕು ಹಿಡಿಯದ ಕಬ್ಬಿಣದ ಕಂಬ ಎಂದು. ಒಂದು ಕ್ಷಣ ವಿಸ್ಮಿತರಾಗಿ ಆ ಕಂಬವನ್ನು ಬೆನ್ನಬದಿಯಿಂದ ಬಳಸಿ ಹೋಗಿಬಿಡುತ್ತಾರೆ. ಹೀಗೆ ಮಾಡಿದರೆ ದೀರ್ಘಕಾಲದಿಂದ "pending" ಆಗಿರುವ ನಮ್ಮ ಬಯಕೆ, ಆಸೆಗಳು ಈಡೇರುತ್ತವೆ ಎಂದು ನಂಬಿಕೆಯೊಂದು ಈ ಕಂಬವನ್ನು ಸುತ್ತುವರಿದಿದೆ. ಕಂಬಕ್ಕೆ ಯಾಕೆ ತುಕ್ಕು ಹಿಡಿಯುವುದಿಲ್ಲ, ಕಂಬವನ್ನು ಯಾರು ಎರಕ ಹೊಯ್ದರು, ಅದು ಯಾವ ಕಾಲಕ್ಕೆ ಸೇರಿದ್ದು ಇತ್ಯಾದಿ ಪ್ರಶ್ನೆಗಳು ಪ್ರವಾಸಿಗರ ಬಳಿ ಸುಳಿಯುವುದಿಲ್ಲ. ಪುರಾಣ, ದಂತಕತೆಗಳನ್ನೇ ಇತಿಹಾಸವೆಂದು ಪರಿಗಣಿಸುವ ನಮ್ಮ ದೃಷ್ಟಿಕೋನ ಇದಕ್ಕೆ ಕಾರಣವಿರಬಹುದು. ಐತಿಹಾಸಿಕ ಸ್ಮಾರಕಗಳನ್ನು ಪ್ರಶ್ನಾರ್ಥಕವಾಗಿ, ಕುತೂಹಲದ ಕೇಂದ್ರಬಿಂದುವಾಗಿ ಗಮನಿಸುವ ಒತ್ತಾಯ ನಮ್ಮ ಜೀವನಶೈಲಿಯಲ್ಲಿ ಅನಿವಾರ್ಯವಾಗಿಲ್ಲದಿರುವುದರಿಂದ ಮೆಹರೌಲಿಯ ಕಬ್ಬಿಣದ ಕಂಬವೂ ಚಣಕಾಲದ ನಂತರ ವಿಸ್ಮೃತಿಗೆ ಸರಿಯುತ್ತದೆ.

ಪ್ರೌಢಶಾಲೆಯ ಇತಿಹಾಸ ಪಠ್ಯಪುಸ್ತಕದಲ್ಲಿ ಕಬ್ಬಿಣದ ಕಂಬದ ಬಗ್ಗೆ ೨-೩ ವಾಕ್ಯಗಳ ಬಹಳ ಸಂಕ್ಷಿಪ್ತ ವಿವರಣೆ ಓದಿದಾಗಲೇ ಅದರ ಬಗ್ಗೆ ಕುತೂಹಲ ಮೂಡಿತ್ತು. ೧೯೯೪ರಲ್ಲಿ ಮೊದಲಬಾರಿ ಮೆಹರೌಲಿಗೆ ಭೇಟಿಕೊಟ್ಟಾಗ ಕಬ್ಬಿಣದ ಕಂಬ ಮತ್ತು ಕುತುಬ್ ಮಿನಾರ್ ಎರಡನ್ನೂ ಒಂದೇ ಛಾಯಾಚಿತ್ರದಲ್ಲಿ ಸೆರೆಹಿಡಿದುಕೊಂಡು ಬಂದು ಆಗಾಗ ಅದನ್ನು ನೋಡುತ್ತ ಖುಷಿ

ಕಬ್ಬಿಣದ ಕಂಬವನ್ನು ಮೆಹರೌಲಿಗೆ ಯಾರು ಯಾವಾಗ ಎಲ್ಲಿಂದ ತಂದರು ? ಈ ಪ್ರಶ್ನೆಗೆ ಉತ್ತರ ಕಂಡುಹಿಡಿಯಲು ಹಲವು ವಾದಗಳು ಚಾಲ್ತಿಯಲ್ಲಿವೆ. ದೆಹಲಿಯ ಸ್ಥಾಪಕನೆಂದು ಪರಿಗಣಿಸಲ್ಪಟ್ಟಿರುವ ತೋಮಾರ ರಜಪೂತ ರಾಜ ಅನಂಗಪಾಲ (ಕ್ರಿ.ಶ. ೩೧೦)ನೇ ಕಬ್ಬಿಣದ ಕಂಬವನ್ನು ದೆಹಲಿಯಲ್ಲಿ ಸ್ಥಾಪಿಸಿದವನು ಎಂದು ಹೇಳಲಾಗುತ್ತದೆ. ಎಷ್ಟೇ ಪ್ರಯತ್ನಪಟ್ಟರೂ ಕಂಬವನ್ನು ಆಳವಾಗಿ ಹೂತು ದೃಢವಾಗಿ ನಿಲ್ಲಿಸಲಾಗಲಿಲ್ಲವಂತೆ. ಸಡಿಲವಾಗಿ ನಿಂತ ಕಂಬದಿಂದ ದೆಹಲಿಗೆ ಆ ಹೆಸರು ಬಂತಂತೆ. 'ಧ್ಹಿಲಿ' ಎಂದರೆ ಹಿಂದಿಯಲ್ಲಿ ಸಡಿಲ ಎಂಬ ಅರ್ಥವಿದೆ. ಧ್ಹಿಲಿ ಮುಂದೆ ದಿಲ್ಲಿ, ಡೆಲ್ಲಿ, ದೆಹಲಿ ಎಂದು ಅಪಭ್ರಂಶಗೊಂಡಿತು ಎಂಬ ಐತಿಹ್ಯವಿದೆ.

ಪಡುತ್ತಿದ್ದೆ. ಆ ಖುಷಿಯೇ ಸದರಿ ಲೇಖನಕ್ಕೆ ಪ್ರೇರಣೆಯಾಗಿದೆ.

ಈ ನಡುವೆ ಇನ್ನೊಂದು ಪ್ರೇರಣೆಯೂ ದೂರದ ಝಾರ್ಖಂಡ್‌ನಿಂದ ಒದಗಿ ಬಂದಿತ್ತು. ರಾಂಚಿಯ ಭಾರತ ಉಕ್ಕು ಪ್ರಾಧಿಕಾರ (Steel Authority of India Ltd.)ದ ಡೆಪ್ಯೂಟಿ ಜನರಲ್ ಮ್ಯಾನೇಜರ್ ಆಗಿರುವ ಡಾ॥ ಕೃಷ್ಣಕಾಂತ್ ಪ್ರಸಾದ್ ಕಬ್ಬಿಣದ ಕಂಬದ ಕುರಿತು ತಮ್ಮ ತಂಡದ ಸಂಶೋಧನೆಯ ಸಾರಾಂಶಗಳನ್ನು ನನಗೆ ನೀಡಿ ಲೇಖನ ಬರೆಯಲು ಪ್ರೋತ್ಸಾಹಿಸಿದರು. (ಈ ಮುನ್ನ ಇವರಲ್ಲದೆ ಸ್ವತಂತ್ರ ಭಾರತದಲ್ಲಿ ಅನೇಕ ತಜ್ಞರು ಕಬ್ಬಿಣದ ಕಂಬವು ತುಕ್ಕು ಹಿಡಿಸಿಕೊಳ್ಳದಿರಲು ಕಾರಣವೇನು ಎಂಬ ಬಗ್ಗೆ ಆಳವಾದ ಸಂಶೋಧನೆ, ಅಧ್ಯಯನಗಳನ್ನು ಮಾಡಿದ್ದಾರೆ. ಸ್ವಯಂ ಅಧ್ಯಯನ ನಡೆಸಿ ಕಂಬದ ಕುರಿತು Rustless wonder ಪುಸ್ತಕ ಬರೆದ ಪ್ರೊ॥ ಅನಂತರಾಮನ್, ೧೯೬೩ರಲ್ಲಿ ಸಂಶೋಧನೆ ನಡೆಸಿದ ರಾಷ್ಟ್ರೀಯ ಲೋಹ ವಿಜ್ಞಾನ ಪ್ರಯೋಗಾಲಯದ ಎಂ. ಕೆ. ಘೋಷ್ ಮುಂತಾದವರನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು).

**ಎಲ್ಲಿಂದ ಬಂತು ಕಬ್ಬಿಣದ ಕಂಬ ?**

ಕಬ್ಬಿಣದ ಕಂಬವನ್ನು ಮೆಹರೌಲಿಗೆ ಯಾರು ಯಾವಾಗ ಎಲ್ಲಿಂದ ತಂದರು ? ಈ ಪ್ರಶ್ನೆಗೆ ಉತ್ತರ ಕಂಡುಹಿಡಿಯಲು ಹಲವು ವಾದಗಳು ಚಾಲ್ತಿಯಲ್ಲಿವೆ. ದೆಹಲಿಯ ಸ್ಥಾಪಕನೆಂದು ಪರಿಗಣಿಸಲ್ಪಟ್ಟಿರುವ ತೋಮಾರ ರಜಪೂತ ರಾಜ ಅನಂಗಪಾಲ (ಕ್ರಿ.ಶ. ೩೧೦)ನೇ ಕಬ್ಬಿಣದ ಕಂಬವನ್ನು ದೆಹಲಿಯಲ್ಲಿ ಸ್ಥಾಪಿಸಿದವನು ಎಂದು ಹೇಳಲಾಗುತ್ತದೆ. ಎಷ್ಟೇ ಪ್ರಯತ್ನಪಟ್ಟರೂ ಕಂಬವನ್ನು ಆಳವಾಗಿ ಹೂತು ದೃಢವಾಗಿ ನಿಲ್ಲಿಸಲಾಗಲಿಲ್ಲವಂತೆ. ಸಡಿಲವಾಗಿ ನಿಂತ ಕಂಬದಿಂದ ದೆಹಲಿಗೆ ಆ ಹೆಸರು ಬಂತಂತೆ. 'ಧ್ಹಿಲಿ' ಎಂದರೆ ಹಿಂದಿಯಲ್ಲಿ ಸಡಿಲ ಎಂಬ ಅರ್ಥವಿದೆ. ಧ್ಹಿಲಿ ಮುಂದೆ ದಿಲ್ಲಿ, ಡೆಲ್ಲಿ, ದೆಹಲಿ ಎಂದು ಅಪಭ್ರಂಶಗೊಂಡಿತು ಎಂಬ ಐತಿಹ್ಯವಿದೆ.

ಕಂಬವನ್ನು ಗುಪ್ತರ ಕಾಲ (ಕ್ರಿ. ಶ. ೪೫೫ರ ಆಸುಪಾಸು)ದಲ್ಲಿ ನಿರ್ಮಿಸಲಾಯಿತು ಎಂದು ಕೆಲ ಇತಿಹಾಸಕಾರರು ವಾದಿಸಿದರೂ ದೆಹಲಿಗೇಕೆ ಅದು ಬಂತು ಎಂಬ ಪ್ರಶ್ನೆಗೆ ನಿರುತ್ತರರಾಗುತ್ತಾರೆ. ಇನ್ನು ಕೆಲ ಇತಿಹಾಸಕಾರರು ಕಂಬವನ್ನು ವಿಷುಪುದ (ಈಗಿನ ಮಥುರಾ ?)ದಲ್ಲಿ ಎರಕಹೊಯ್ದು ಕ್ರಿ.ಶ. ೧೦೫೦ರ ಹೊತ್ತಿಗೆ ದೆಹಲಿಗೆ ತರಲಾಯಿತು ಎಂದು ವಾದಿಸುತ್ತಾರೆ. ಒಂದಂತೂ ನಿಜ. ದೆಹಲಿಯಲ್ಲೇ ಸ್ಥಳೀಯ ಕಮ್ಮಾರರಿಂದ ಈ ಕಂಬ ನಿರ್ಮಾಣವಾಗಿಲ್ಲ. ಅದು ಹೊರಗಿನಿಂದ ಬಂದಿದೆ. ಎಲ್ಲಿಂದ ಎಂಬುದು ಮಾತ್ರ ಇನ್ನೂ ನಿಗೂಢವಾಗಿದೆ.

ಹೀಗೂ ಒಂದು ವಾದವಿದೆ. ಕಬ್ಬಿಣದ ಕಂಬ ಮೂಲತಃ ಒಂದು ಗರುಡಗಂಭ. ವಿಷ್ಣುವಿನ ದೇವಾಲಯದೆದುರು ಅದನ್ನು ನಿಲ್ಲಿಸಲಾಗಿತ್ತು. ಕಾಲಾನಂತರ ಕಂಬದ ನೆತ್ತಿಯಲ್ಲಿದ್ದ ಗರುಡನ ವಿಗ್ರಹ ಬಿದ್ದುಹೋಗಿರಬೇಕು ಇಲ್ಲವೇ ಕಳುವಾಗಿರಬೇಕು. ವಿಷ್ಣುವಿನ ದೇವಾಲಯವೂ ಶಿಥಿಲಗೊಂಡು ನಾಶವಾಗಿರಬೇಕು. ಕ್ರಿ. ಶ. ೧೧೯೨ರಲ್ಲಿ ದೆಹಲಿಯ ಸುಲ್ತಾನನಾದ ಕುತುಬ್‌ದಿನ್‌ನ ಕಾಲದಲ್ಲಿ ಕುವತ್-ಉಲ್-ಇಸ್ಲಾಮ್ (Might of Islam, ಇಸ್ಲಾಮಿನ ಶಕ್ತಿ) ಹೆಸರಿನ ಮಸೀದಿಯನ್ನು ನಿರ್ಮಿಸಲು ಆರಂಭಿಸಲಾಯಿತು. ಆ ವೇಳೆಗಾಗಲೆ ಮಸೀದಿಯ ನಿವೇಶನದಲ್ಲಿದ್ದ ವಿಷ್ಣುವಿನ ದೇವಾಲಯ ಸಂಪೂರ್ಣ ಶಿಥಿಲಗೊಂಡು ಕುಸಿಯುವ ಅವಸ್ಥೆಗೆ ತಲುಪಿತ್ತು. ಆ ದೇವಾಲಯವನ್ನು ಪೂರ್ತಿ ಕೆಡವಿ, ದೇವಾಲಯದ ಕಲ್ಲು, ಸುಣ್ಣದ ಗಾರೆಗಳನ್ನು ಮಸೀದಿಯ ನಿರ್ಮಾಣದಲ್ಲಿ ಬಳಸಿಕೊಳ್ಳಲಾಯಿತು. ಮಸೀದಿಯ ಪ್ರಾರ್ಥನಾ ಪ್ರಾಂಗಣದೆದುರು ಆಕರ್ಷಣೆಯ ಕೇಂದ್ರಬಿಂದುವಾಗಿ ಕಬ್ಬಿಣದ ಕಂಬವನ್ನು ಪುನಃ ನಿಲ್ಲಿಸಲಾಯಿತು ಎಂದು ಪುರಾತತ್ವ ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಈ ಮುನ್ನ ದೇವಾಲಯದೆದುರು ಬಯಲಿನಲ್ಲಿ ನಿಂತಿದ್ದ ಕಬ್ಬಿಣದ ಕಂಬಕ್ಕೆ ಈಗ ಮಸೀದಿಯ ಆವರಣದ ರಕ್ಷಣೆ ದೊರೆಯಿತು. ಇಸ್ಲಾಮಿಕ್ ಶೈಲಿಯ ಮಸೀದಿಯ ಸೌಂದರ್ಯ, ಭಾರತೀಯ ಕಮ್ಮಾರರ ಕೌಶಲ್ಯದ ಸಂಕೇತವಾದ ಕಬ್ಬಿಣದ ಕಂಬ ಎರಡನ್ನೂ ಒಟ್ಟಿಗೆ ವೀಕ್ಷಿಸುವುದು ಒಂದು ವಿಶಿಷ್ಟ ಅನುಭವವಾಗಿದೆ.

ಕ್ರಿ. ಶ. ೧೭೩೯ರಲ್ಲಿ ಪರ್ಷಿಯಾದ ದೊರೆ ನಾದಿರ್ ಷಾನ ಅಮಾನುಷ ದಾಳಿಗೆ ದೆಹಲಿ ತುತ್ತಾಯಿತು. ದೆಹಲಿಯ ಅನೇಕ ಸ್ಮಾರಕಗಳು ಈ ದಾಳಿಯಲ್ಲಿ ಜಖಂಗೊಂಡವು. ನಾದಿರ್ ಷಾನ ಪಡೆಗಳ ಫಿರಂಗಿ ದಾಳಿಗೆ ಕಬ್ಬಿಣದ ಕಂಬ ಕೂಡ ಗುರಿಯಾಯಿತು. ಕಂಬಕ್ಕೆ ಬಡಿದ ಒಂದು ಫಿರಂಗಿ ಗುಂಡು ಅದಕ್ಕೆ ದೊಡ್ಡ ಕಚ್ಚು ಗಾಯವನ್ನು ಮಾಡಿತು. ಇಂದಿಗೂ ಆ ಗಾಯ ೧೨ ಅಡಿ ಎತ್ತರದ ಭಾಗದಲ್ಲಿ ಗಮನ ಸೆಳೆಯುವಂತಿದೆ.

ಫಿರಂಗಿ ದಾಳಿಗೆ ತುತ್ತಾಗಿಯೂ ಕಬ್ಬಿಣದ ಕಂಬ ಸಡಿಲಗೊಂಡು ನೆಲಕ್ಕುರುಳಲಿಲ್ಲ. ದೆಹಲಿ ವಾಸಿಗಳಿಗೆ ಇದು ಆಚ್ಚರಿಯ ಸಂಗತಿಯಾಗಿತ್ತು. ಅವರು ಹೇಳುತ್ತಿದ್ದರಂತೆ ''ಎಲ್ಲಿಯವರೆಗೆ ಕಬ್ಬಿಣದ ಕಂಬ ದೃಢವಾಗಿ ನಿಂತಿರುವುದೋ ಅಲ್ಲಿಯವರೆಗೆ ದೆಹಲಿ ಪರಕೀಯರ ಪಾಲಾಗುವುದಿಲ್ಲ'' ಎಂದು.

**ಪ್ರಶಂಸೆಯ ಪ್ರತೀಕ**

ಕಬ್ಬಿಣದ ಕಂಬವು ೬.೫ ಟನ್ ತೂಗುತ್ತದೆ. ೭.೨೦ ಮೀಟರ್ (೨೩ ಅಡಿಗಳು) ಎತ್ತರವಿದೆ. ಕೇವಲ ೯೩ ಸೆಂ.ಮೀ.ನಷ್ಟು ಮಾತ್ರ ನೆಲದೊಳಗೆ ಹುಗಿಯಲ್ಪಟ್ಟಿದೆ. ಕಂಬದ ನಿಲುವಿಗೆ ದೃಢತೆ ಒದಗಿಸಲು ಹುಗಿಯಲ್ಪಟ್ಟ ಭಾಗಕ್ಕೆ ಈರುಳ್ಳಿಯ ಆಕಾರವನ್ನು ನೀಡಲಾಗಿದೆ. ೧೮೭೧ರಲ್ಲಿ ಬುಡ ಅಗೆದಾಗ ಈ ಈರುಳ್ಳಿಯ ಭಾಗ ಮೊದಲಬಾರಿಗೆ ಪ್ರಕಟಗೊಂಡಿತ್ತು.

೯ ರಿಂದ ೧೦ ಅಡಿ ಎತ್ತರದಲ್ಲಿ ಗುಪ್ತರ ಕಾಲದ ಬ್ರಾಹ್ಮಿಲಿಪಿಯಲ್ಲಿ ಅರಸ ಚಂದ್ರ (೨ನೇ ಚಂದ್ರಗುಪ್ತನೆಂದು ನಂಬಲಾಗಿದೆ)ನನ್ನು ಪ್ರಶಂಸಿಸಲಾಗಿದೆ. ಚಂದ್ರನು ವಂಗ ಹಾಗೂ ವಹ್ಲೀಕ ರಾಜ್ಯಗಳನ್ನು ಗೆದ್ದಿದ್ದನ್ನು ಪ್ರಶಂಸಿಸಿ ವಿಜಯದ ಸಂಕೇತವಾಗಿ ಈ 'ಗರುಡಗಂಭ'ವನ್ನು ನಿಲ್ಲಿಸಲಾಗಿದೆ ಎಂದು ವಾದಿಸಲಾಗುತ್ತದೆ. ಕಂಬದಲ್ಲಿ ಬಳಸಿದ ಲೋಹದ ಮಿಶ್ರಣ ಮಿದು (ductile)ವಾದದ್ದಾಗಿರುವುದರಿಂದ ಪ್ರಶಂಸೆಯ ಸಾಲುಗಳ ಅಕ್ಷರಗಳನ್ನು ಕಂಬದ ಮೇಲ್ಮೈ ಬಿಸಿಯಾಗಿದ್ದಾಗಲೇ (ಕಮ್ಮಾರ ಸಾಲೆಯಲ್ಲೆ) ಹೂಳುವ ಮುನ್ನಾ ನೆಲದ ಮೇಲೆ ಮಲಗಿಸಿಕೊಂಡು ಕೆತ್ತಲಾಗಿದೆ. ಏಕೆಂದರೆ ಅಕ್ಷರಗಳು ಆಯತಾಕಾರದ ನಿರ್ದಿಷ್ಟ ಅಳತೆಯೊಳಗೇ ನೀಟಾಗಿ ಕೆತ್ತಲ್ಪಟ್ಟಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ೧೮೩೮ರಷ್ಟು ಹಿಂದೆಯೇ ಜೇಮ್ಸ್ ಪ್ರಿನ್ಸೆಪ್ ಎಂಬ ಭಾರತತಜ್ಞ ಈ ಬ್ರಾಹ್ಮಿ ಲಿಪಿಯ ಪಠ್ಯವನ್ನು ಓದಿ ಮೊದಲಬಾರಿಗೆ ಅರ್ಥೈಸಿದನು. ಕಬ್ಬಿಣದ ಕಂಬದ ಕುರಿತು ಮೊದಲ ಲೇಖನವನ್ನು ಇಂಗ್ಲಿಷಿನಲ್ಲಿ ಏಷ್ಯಾಟಿಕ್ ಸೊಸೈಟಿಯ ಜರ್ನಲ್‌ಗೆ ಆತ ಬರೆದಿದ್ದನು.

**ಕಂಬವನ್ನು ಹೇಗೆ ತಯಾರಿಸಲಾಯಿತು ?**

೨೩ ಅಡಿ ಉದ್ದದ ಕಂಬವನ್ನು ಒಮ್ಮಿಂದೊಮ್ಮೆಲೆ ಏಕತುಣುಕಾಗಿ ಎರಕಹೊಯ್ದು ನಿರ್ಮಿಸಿಲ್ಲ. ೨೦-೩೦ ಕೆ.ಜಿ. ತೂಕದ ಬೇರೆ ಬೇರೆಯಾಗಿ ಎರಕಹೊಯ್ದ ತುಣುಕುಗಳನ್ನು ಅವು ತಪ್ತವಾಗಿದ್ದಾಗಲೆ ಸುತ್ತಿಗೆಯಿಂದ ಅಂಚಿನಲ್ಲಿ ಬಡಿದು (forging) ಒಂದಕ್ಕೊಂದು ವೆಲ್ಡ್ ಮಾಡಲಾಗಿದೆ ಎಂದು ಕೆ. ಕೆ. ಪ್ರಸಾದ್‌ರ ತಂಡ ಅಭಿಪ್ರಾಯಪಟ್ಟಿದೆ. ಕಂಬದ ಮೇಲೆ ಈಗಲೂ ಸುತ್ತಿಗೆ ಏಟಿನ ಗುರುತುಗಳನ್ನು ಸಾಕಷ್ಟು ಕಾಣಬಹುದು. ಸುಮಾರು

ಕಂಬದ ಹಿನ್ನೆಲೆಯಲ್ಲಿ ಮಸೀದಿಯ ಅವಶೇಷ



ಬ್ರಾಹ್ಮೀಲಿಪಿಯ ಬರಹ

ನೂರಕ್ಕೂ ಹೆಚ್ಚು ಕಮ್ಮಾರರು ೧೫ ದಿನಗಳವರೆಗೆ ಒಂದೇ ಸಮನೆ ದುಡಿದು ಈ ಕಂಬವನ್ನು ನಿರ್ಮಿಸಿದ್ದಾರೆ ಎಂದು ತರ್ಕಿಸಲಾಗಿದೆ.

**ತುಕ್ಕು ಹಿಡಿಯದಿರಲು ಕಾರಣಗಳು**

೧೯೬೧ರಲ್ಲಿ ಕಂಬವನ್ನು ಅಗೆದು ತೆಗೆದು ಅದನ್ನಾವರಿಸಿದ್ದ ಧೂಳು, ಬೆವರಿನಂಶ, ಜಿಡ್ಡು ಇತ್ಯಾದಿಗಳನ್ನು ರಾಸಾಯನಿಕಗಳಿಂದ ತೊಳೆದು ಶುಚಿಗೊಳಿಸಿ ಮತ್ತೆ ಹುಗಿಯಲಾಯಿತು. ಈ ಸಂದರ್ಭದಲ್ಲಿ ಕಂಬದಿಂದ ಸ್ವಲ್ಪ ಮಾದರಿ ತೆಗೆದು ಪರೀಕ್ಷೆಗೆ ಒಳಪಡಿಸಲಾಯಿತು. ಬೇರಾವುದೇ ಕಬ್ಬಿಣದ ಪದಾರ್ಥದಲ್ಲಿ ಸಾಮಾನ್ಯವಾಗಿ ಇರುವ ಇಂಗಾಲದ ಪ್ರಮಾಣಕ್ಕೆ ಹೋಲಿಸಿದರೆ ಅತಿ ಕಡಿಮೆ ಪ್ರಮಾಣದಲ್ಲಿ ಇಂಗಾಲವು ಕಬ್ಬಿಣದ ಕಂಬದಲ್ಲಿದ್ದುದು ತಿಳಿದುಬಂತು. ಕಂಬಕ್ಕೆ ತುಕ್ಕು ಹಿಡಿಯದಿರಲು ಈ ಅಂಶವೂ ಕಾರಣ.

ಕಳೆದ ಹದಿನಾರು ಶತಮಾನಗಳಿಂದ ತುಕ್ಕಿಗೆ ಸವಾಲಾಗಿ ನಿಲ್ಲಲು ಮೆಹರೌಲಿಯ ಕಂಬಕ್ಕೆ ಇನ್ನಿತರ ಅಂಶಗಳೂ ಸಹಾಯಕ್ಕೆ ಬಂದಿವೆ. ಮೊದಲನೆಯದಾಗಿ ಕಂಬವನ್ನು ತಯಾರಿಸುವಾಗ ಕುಶಲಕರ್ಮಿಗಳು ಕಬ್ಬಿಣದ ಜೊತೆ ಇನ್ನಿತರ ಮೂಲಧಾತುಗಳನ್ನು ಸೇರಿಸಿದ್ದಾರೆ (ಕೋಷ್ಟಕವನ್ನು ನೋಡಿ). ರಂಜಕ ಮತ್ತು ಗಂಧಕಗಳು ತುಕ್ಕಿಗೆ ಪ್ರತಿರೋಧ ಒಡ್ಡಲು ಸಹಾಯ ಮಾಡುತ್ತವೆ.

| ಮೂಲಧಾತು | ಸಂಕೇತ | ಶೇಕಡಾವಾರು ಪ್ರಮಾಣ |
|---|---|---|
| ಇಂಗಾಲ | C | ೦.೦೮–೦.೨೩ |
| ಸಿಲಿಕಾನ್ | Si | ೦.೦೨೬–೦.೦೪೬ |
| ಗಂಧಕ | S | ೦.೦೦೬–೦.೦೯೬ |
| ರಂಜಕ | P | ೦.೧೧೪–೦.೧೮೦ |
| ಮ್ಯಾಂಗನೀಸ್ | Mn | ೦.೦೦–೦.೦೭ |
| ಸಾರಜನಕ | N | ೦.೦೦೬೫–೦.೦೩೨ |
| ಕಬ್ಬಿಣ | Fe | ೯೯.೭೨ |
| ಕ್ರೋಮಿಯಂ | Cr | ೦.೦೫೪ |
| ತಾಮ್ರ | Cu | ೦.೦೩ |
| ನಿಕ್ಕಲ್ | Ni | ೦.೦೫ |

ಕಂಬವನ್ನು ರೂಪಿಸುವ ಪ್ರಕ್ರಿಯೆಯಲ್ಲೇ ಅದಕ್ಕೆ ತುಕ್ಕು ನಿರೋಧಕ ಶಕ್ತಿ ಒದಗಿಬಂದಿರುವುದನ್ನು ತಜ್ಞರು ಪತ್ತೆ ಮಾಡಿದ್ದಾರೆ. ಕಬ್ಬಿಣದ ದೊಡ್ಡ ತುಣುಕುಗಳನ್ನು ಸುತ್ತಿಗೆಯಿಂದ ಬಡಿದು ಬಡಿದು ವೆಲ್ಡ್ ಮಾಡುವಾಗ ಅವುಗಳನ್ನು ಪುನಃ ಪುನಃ ತಪ್ತಗೊಳಿಸಿ ಮಿದುಮಾಡಿಕೊಳ್ಳಬೇಕಿತ್ತು. ಹೀಗೆ ಮಾಡುವಾಗ ಆಕ್ಸೈಡ್‌ನ ಒಂದು ಪೊರೆ ಮತ್ತು ಕಬ್ಬಿಣದ ಕಿಟ್ಟಗಳು (slag) ರೂಪುಗೊಂಡು ಸುತ್ತಿಗೆ ಏಟುಗಳಿಂದ ಕಂಬದ ಮೇಲ್ಮೈಯಲ್ಲಿ ಸೇರಿಹೋಗಿರಬೇಕು. ಆಕ್ಸೈಡ್ ಪೊರೆ ಮತ್ತು ಕಿಟ್ಟದ ಅಂಶಗಳು ವಾತಾವರಣದ ತೇವಾಂಶ ಕಬ್ಬಿಣದೊಂದಿಗೆ ವರ್ತಿಸಲು ಅಡ್ಡಿಯಾಗುತ್ತವೆ.

ಕಂಬದ ದೈತ್ಯಾಕೃತಿ ಮತ್ತು ತೂಕವೂ ತುಕ್ಕು ಹಿಡಿಯದಿರಲು ಮುಖ್ಯ ಕಾರಣಗಳಾಗಿವೆ. ಕಂಬವು ವಿಸ್ತಾರವಾಗಿ ಸೂರ್ಯನ ಶಾಖಕ್ಕೆ ತೆರೆದುಕೊಳ್ಳುವುದರಿಂದ ಅದು ತನ್ನ ಮೇಲ್ಮೈ ಉಷ್ಣತೆ ಹೆಚ್ಚಿಸಿಕೊಂಡು ತೇವಾಂಶ ತನ್ನ ಮೇಲೆ ಶೇಖರಗೊಳ್ಳದಂತೆ ತಡೆಯುತ್ತದೆ; ಉಷ್ಣತೆಯನ್ನು ಬಹಳ ಕಾಲ ಹಿಡಿದಿರಿಸಿಕೊಳ್ಳುತ್ತದೆ (ಸೂರ್ಯಾಸ್ತದ ನಂತರವೂ). ಮಳೆಗಾಲದ ಸ್ವಲ್ಪ ಅವಧಿ ಬಿಟ್ಟರೆ ದೆಹಲಿಯಲ್ಲಿ ಒಣಹವೆಯೇ ಹೆಚ್ಚಾಗಿರುವುದರಿಂದ ಕಂಬಕ್ಕೆ ತುಕ್ಕು ತಗುಲಲು ಅವಕಾಶವಿರುವುದಿಲ್ಲ. ಸಾಮಾನ್ಯವಾಗಿ ತುಕ್ಕು ಹಿಡಿಯಲು ವಾತಾವರಣದ ಆರ್ದ್ರತೆಯ ಕ್ರಾಂತಿಮೌಲ್ಯ (Critical value) ಶೇ. ೮೦ಕ್ಕಿಂತ ಜಾಸ್ತಿಯಿರಬೇಕು. ಒಣಹವೆಯ ಕಾರಣ ದೆಹಲಿಯಲ್ಲಿ ವರ್ಷದಲ್ಲಿ ಸರಾಸರಿ ೨೦ ದಿನಗಳಲ್ಲಷ್ಟೆ ಆರ್ದ್ರತೆಯ ಮಟ್ಟ ಶೇ. ೮೦ಕ್ಕಿಂತ ಹೆಚ್ಚಿರುತ್ತದೆ. ಉಳಿದಂತೆ ಗಮನಾರ್ಹವಾಗಿ ಈ ಮಟ್ಟಕ್ಕಿಂತ ಕಡಿಮೆಯಿರುತ್ತದೆ. ಆರ್ದ್ರತೆ ಹೆಚ್ಚಿದ ದಿನಗಳಲ್ಲಿ ತುಕ್ಕಿನ ಪ್ರಕ್ರಿಯೆ ಆರಂಭವಾಗಬೇಕು ಎನ್ನುವ ಹೊತ್ತಿಗೆ ಒಣಹವೆಯ ವಾತಾವರಣ ಬಂದುಬಿಟ್ಟಿರುತ್ತದೆ.

ಹೀಗೆ ಅನೇಕ ಕಾರಣಗಳಿಂದ ಮೆಹರೌಲಿಯ ಕಬ್ಬಿಣದ ಕಂಬವು ತನ್ನ ತುಕ್ಕು ವಿರೋಧಿ ನಿಲುವನ್ನು ಇಷ್ಟು ಕಾಲ ಕಾಪಾಡಿಕೊಂಡು ಬರಲು ಸಾಧ್ಯವಿದೆ.

**ಕೊನೆಯದಾಗಿ ಒಂದು ಪ್ರಶ್ನೆ**

ಮೆಹರೌಲಿಯ ತುಕ್ಕು ನಿರೋಧಕ ಕಂಬವನ್ನು ತಯಾರಿಸಿದ ಕಮ್ಮಾರರ ವಿಶಿಷ್ಟ ಲೋಹವಿದ್ಯೆಯ ಜ್ಞಾನ ನಮ್ಮ ಕಾಲದವರೆಗೂ ಏಕೆ ಮುಂದುವರಿದುಕೊಂಡು ಬರಲಿಲ್ಲ?

ಅತ್ಯುತ್ತಮ ಗುಣಮಟ್ಟ ಮತ್ತು ದೈತ್ಯಾಕೃತಿಯ ತಯಾರಿಕೆಗೆ ಮೆಹರೌಲಿಯ ಕಬ್ಬಿಣದ ಕಂಬ ಪ್ರಪಂಚದಲ್ಲೆ ಒಂದು ಒಳ್ಳೆಯ ಉದಾಹರಣೆ. ಸುತ್ತಿಗೆ ಬಳಸಿದ ಶ್ರಮದಿಂದ ರೂಪುಗೊಂಡಿರುವುದಕ್ಕೂ ಈ ಕಂಬ ಉತ್ತಮ ಉದಾಹರಣೆ. ಯೂರೋಪಿನ ಕಮ್ಮಾರರು ಅನೇಕ ಹೊಸ ಪ್ರಯೋಗಗಳಿಂದ ಲೋಹವಿದ್ಯೆಯ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಪಡೆದಿದ್ದಾರೆ. ಕಬ್ಬಿಣದ ಕಂಬದ ಹಿನ್ನೆಲೆಯಲ್ಲಿ ಭಾರತೀಯ ಕಮ್ಮಾರರೂ ಯೂರೋಪಿನವರಿಗಿಂತ ಕಡಿಮೆ ಪ್ರತಿಭೆಯವರೇನಲ್ಲ. ಆದರೂ ಅವರ ಕೌಶಲ್ಯ ನಮ್ಮ ತನಕ ಮುಂದುವರಿದುಕೊಂಡು ಬರಲಿಲ್ಲ ಎಂಬ ಕೊರಗು ನಮ್ಮನ್ನು ಕಾಡಲೇಬೇಕು. ಯಾಕೆ ಹೀಗಾಯಿತು?

ನಮ್ಮ ಪ್ರಾಚೀನ ಕುಶಲ ಕಮ್ಮಾರರು ಭಾರತೀಯ ವರ್ಣ ವ್ಯವಸ್ಥೆಯಲ್ಲಿ ಬಹಳ ಕೆಳಸ್ತರಕ್ಕೆ ಸೇರಿದವರು. ಓದು ಬರಹಗಳನ್ನು ನಿರಾಕರಿಸಲ್ಪಟ್ಟವರು. ಸಹಜವಾಗಿಯೇ ತಮಗೆ ಗೊತ್ತಿದ್ದ ವಿಶೇಷ ಜ್ಞಾನವನ್ನು ದಾಖಲಿಸಿಡುವ ಸಾಮರ್ಥ್ಯ ಅವರಿಗಿರಲಿಲ್ಲ. ತುಕ್ಕು ಹಿಡಿಯದ ಮೆಹರೌಲಿಯ ಕಂಬದ ನಿರ್ಮಾಣ ಒಂದು ಆಕಸ್ಮಿಕ ಪ್ರಯತ್ನ ಎಂದು ತಳ್ಳಿಹಾಕಲು ಬರುವುದಿಲ್ಲ. ಅದು ಪ್ರಜ್ಞಾಪೂರ್ವಕವಾಗಿಯೇ ಜರುಗಿದೆ. ಕಬ್ಬಿಣದ ಜೊತೆ ರಂಜಕ, ಗಂಧಕ ಮುಂತಾದವುಗಳನ್ನು ಸೇರಿಸಿದರೆ ತುಕ್ಕು ಹಿಡಿಯುವುದಿಲ್ಲ ಎಂಬುದನ್ನು ಅನುಭವಗಳಿಂದ ಕಮ್ಮಾರರು ತಿಳಿದಿರಲೇಬೇಕು.

ಓದುಬರಹ ಬಲ್ಲ ಮೇಲುವರ್ಗದ ಮಂದಿ ಕಬ್ಬಿಣದ ಕಂಬ ರೂಪಿಸಿದ ಕಮ್ಮಾರರ ಜ್ಞಾನವನ್ನು ದಾಖಲಿಸಿ, ರಕ್ಷಿಸಿಟ್ಟಿದ್ದರೆ ಒಂದು ಅಪೂರ್ವ ತಿಳುವಳಿಕೆ ಪ್ರಪಂಚಕ್ಕೆಲ್ಲ ಹಬ್ಬುತ್ತಿತ್ತೋ ಏನೋ (ಪ್ರಾಯಶಃ ಯಾರಾದರೂ ದಾಖಲಿಸಿದ್ದರೆ ನಮಗಿನ್ನೂ ಆ ದಾಖಲೆ ದೊರಕಿಲ್ಲ ಎಂದು ಭಾವಿಸೋಣವೇ?). ಆದರೆ ಕೆಳವರ್ಗಗಳ ಪ್ರತಿಭೆಯನ್ನು ಗುರ್ತಿಸಬೇಕೆನ್ನುವ ಅವಶ್ಯಕತೆ ಅಂದಿನ ಶಿಕ್ಷಿತರಿಗೆ ಇತ್ತು ಎಂದು ನಾನು ಭಾವಿಸುವುದಿಲ್ಲ. ಹೀಗಾಗಿ ಮೆಹರೌಲಿಯ ಕಂಬದಂತಹ ಇನ್ನೊಂದು ಉದಾಹರಣೆ ಭಾರತದಲ್ಲಿ ಪುನರಾವರ್ತನೆ ಆಗಲಿಲ್ಲ.

**ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ, ಹಾಸನ-೫೭೩ ೨೦೧

# ಬಾಲವಿಜ್ಞಾನಕ್ಕೀಗ ಬೆಳ್ಳಿ ಹಬ್ಬ

ಪ್ರೊ॥ ಎಂ. ಆರ್. ನಾಗರಾಜ್

**ವೈಜ್ಞಾನಿಕ ಜನ ಜಾಗೃತಿ ಮೂಡಿಸುವ ಲಕ್ಷ್ಯವಲ್ಲದೆ ಅನೇಕ ಉಪಲಕ್ಷ್ಯಗಳನ್ನು ಇರಿಸಿಕೊಂಡು 'ಬಾಲವಿಜ್ಞಾನ' ಪತ್ರಿಕೆ ಪ್ರಾರಂಭಗೊಂಡಿತು. ಅನೇಕ ವಿಜ್ಞಾನ ಲೇಖಕರ ಉಗಮ ಹಾಗೂ ವಿಕಾಸಗಳಿಗೆ ಈ ಪತ್ರಿಕೆ ಇಂದಿಗೂ ಶ್ರಮಿಸುತ್ತಿದೆ. ವಿಜ್ಞಾನ ಲೇಖಕರನ್ನು ರೂಪಿಸಿ ಪರಿಷ್ಕರಿಸುವ ಉಪಲಕ್ಷ್ಯ ಇಂದಿಗೂ ಮುಂದುವರಿದಿದೆ. ಕರ್ನಾಟಕಾದ್ಯಂತ ಬಾಲವಿಜ್ಞಾನ ರೂಪಿಸಿದ ಲೇಖಕರು ವಿವಿಧ ಪತ್ರಿಕೆಗಳಲ್ಲಿ ಬರೆಯತೊಡಗಿದ್ದಾರೆ.**

---

ಮಾನವ ಸಮುದಾಯದ ಯಾವುದೇ ಚಟುವಟಿಕೆಯ ಅರಿವು, ಪರಿಣಾಮಗಳಿಗೆ ಎಲ್ಲರೂ ವಾರಸುದಾರರು. ಏಕೆಂದರೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಈ ಚಟುವಟಿಕೆಗೆ ಅವರ ಬೆಂಬಲವಿರುತ್ತದೆ.

ಪ್ರಾರಂಭಿಕ ಹಂತದಲ್ಲಿ ವ್ಯಕ್ತಿಯೊಬ್ಬನ ದೃಷ್ಟಿಕೋನವಾಗಿ ಪ್ರಾರಂಭವಾಗುವ ಜ್ಞಾನದ ಆವಿಷ್ಕಾರ ಅನೇಕರ ಗಮನವನ್ನು ಸೆಳೆಯುವುದಿಲ್ಲ. ಕ್ರಮೇಣ ಅದರ ಉಪಯುಕ್ತತೆ ತಿಳಿದಂತೆಲ್ಲಾ ಸಮಾಜಕ್ಕೆ ಅದು ಬೇಕಾದಂತೆಲ್ಲಾ ಸಾಂಸ್ಥೀಕರಣ ಇಣುಕು ಹಾಕಿ ಬೆಳೆಯುತ್ತದೆ. ಸಾಂಸ್ಥೀಕರಣವಾದ ಹಾಗೆಲ್ಲಾ ಜನರಿಂದ ಜ್ಞಾನ ದೂರ ಸರಿದು ಸಂಸ್ಥೆಯ ಹಾಗೂ ಸಂಸ್ಥೆಯ ಸದಸ್ಯರ ಏಳಿಗೆಯನ್ನು ಉಳಿದ ಮಾನವರಿಂದ ಗಳಿಸುವ ಸಾಧನವಾಗಿ ಬಿಡುತ್ತದೆ. ತಾತ್ತ್ವಿಕ ಚಿಂತನೆ ಮೂರ್ತರೂಪ ಪಡೆದು ಜಾತಿ ವ್ಯವಸ್ಥೆಯಾಗಿ ಮೂಲ ತಾತ್ತ್ವಿಕ ವಿಚಾರಗಳಿಗೆ ವಿರುದ್ಧವಾದ ಸಂಗತಿ ಇತಿಹಾಸ ತಿಳಿಸಿಕೊಡುತ್ತಿರುವ ಪಾಠ.

ನಿಸರ್ಗದ ವಿದ್ಯಮಾನಗಳಿಗೆ ಕಾರಣವನ್ನು ಊಹಿಸುವ ದಾರ್ಶನಿಕರಿಂದ ವಿಜ್ಞಾನ ಪ್ರಾರಂಭವಾಯಿತು. ನಿಸರ್ಗದ ವಿದ್ಯಮಾನಗಳಿಗೆ ಅಲೌಕಿಕ ಕಾರಣಗಳನ್ನು ಊಹಿಸುವುದನ್ನು ತೊರೆದು ನಿಸರ್ಗದ ಮಟ್ಟದಲ್ಲೇ ವಿವರಣೆ ನೀಡಬೇಕೆಂಬ ವಾದಕ್ಕೆ ಪುಷ್ಟಿ ದೊರೆಯುತ್ತಾ ಹೋದ ಕಾರಣ ದೇವರ ರಾಜ್ಯ ಚಿಕ್ಕದಾಗುತ್ತಾ ಹೋಯಿತು. ಮಾನವ ಬದುಕನ್ನು ಗ್ರಹ ಚಲನೆ ನಿರ್ಧರಿಸುವುದೆಂಬ ನಂಬಿಕೆ ಈಗಲೂ ಇದೆ. (ಗ್ರಹಚಾರ ಎಂಬ ಪದ ಗಮನಿಸಿ) ಗ್ರಹಗಳ ಚಲನೆಯನ್ನು ನಿರ್ಧರಿಸುವ ತತ್ತ್ವಗಳನ್ನು ಭೂಮಿಯ ಮೇಲೆ ಪ್ರಯೋಗ ಕೈಗೊಂಡು ತಿಳಿಯಲು ಸಾಧ್ಯವೆಂದ ಮೇಲೂ ಈ ನಂಬಿಕೆ ಮುಂದುವರಿದಿದೆ. ಲಾಭ ಪ್ರಜ್ಞೆ ಹಾಗೂ ಆಳುವ ಮನೋಭಾವದ ಜನರ ಗಮನ ವಿಜ್ಞಾನದೆಡೆಗೆ ತಿರುಗಿರುವುದು, ವಿಜ್ಞಾನದ ಬೆಳವಣಿಗೆ ತಾಂತ್ರಿಕ ಶಬ್ದಗಳಿಂದ ಸಾಮಾನ್ಯ ಜನರಿಗೆ ಕಗ್ಗಂಟಾಗಿರುವುದು – ಕಟು ವಾಸ್ತವಗಳು. ವಿಜ್ಞಾನ ಕಲಿಕೆ ಸ್ವಾರಸ್ಯಗಳ ಗಣಿಯಾಗಿದ್ದೂ ನೀರಸ ವಾಕ್ಯಗಳಾಗಿ ಶಾಲೆಗಳಲ್ಲಿ 'ರಸರೋಮಾಂಚನ' ನೀಡದಿರುವುದು ಮತ್ತು ಗರಿಷ್ಠ ವಿಜ್ಞಾನ ಪದವೀಧರರು ರೂಪುಗೊಳ್ಳುವ ಈ ದೇಶದಲ್ಲಿ ಮೂಢನಂಬಿಕೆ ಹೆಪ್ಪುಗಟ್ಟಿರುವುದು ವಿಶೇಷವಲ್ಲ, ವಾಸ್ತವ ಪ್ರಜ್ಞೆಗೆ ಹಿಡಿದ ಕೈಗನ್ನಡಿ.

ಈ ಹಿನ್ನೆಲೆಯಲ್ಲಿ 'ಬಾಲವಿಜ್ಞಾನ'ವೆಂಬ ಪತ್ರಿಕೆಯನ್ನು ರೂಪಿಸಿ, ನಿಸರ್ಗದ ಸರಳ ಆನಂದಗಳನ್ನು, ಪರಿಸರ ಪ್ರೇಮವನ್ನು, ಗ್ರಾಹಕ ಜಾಗೃತಿಯನ್ನು, ಹೊಣೆಯರಿತ ಪ್ರಜೆಗಳನ್ನು ಬೆಳೆಸುವ ದೂರದೃಷ್ಟಿಯನ್ನು ಮೆರೆದ ಬಾಲವಿಜ್ಞಾನ ಸಂಸ್ಥಾಪಕರು ಅಭಿನಂದನಾರ್ಹರು. ೧೯೭೯ರಲ್ಲಿ ವಿಜ್ಞಾನವನ್ನು ಜನಪ್ರಿಯಗೊಳಿಸುವ ಸಂಸ್ಥೆಯೊಂದನ್ನು ಸ್ಥಾಪಿಸುವ ಉದ್ದೇಶದಿಂದ ಕೇರಳ ಶಾಸ್ತ್ರಸಾಹಿತ್ಯ ಪರಿಷತ್ತಿನೊಂದಿಗೆ ಸಮಾಲೋಚನೆ ನಡೆಸಲಾಯಿತು. ಸಂಸ್ಥೆಯನ್ನು ಪ್ರಾರಂಭಿಸುವ ಮೊದಲು ಸಮಾನ ಮನಸ್ಕರನ್ನು ಗುರುತಿಸುವ ಸಲುವಾಗಿ ಪತ್ರಿಕೆಯೊಂದನ್ನು ಪ್ರಾರಂಭಿಸಿ ಅದರ ಲೇಖಕರನ್ನು ಒಗ್ಗೂಡಿಸಿ ಸಂಸ್ಥೆ ಪ್ರಾರಂಭಿಸುವ ಬಗ್ಗೆ ಸಮಾಲೋಚನೆ ಮಾಡಬಹುದೆಂದು ಸಭೆಯಲ್ಲಿ ನಿರ್ಣಯಿಸಿದ್ದರು. ವಿಜ್ಞಾನದ ಪತ್ರಿಕೆಯೊಂದನ್ನು ಪ್ರಾರಂಭಿಸಬೇಕೆಂಬ ನಿರ್ಣಯ ಸುಲಭ, ನಿರ್ವಹಣೆಗೆ ಹೊರಟಾಗ ಎದುರಾಗುವ ತೊಡಕುಗಳು ಅನೇಕ. ವಿಜ್ಞಾನವನ್ನು ಕೊಂಡು ಓದುವ ಹವ್ಯಾಸ ಕಡಿಮೆ ಇರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರಕ್ಕೆ ಮನವಿ ಸಲ್ಲಿಸಿ ಸಹಾಯ ಕೋರಲಾಯಿತು. ಆಗ ಸರ್ಕಾರ ಹತ್ತು ಸಾವಿರ ಪ್ರತಿಗಳನ್ನು ಕೊಂಡು ಶಾಲೆಗಳಿಗೆ ಪೂರೈಸುವ ಆಶ್ವಾಸನೆ ನೀಡಿತಲ್ಲದೆ ಪತ್ರಿಕೆಯ ಮುದ್ರಣಕ್ಕೆ ಬೇಕಾಗುವ ನ್ಯೂಸ್‌ಪ್ರಿಂಟ್ ಅನ್ನು ಉಚಿತವಾಗಿ ನೀಡಲು ಸಮ್ಮತಿಸಿತು. ಅತ್ಯಂತ ಕಡಿಮೆ ಬೆಲೆಗೆ ಅಂದರೆ ಕೇವಲ ಉತ್ಪಾದನಾ ವೆಚ್ಚಕ್ಕೇ ಮಾರಾಟ ಮಾಡುವ ನಿರ್ಧಾರಕ್ಕೆ ಬರಲಾಯಿತು. ಪತ್ರಿಕೆಯ ಪ್ರಾಯೋಗಿಕ ಆವೃತ್ತಿ 'ವಿಜ್ಞಾನ' ಸೆಪ್ಟೆಂಬರ್, ೧೯೭೯ರಲ್ಲಿ ಬಂದಿತು. ಅನೇಕ ಶಾಲೆಗಳಿಗೆ ಈ ಪತ್ರಿಕೆಯ ಪ್ರತಿಯನ್ನು ಮುಫತ್ತಾಗಿ ನೀಡಿ ಜನಾಭಿಪ್ರಾಯ ಸಂಗ್ರಹಿಸಿ ಪ್ರತಿಯೊಂದು ಲೇಖನದ ಮೌಲ್ಯಮಾಪನ ಮಾಡಲಾಯಿತು. ಇರಬಹುದಾದ ಆವರ್ತಕ ಶೀರ್ಷಿಕೆಗಳ ಬಗ್ಗೆ ನಿರ್ಧರಿಸಲಾಯಿತು.

ಪತ್ರಿಕೆಯ ನೋಂದಣಿ ಸಂದರ್ಭದಲ್ಲಿ ಸಮಸ್ಯೆಯೊಂದು ಎದುರಾಯಿತು. 'ವಿಜ್ಞಾನ' - ಹೆಸರಿನ ಇನ್ನೊಂದು ಹಿಂದಿ ಪತ್ರಿಕೆ ಇರುವ ಹಿನ್ನೆಲೆಯಲ್ಲಿ ನೋಂದಣಿ ನಿರಾಕರಿಸಲಾಯಿತು. ಆಗ ಹೆಸರನ್ನು 'ಬಾಲವಿಜ್ಞಾನ' ಎಂದು ಇರಿಸಲಾಗಿ ಅನಂತರ ನೋಂದಣಿ ಸಾಧ್ಯವಾಯಿತು. ವಿಜ್ಞಾನ ಮಾಹಿತಿಯ ದೃಷ್ಟಿಯಲ್ಲಿ ವಿಜ್ಞಾನೇತರ ಸ್ನಾತಕೋತ್ತರರೂ ಬಾಲರೇ. ಆದರೂ 'ಬಾಲ' ಎಂಬ ಪೂರ್ವಸೂಚಿಯ ಸೇರ್ಪಡೆ ಈಗಲೂ ಮುಜುಗರದ್ದೇ. ಹಿರಿಯರು ಈ ಪತ್ರಿಕೆಯನ್ನು ಗಂಭೀರವಾಗಿ ಪರಿಗಣಿಸರು. ಕಿರಿಯರು ಕೊಳ್ಳುವ ಆಸೆ ತೋರಿದರೂ ಕೊಳ್ಳಲು ಅಸಮರ್ಥರು. 'ಜನಪರ ವಿಜ್ಞಾನ' ಎಂದಿದ್ದರೆ ಚೆನ್ನಾಗಿತ್ತು.

ಮುಂದಿನ ಸಮಸ್ಯೆ ಲೇಖಕರ ಅಗತ್ಯತೆ. ಈಗಾಗಲೇ ಚಾಲ್ತಿಯಲ್ಲಿದ್ದ ವಿಜ್ಞಾನ ಕರ್ನಾಟಕ (ಮೈಸೂರು ವಿವಿ) ಹಾಗೂ ಜನಪ್ರಿಯ ವಿಜ್ಞಾನ (ಬೆಂಗಳೂರು ವಿವಿ) ಪತ್ರಿಕೆಗಳು ಲೇಖನಗಳ ಹಾಗೂ ಬರುವ ಲೇಖನಗಳ ಗುಣಮಟ್ಟ ಕೊರತೆಯ ಸಮಸ್ಯೆಯನ್ನು ಎದುರಿಸುತ್ತಿದ್ದವು (ಈಗ ಆ ಪತ್ರಿಕೆಗಳು ನೆಲ ಕಚ್ಚಿವೆ). ಈ ಅಂಶಗಳನ್ನು ಮನಗಂಡು 'ವಿಜ್ಞಾನ ಲೇಖಕರ' ಶಿಬಿರಗಳನ್ನು ಇಂದಿಗೂ ನಡೆಸಿಕೊಂಡು ಬರಲಾಗುತ್ತಿದೆ. ಅಂತೂ ಒಂದು ತಿಂಗಳೂ ತಪ್ಪದಂತೆ ಕಳೆದ ೨೫ ವರ್ಷಗಳಿಂದ ಈ ಪತ್ರಿಕೆಯನ್ನು ನಡೆಸಿಕೊಂಡು ಬರಲು ಈ ಪತ್ರಿಕೆಯ ಸಂಪಾದಕ ಮಂಡಳಿ ವಿಶೇಷವಾಗಿ ಶ್ರಮಿಸಿದೆ. ಈ ಪರಿಶ್ರಮವು ನಿರೀಕ್ಷಿತ ಫಲ ನೀಡಿದೆಯೇ ಎಂಬುದನ್ನು ನೋಡೋಣ.

ವೈಜ್ಞಾನಿಕ ಜನ ಜಾಗೃತಿ ಮೂಡಿಸುವ ಲಕ್ಷ್ಯವಲ್ಲದೆ ಅನೇಕ ಉಪಲಕ್ಷ್ಯಗಳನ್ನು ಇರಿಸಿಕೊಂಡು 'ಬಾಲವಿಜ್ಞಾನ' ಪತ್ರಿಕೆ ಪ್ರಾರಂಭಗೊಂಡಿತು. ಈಗಾಗಲೆ ಪ್ರಸ್ತಾಪ ಮಾಡಿದಂತೆ ಅನೇಕ ವಿಜ್ಞಾನ ಲೇಖಕರ ಉಗಮ ಹಾಗೂ ವಿಕಾಸಗಳಿಗೆ ಈ ಪತ್ರಿಕೆ ಇಂದಿಗೂ ಶ್ರಮಿಸುತ್ತಿದೆ. ವಿಜ್ಞಾನ ಲೇಖಕರನ್ನು ರೂಪಿಸಿ ಪರಿಷ್ಕರಿಸುವ ಉಪಲಕ್ಷ್ಯ ಇಂದಿಗೂ ಮುಂದುವರಿದಿದೆ. ಕರ್ನಾಟಕಾದ್ಯಂತ ಬಾಲವಿಜ್ಞಾನ ರೂಪಿಸಿದ ಲೇಖಕರು ವಿವಿಧ

ಪತ್ರಿಕೆಗಳಲ್ಲಿ ಬರೆಯತೊಡಗಿದ್ದಾರೆ.

ಜನಪ್ರಿಯ ವಿಜ್ಞಾನ ಬರಹಗಾರರನ್ನೆಲ್ಲ ಒಗ್ಗೂಡಿಸಿ ಸ್ವಯಂಸೇವಾ ಸಂಸ್ಥೆಯೊಂದನ್ನು ಪ್ರಾರಂಭಿಸುವ ಉಪಲಕ್ಷ್ಯ ಇದ್ದ ಬಗ್ಗೆ ಈಗಾಗಲೆ ಪ್ರಸ್ತಾಪಿಸಲಾಗಿದೆ. ಆ ಉಪಲಕ್ಷ್ಯವೂ ಸಾರ್ಥಕವಾಗಿ ಕರಾವಿಪ (ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು) ಅಸ್ತಿತ್ವಕ್ಕೆ ಬಂದಿತು. ಈವರೆವಿಗೆ ಸುಮಾರು ನೂರು ವಿಜ್ಞಾನ ಪುಸ್ತಕಗಳನ್ನು ಪ್ರಕಟಿಸಿ ಪುಸ್ತಕ ಪ್ರಕಟಣೆ ಹಾಗೂ ಮಾರಾಟದಲ್ಲಿ ದಾಖಲೆ ಸ್ಥಾಪಿಸಿರುವ ಹೆಗ್ಗಳಿಕೆ ಈ ಸಂಸ್ಥೆಯದು. ಒಂದೇ ದಿನದಲ್ಲಿ ಒಂದು ಜಿಲ್ಲೆಯ ವ್ಯಾಪ್ತಿಯಲ್ಲಿ ಲಕ್ಷಗಟ್ಟಲೆ ಬೆಲೆಯ ವಿಜ್ಞಾನ ಪುಸ್ತಕವನ್ನು ಮಾರಾಟಮಾಡಿದ ಸಾಹಸವನ್ನು ಈ ಸಂಸ್ಥೆ ಎರಡು ಬಾರಿಗೆ ಕೈಗೊಂಡಿದೆ. ಅನೇಕ ಪ್ರಕಟಣೆಗಳು ಐದಾರು ಮರುಮುದ್ರಣಗಳನ್ನು ಕಂಡಿವೆ. ಭಾರತ ಸರ್ಕಾರವು ವಿಜ್ಞಾನದ ಜನಪ್ರಿಯಗೊಳಿಸುವಿಕೆಗೆ ನೀಡುವ ರಾಷ್ಟ್ರಮಟ್ಟದ ಪ್ರಶಸ್ತಿಯು ಕರಾವಿಪಗೆ ಲಭಿಸಿದೆ. ಇಂತಹ ಸಂಸ್ಥೆಯ ಉಗಮಕ್ಕೆ ಕಾರಣವಾದ ಬಾಲವಿಜ್ಞಾನ ಪತ್ರಿಕೆಯನ್ನೂ ಈಗ ಕರಾವಿಪವೇ ಕೈಗೊಳ್ಳುತ್ತಿದೆ.

ಬಾಲವಿಜ್ಞಾನ ಪತ್ರಿಕೆಯನ್ನು ಲಾಭಕ್ಕಾಗಿ ಪ್ರಕಟಿಸಿದ್ದರೆ ಇಂಗ್ಲಿಷಿನಲ್ಲಿ ಪ್ರಕಟಣೆ ಮಾಡಬಹುದಿತ್ತು. ಗ್ರಾಮೀಣ ಶಾಲೆಯ ಮಕ್ಕಳು, ಗ್ರಂಥಾಲಯದ ಕೊರತೆ ನಿತ್ಯಜೀವನದ ಅನುಭವಗಳನ್ನು ಅನುಲಕ್ಷಿಸಿ ವಿಜ್ಞಾನವನ್ನು ಆತ್ಮೀಯವಾಗಿಸುವ ಕೆಲಸಕ್ಕಾಗಿ ಈ ಪತ್ರಿಕೆಯನ್ನು ಕನ್ನಡದಲ್ಲಿ ಪ್ರಕಟಿಸಲಾಯಿತು. ಜಿಲ್ಲೆಗೇ ಗರಿಷ್ಠ ಅಂಕ ಗಳಿಸಿದ ವಿದ್ಯಾರ್ಥಿಗಳು ಇಬ್ಬರು ಬಾಲವಿಜ್ಞಾನಕ್ಕೆ ಕೃತಜ್ಞತೆ ಸಲ್ಲಿಸಿ ಪತ್ರ ಬರೆದಿದ್ದಾರೆ. ಕೂಲಿ ಮಾಡಿ ಸಂಪಾದಿಸಿದ ಹಣದಿಂದ ವಿದ್ಯಾರ್ಥಿಯೊಬ್ಬ ಬಾಲವಿಜ್ಞಾನ ಚಂದಾದಾರನಾಗಿದ್ದಾನೆ.

ಕರಾವಿಪದ ಪ್ರಾರಂಭಿಕ ಹಂತದಲ್ಲಿ ಪ್ರಧಾನ ಸಂಪಾದಕರಾಗಿ ಕೆಲಸ ಮಾಡಿದ ಪ್ರೊ|| ಜೆ. ಆರ್. ಲಕ್ಷ್ಮಣರಾವ್ ಅವರು ಪತ್ರಿಕೆಗೆ ಭದ್ರಬುನಾದಿ ಒದಗಿಸಿಕೊಟ್ಟಿದ್ದಾರೆ. ಭಾಷಿಕವಾಗಿ ಮತ್ತು ಮಾಹಿತಿ ಮಟ್ಟದಲ್ಲಿನ ಉತ್ಕೃಷ್ಟತೆ ಪತ್ರಿಕೆಯ ಹಾಗೂ ಕರಾವಿಪದ ಘನತೆಯನ್ನು ರಾಷ್ಟ್ರಮಟ್ಟದಲ್ಲಿ ಉನ್ನತಿಗೆ ತಂದಿದೆ. ಅನಂತರ ಪ್ರಧಾನ ಸಂಪಾದಕರಾದ ಪ್ರೊ|| ಅಡ್ಯನಡ್ಕ ಕೃಷ್ಣಭಟ್ಟರು ಆ ಪತ್ರಿಕೆಯ ಘನತೆ ಕಾಯ್ದುಕೊಳ್ಳುವಲ್ಲಿ ಅದಕ್ಕೆ ವಿಶೇಷ ಮೆರುಗು ನೀಡುವಲ್ಲಿ ಯಶಸ್ವಿಯಾಗಿದ್ದಾರೆ. ಇತ್ತೀಚೆಗೆ ನಡೆದ ಅಖಿಲ ಭಾರತ ವಿಜ್ಞಾನ ಸಭೆಯೊಂದರಲ್ಲಿ ಭಾರತದ ವಿವಿಧ ವಿಜ್ಞಾನ ಪತ್ರಿಕೆಗಳ ತೌಲನಿಕ ಅಧ್ಯಯನ ನಡೆಸಿ ಬಾಲವಿಜ್ಞಾನದ ಅತ್ಯುತ್ತಮ ಅಂಕಗಳನ್ನು ಮುಕ್ತವಾಗಿ ಪ್ರಶಂಸಿಸಲಾಗಿದೆ.

ಒಮ್ಮೆ ಕರಾವಿಪಕ್ಕೆ ಹಾಗೂ ಬಾಲವಿಜ್ಞಾನ ಪತ್ರಿಕೆಗೆ ಅನುದಾನವನ್ನು ಕಡಿತಗೊಳಿಸುವುದಾಗಿ ಸಚಿವರೊಬ್ಬರು ಘೋಷಿಸಿದರು. ಆಗಲೂ ಪತ್ರಿಕೆಯ ಪ್ರಕಟಣೆಯನ್ನು ಕರಾವಿಪ ಮುಂದುವರಿಸಿಕೊಂಡು ಹೋಯಿತು. ಆಗ ಸಾರ್ವಜನಿಕರು ಪತ್ರಿಕೆ ಮುಂದುವರಿಯುವಂತೆ ಮಾಡಲು ಸರ್ಕಾರವನ್ನು ತೀವ್ರವಾಗಿ ಒತ್ತಾಯಿಸಿದರು. ಆ ಹಿನ್ನೆಲೆಯಲ್ಲಿ ಅನುದಾನವನ್ನು ನೀಡಲು ಸರ್ಕಾರವು ಒಪ್ಪಿತು. ಪತ್ರಿಕೆಯ ಪ್ರಕಟಣೆ ಮುಂದುವರಿಯುತ್ತಿದೆ.

ಈಚಿನ ದಿನಗಳಲ್ಲಿ ಪತ್ರಿಕೆಯು ಬಹುಜನರ ಅಗತ್ಯಗಳಿಗೆ ಸ್ಪಂದಿಸಿ ಹೊಸ ಆವರ್ತಕ ಶೀರ್ಷಿಕೆಯನ್ನು ತರುತ್ತಿದೆ. ವಿದ್ಯಾರ್ಥಿಗಳ ಅಗತ್ಯವನ್ನು ಮನಗಂಡು 'ಪಠ್ಯಪೂರಕ' ಹಾಗೂ ಮನೆಯಲ್ಲಿಯೇ ಕೈಗೊಳ್ಳಬಹುದಾದ ಪ್ರಯೋಗಗಳ 'ನೀನೇ ಮಾಡಿ ನೋಡು' ಅಂಕಣಗಳು ಪ್ರಕಟವಾಗುತ್ತಿವೆ. ಇದಲ್ಲದೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪೂರಕವಾದ 'ನಿನಗೆಷ್ಟು ಗೊತ್ತು' ಅಂಕಣ, ಕುತೂಹಲ ಹಾಗೂ ರಂಜನೆ ಒದಗಿಸಬಲ್ಲ 'ಪ್ರಸಂಗ ಓದಿ ಪ್ರಶ್ನೆಗೆ ಉತ್ತರಿಸಿ', ಹೆಣ್ಣು ಮಕ್ಕಳಿಗಾಗಿ 'ಅಡುಗೆ ಮನೆ ವಿಜ್ಞಾನ', ಭಾಷಾಪ್ರಿಯರಿಗಾಗಿ 'ಪದಬಂಧ', ವಿಜ್ಞಾನಿಗಳ ಆದರ್ಶಗಳನ್ನು ಬಿಂಬಿಸುವ 'ವಿಜ್ಞಾನಿಗಳೊಡನೆ' – ಇವು ಇನ್ನಿತರ ಆವರ್ತಕ ಶೀರ್ಷಿಕೆಗಳು. ಶಾಲೆಗಳು/ಸ್ವಯಂಸೇವಾ ಸಂಸ್ಥೆಗಳು ವಿಜ್ಞಾನ ದಿನಾಚರಣೆಗಳನ್ನು ಕೈಗೊಳ್ಳಲು ಅನುಕೂಲವಾಗುವಂತೆ ವಿಶೇಷ ಸಂಚಿಕೆಗಳನ್ನು ಪ್ರತಿ ತಿಂಗಳೂ ಪ್ರಕಟಿಸಲಾಗುತ್ತಿದೆ. ಪ್ರತಿ ವರ್ಷದ ಏಪ್ರಿಲ್ ತಿಂಗಳ ಸಂಚಿಕೆಯನ್ನು 'ವಿಜ್ಞಾನ ವಿನೋದ' ಸಂಚಿಕೆಯಾಗಿ ಪ್ರಕಟಿಸಲಾಗುತ್ತಿದೆ. ಈ ಸಂಚಿಕೆಯ ಮಹತ್ವ ಸ್ವವಿದಿತ. ವಿಜ್ಞಾನದ ತರಗತಿಗಳಲ್ಲಿನ ಬಿಗುವಿನ ವಾತಾವರಣವನ್ನು ನಗುವಿನ ವಾತಾವರಣವಾಗಿಸುವುದು ಈ ಸಂಚಿಕೆಯ ಆಶಯ. ಬೆಳ್ಳಿಹಬ್ಬದ (೧೯೭೯-೨೦೦೪) ಈ ಏಪ್ರಿಲ್‌ನ ವಿನೋದ ಸಂಚಿಕೆಯನ್ನು ಗೊರೂರರ ಜನ್ಮ ಶತಾಬ್ದಿ ಅಂಗವಾಗಿ ಅವರಿಗೆ ಸಮರ್ಪಿಸಲಾಗಿದೆ.

ಈ ಪತ್ರಿಕೆಯ ಉತ್ಕರ್ಷಕ್ಕೆ ಈವರೆಗಿನ ಹಾಗೂ ಈಗಿನ ಸಂಪಾದಕ ಮಂಡಳಿ ಸದಸ್ಯರೆಲ್ಲರೂ ಉಚಿತವಾಗಿ (ಮುಫತ್ತಾಗಿ ಮತ್ತು ಯಥೋಚಿತವಾಗಿ ಎಂಬ ಎರಡರ್ಥದಲ್ಲೂ) ಶ್ರಮಿಸಿದ್ದಾರೆ; ಶ್ರಮಿಸುತ್ತಿದ್ದಾರೆ. ಪತ್ರಿಕೆಯ ಬೆಳ್ಳಿಹಬ್ಬದ ಸಂಭ್ರಮದಲ್ಲಿ ಇವರು ಸಮಾಜಕ್ಕೆ ನೀಡಿದ ಕೊಡುಗೆಯನ್ನು ಸ್ಮರಿಸುವುದು ಅಗತ್ಯ. ಅಳತೆಗೆ ಎಟುಕಿದ ಸಾಧನೆ ಒಂದನ್ನು ಬಾಲವಿಜ್ಞಾನ ಕೈಗೊಂಡಿದೆ. ಮಕ್ಕಳ ಆಲೋಚನಾಪರತೆ ಹೆಚ್ಚಿಸುವಲ್ಲಿ, ವೈಜ್ಞಾನಿಕವಾಗಿ ಸಮಸ್ಯಾ ದೂರ ಮಾಡುವಲ್ಲಿ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸುವ ಕಾರ್ಯವನ್ನು ಬಾಲವಿಜ್ಞಾನ ಕೈಗೊಂಡಿದೆ. ಇಷ್ಟೆಲ್ಲಾ ಆದರೂ, ಬಾಲವಿಜ್ಞಾನ ಪತ್ರಿಕೆಗೆ ಒಂದೇ ಕೊರಗು. ಒಂದು ಕಪ್ ಕಾಫಿ ಬೆಲೆಗೆ ದೊರಕುವ ಈ ಮಾಸಿಕ ಪತ್ರಿಕೆಯನ್ನು ಕೇವಲ ಕೊಂಡಾಡದೆ ಕೊಂಡು ಓದುವ ಉದಾರ ಮನಸ್ಸು ಮಾಡಬೇಕಾಗಿದೆ. ಶಾಲಾ ಕಲಿಕೆ ಯಾಂತ್ರಿಕವಾಗುತ್ತಿರುವ ಹಿನ್ನೆಲೆಯಲ್ಲಿ, ರಾಜ್ಯದ ವಿಜ್ಞಾನ ಹಾಗೂ ಗಣಿತ ಫಲಿತಾಂಶ ಹಿಂದುಳಿದಿರುವ ಹಿನ್ನೆಲೆಯಲ್ಲಿ, ನಮ್ಮ ಮಕ್ಕಳು ಅನಿವಾರ್ಯವಾಗಿ ಸ್ಪರ್ಧಾತ್ಮಕ ಪರೀಕ್ಷೆಗೆ ಸಜ್ಜಾಗಬೇಕಾದ ಅಗತ್ಯವಿರುವ ಒತ್ತಡದಲ್ಲಿ – ಈ ಪತ್ರಿಕೆಯನ್ನು ಎಲ್ಲರೂ ಓದುವಂತೆ ಮಾಡಲು ಈ ಪತ್ರಿಕೆಯ ಅಭಿಮಾನಿಗಳು, ಪೋಷಕರು ಮತ್ತು ಅಧ್ಯಾಪಕರು ಮುಂದಾಗಬೇಕಾಗಿದೆ. ಈ ದಿಶೆಯಲ್ಲಿ ನಾವೆಲ್ಲರೂ ಪ್ರಯತ್ನಿಸೋಣ.


**ಪ್ರೊ|| ಎಮ್. ಆರ್. ನಾಗರಾಜು**

ಪ್ರಧಾನ ಸಂಪಾದಕರು, ಬಾಲವಿಜ್ಞಾನ, ಎಚ್-೩, ಎಸ್‌ಎಫ್‌ಎಸ್ ನಿವಾಸಗಳು, ೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೫೬೦ ೦೬೪


## ಅಜ್ಜನ ಕುಟಾಣಿ

ಅಜ್ಜಾ ಅಜ್ಜಾ ಪ್ರೀತಿಯ ಅಜ್ಜ
ಕಣ್ಣುಗ್ಳಲ್ಲಿ ಹೊಳಪೇಕೆ? ಗಲ್ಲಗಳು ಕುಣಿಯುವುವೇಕೆ?
ನಕ್ಕರೆ ಒಂದೂ ಹಲ್ಲೇ ಇಲ್ಲ
ಅಜ್ಜಿ ಕಾಶಿಲಿ ಕುಂಬಳ ಬಿಟ್ಟರೆ
ನೀ ಹಲ್ಲನು ಬಿಟ್ಟು ಬಂದೆ ಏಕಜ್ಜ

ಅರೆಯುವ ಕಲ್ಲು ರುಬ್ಬುವ ಕಲ್ಲು
ಬೀಸುವ ಕಲ್ಲು ಕುಟ್ಟುವ ಕಲ್ಲು
ಬೇಕೆ ನಿನಗಜ್ಜ

ಅಯ್ಯೋ ನನ್ನ ಚಿಣಿಮಿಣಿ ಪುಟಾಣಿ
ಒಂದೂ ನನಗೆ ಬೇಡಪ್ಪ
ಖಣ್ ಖಣ್ ಡೊಕ್ ಡೊಕ್
ಕುಟಾಣಿ ಒಂದು ತಾರಪ್ಪ



ಚಕ್ಕುಲಿ ಕೋಡುಬಳೆ ಹಪ್ಪಳ ಎಲ್ಲಾ
ಕಣಕ ಮಾಡಿ ಲೊಚ ಪಚ್
ಮೆಲ್ಲುವೆ ನಾನು

ಕುಟಾಣಿಗೂ ನನಗೂ ಅಂಟಿದೆ ನಂಟು
ಅದೇ ನನ್ನ ಹಲ್ಲು ಬಾಯಿ
ಬೇಗ ತಾ ನಿನಗೆ ಪೆಪ್ಪರ್‌ಮೆಂಟು ಕುಟ್ಟಿ ಕೊಡುವೆ
ಮುದುಕರ ಹಲ್ಲು ಕುಟಾಣೀ ಯಾರನ್ನೂ ಬಯ್ಯದ ಘಟಾಣಿ
ಕುಟಾಣಿ ಬೇಕು ಕಟಾಣಿ ಜೀವದ ಕುಟಾಣಿ
ಕುಟಾಣಿ ಇದ್ದರೆ ನಾನೂ ಆಗುವೆ ಪುಟಾಣಿ
ಮುದ್ದು ಪುಟಾಣಿ ಮುಂದೆ ನಿಂಗೂ ಬೇಕು ಕುಟಾಣಿ


**ವೆಂಕಟಾಚಲ**

ದೊಡ್ಡ ಭಜನ ಮಂದಿರ ರಸ್ತೆ
ಸರ್ಜಾಪುರ-೫೬೨ ೧೨೫, ಬೆಂಗಳೂರು ಜಿಲ್ಲೆ





**ಮಧ್ಯಮ ಪಥ** (ವೈಚಾರಿಕ ಲೇಖನಗಳು)

ಅರವಿಂದ ಚೊಕ್ಕಾಡಿ

**ಪುಟ : ೧೨೨** ಬೆಲೆ : ರೂ. ೮೦

**ಅನನ್ಯ ಪ್ರಕಾಶನ**, ಹೂಮನೆ, ಶ್ರೀದೇವಿ ನಗರ, ವಿದ್ಯಾಗಿರಿ, ಧಾರವಾಡ - ೫೮೦ ೦೦೪

ತಮ್ಮ ನಿರ್ಭೀತ ಅನಿಸಿಕೆಗಳನ್ನು ವಿಚಾರಮಂಥನ ನಡೆಸಲು ಯೋಗ್ಯವಾದ ರೀತಿಯಲ್ಲಿ ಬರಹಗಳ ಮೂಲಕ ಪ್ರಚುರ ಪಡಿಸುತ್ತಿರುವ ಶ್ರೀ ಅರವಿಂದ ಚೊಕ್ಕಾಡಿ ನಮಗೆಲ್ಲ ಈಗಾಗಲೇ ಪರಿಚಿತರು. ಉದಯೋನ್ಮುಖ ಲೇಖಕರೆಂದು ಗುರುತಿಸಿ ನೋಡನೋಡುತ್ತಿದ್ದಂತೆಯೇ ಪ್ರೌಢ ವಿಚಾರಗಳತ್ತ ಬರವಣಿಗೆಯಷ್ಟೇ ಅಲ್ಲ ಬೆಳವಣಿಗೆಯನ್ನೂ ಹೊಂದಿ ದಾಪುಗಾಲಿಡುತ್ತ ಆಶ್ಚರಿಯೆನಿಸುವಷ್ಟು ದೂರ ಕ್ರಮಿಸಿದ್ದಾರೆ. ನಮ್ಮ ಪ್ರಾಚೀನ ಗ್ರಂಥಗಳ ಗೊಂದಲಮಯ ಚಾರಿತ್ರಿಕ ಬರಹಗಳ ಕಡೆಗೆ ನಮ್ಮ ಗಮನ ಸೆಳೆದು ಅಲ್ಲಿನ ಸರಕಿನ ಗುಣಮಟ್ಟವನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

**ಪ್ರಶ್ನೆ - ಪ್ರಜ್ಞೆ** ಭಾಗ೧



ಶಾಂತಾರಾಮ ಸೋಮಯಾಜಿ

**ಪುಟ : ೧೪೬** ಬೆಲೆ : ರೂ. ೪೦

**ಜನಪರ ಪುಸ್ತಕ ಮಾಲೆ**, ನಾಲಂದಾ, ಖಾರ್ವಿಕೇರಿ ರಸ್ತೆ, ಕುಂದಾಪುರ - ೫೭೬ ೨೦೧

ಸೋಮಯಾಜಿಯವರು ಸ್ವಾರಸ್ಯಕರವಾದ ಕೆಲವು ಘಟನೆಗಳನ್ನಿಲ್ಲಿ ತಿಳಿಸುತ್ತಾ ಜೊತೆಯಲ್ಲಿಯೇ ನಮಗೆ ಪ್ರಶ್ನೆಗಳ ಚೂಪು ಬಾಣಗಳನ್ನೂ ಎಸೆಯುತ್ತಾರೆ. ಪ್ರಶ್ನಿಸುವುದು ಬೌದ್ಧಿಕ - ವೈಚಾರಿಕ ಲಕ್ಷಣವಾದರೆ ಪ್ರಶ್ನೆಗಳನ್ನೆದುರಿಸುವುದಂತೂ ಬುದ್ಧಿ ಪ್ರಜ್ಞೆಯನ್ನು ಇನ್ನಷ್ಟು ಹರಿತಗೊಳಿಸಲು ನಮಗೆ ಅವಕಾಶವೊಂದು ಸಿಕ್ಕಿದಂತೆ. ಇಲ್ಲಿನ ಪ್ರಶ್ನೆಗಳು ನಮ್ಮ ಪ್ರಜ್ಞೆಯ ಒಂದು ಭಾಗವಾಗಿರುವ ನಂಬಿಕೆ ಮತ್ತು ಸಿದ್ಧಾಂತದ ಬಗ್ಗೆ ಪ್ರಖರ ಚಿಂತನೆಯನ್ನೂ ಒಳಗೊಂಡಿವೆ. ಅಸಂಖ್ಯಾತ ಪ್ರಶ್ನೆಗಳೇ ಪ್ರಶ್ನೆಗಳು ! ಬನ್ನಿ, ಓದಿ ಉತ್ತರಗಳಿಗಾಗಿ ಒಂದಷ್ಟು ಚಿಂತಿಸೋಣ.




**ಬದುಕಿನ ಬೇರು ವಂಶವಾಹಿ**

ಗುಡಿಬಂಡೆ ಪೂರ್ಣಿಮಾ

**ಪುಟ : ೧೩೬** ಬೆಲೆ : ರೂ. ೭೨

**ಐ.ಬಿ.ಎಚ್. ಪ್ರಕಾಶನ**, ೬೪೫/೬, ೧೦ನೇ 'ಬಿ' ಮುಖ್ಯರಸ್ತೆ, ೪ನೇ ಬ್ಲಾಕ್, ಜಯನಗರ, ಬೆಂಗಳೂರು-೧೧

'ಹುಟ್ಟು ಗುಣ ಸುಟ್ಟು ಬಿಟ್ಟರೂ ಹೋಗದು' ಎಂಬ ಗಾದೆಯಲ್ಲಿನ ಒಂದು ಸತ್ಯಾಂಶ ಡಿ.ಎನ್.ಎ.ಯ ಮಹಾನ್ ಗುಣವನ್ನೂ ಜನಪದರು ಅದನ್ನು ಎಂದೋ ಗುರುತಿಸಿದ್ದನ್ನೂ ಸಾರಿ ಹೇಳುತ್ತದೆ. ಜೀವಿಗಳ ಗುಣ, ದೋಷ, ಸ್ವಭಾವ, ಲಕ್ಷಣಗಳನ್ನು ನಿರ್ಧರಿಸುವ ಮತ್ತು ವಂಶವಾಹಿಯಾಗಿ ಮುಂದಿನ ಪೀಳಿಗೆಗೆ ರವಾನಿಸುವ ಪ್ರಕೃತಿಯ ಅದ್ಭುತ ವಿನ್ಯಾಸ ಡಿ.ಎನ್.ಎ. ಬಗ್ಗೆ ಲೇಖನಗಳು. ಜೈವಿಕ ತಂತ್ರಜ್ಞಾನದ ಕ್ಲೋನಿಂಗ್ ವ್ಯವಸ್ಥೆಯಲ್ಲೂ ತದ್ರೂಪಿನೊಂದಿಗೆ ಗುಣಗಳೂ ಬೆನ್ನಟ್ಟಿ ಬರುವಂಥ ಪ್ರಕೃತಿಯ ಅದಮ್ಯ ವರ್ಣತಂತುಗಳ ಬಗ್ಗೆ ಮಾಹಿತಿಯಿದೆ.

**ಒಬ್ಬ ದೇಶಪ್ರೇಮಿಯ ಒಲವು**



ಹಂಝು ಮಲಾರ್

**ಪುಟ : ೧೧೬** ಬೆಲೆ : ರೂ. ೬೦

**ಸಂವಹನ**, ೧೨/೧ಎ, ಈವ್ನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು - ೫೭೦ ೦೦೧

ಮುಸ್ಲಿಂ ಸಮಾಜದ ಧಾರ್ಮಿಕ ಅತಿರೇಕಗಳ ಮುಸುಕು ಸರಿಸಿ ನೋಡಬಲ್ಲ ಯುವ ಬರಹಗಾರ ಹಂಝು ಅವರ ಉತ್ತಮ ಕಥೆಗಳ ಸಂಕಲನ. ತೀರ ಬಡತನದ ನೆರಳು ದಟ್ಟವಾಗಿ ಬಿದ್ದಿರುವ ಸಂಸಾರಗಳ ಚಿತ್ರಣ ಕಣ್ಣಿಗೆ ಕಟ್ಟಿದಂತೆ ಪಡಿಮೂಡಿಸಿದ್ದಾರೆ. ಯುವಜನತೆಯ ಉತ್ಸಾಹವು ಕ್ರಮೇಣ ಆಕ್ರೋಶ ಸಂತಾಪಗಳಾಗಿ ಭ್ರಮೆ ನಿರಸನಗೊಳ್ಳುವಂಥ ಹಲವು ಹತ್ತು ಅನಿಷ್ಟಗಳನ್ನು ಕಥೆಯ ಮೂಲಕ ಹೇಳುತ್ತಿದ್ದಾರೆ. ಯಾವುದೇ ಧರ್ಮವಿರಲಿ ಅಲ್ಲಿ ಮಾನವ ಸಂಬಂಧಗಳೊಂದಿಗೆ ಮಾತನಾಡುವ ಹಂಬಲ ಆಶಯ ಇವುಗಳಲ್ಲಿದೆ.

**ಕೊನೆಯ ಸದ್ದು** (ಕಥಾ ಸಂಕಲನ)

ಶ್ರೀನಿವಾಸ ಜೋಕಟ್ಟೆ

**ಪುಟ : ೧೪೭** ಬೆಲೆ : ರೂ. ೬೫

**ಅಭಿವ್ಯಕ್ತಿ**, ಸಿಹಿಕನಸು, ೧೬೬, ೨೮ನೇ ಅಡ್ಡರಸ್ತೆ, ೧೭ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೭೦

ಇತ್ತೀಚಿನ ಯುವ ಮನಸ್ಸುಗಳನ್ನು ಗ್ರಹಿಸುತ್ತ ಸುತ್ತಲಿನ ಘಟನೆಗಳನ್ನಾಯ್ದು ಅಚ್ಚುಕಟ್ಟಾಗಿ ಹೊಸಲೋಕವೊಂದನ್ನು ಸೃಷ್ಟಿಸುವಂತೆ ನೈಜ ಕಥೆಗಳನ್ನು ಬರೆಯಬಲ್ಲವರು ಶ್ರೀ ಜೋಕಟ್ಟೆ. ಮುಂಬೈ ಮಾಯಾನಗರಿಯ ಒಳಹೊರಗನ್ನೆಲ್ಲ ಬಲ್ಲ ಇವರಿಗೆ ಕಥಾಪಾತ್ರಗಳನ್ನು ಸೃಷ್ಟಿಸುವುದೊಂದು ಚಿಟಿಕೆ ಹೊಡೆದಂತೆ! ದಟ್ಟ ಗ್ರಾಮೀಣ ಅನುಭವವನ್ನೂ ಅತ್ತ ನಗರದ ಸಂಕೀರ್ಣ ಬದುಕನ್ನೂ ಸರಿದೂಗಿಸಿಕೊಂಡು ಎರಡು ದಡಗಳಿಗೂ ಸೇತುವೆಯಂತೆ ಕಟ್ಟಿದ ಕಥೆಗಳು. ಗಾಂಧಿಯಿಂದ ಗಾವ್ಲಿವರೆಗೆ ಬರೆಯಬಲ್ಲ ಇವರ ಹಿಂದಿನ ಸಂಕಲನ ಹೃದ್ಗತವಾಗಿದೆ.



**...ಪ್ರತೀಕ...** ಮೊಯಿಲಿ ಮಹಾಕಾವ್ಯ ಚಿಂತನ

ಅರ್ಜುನ ಕೋರಟಕರ

**ಪುಟ : ೭೬** ಬೆಲೆ : ರೂ. ೫೦

**ಅರ್ಜುನ ತಾ. ಕೋರಟಕರ**, ಶ್ರೀ ರಾಘವೇಂದ್ರ ಬೋರ್ಡಿಂಗ್, ಜಮಖಂಡಿ - ೫೮೭೩೦೧

''ರಾಮಾಯಣ ಮಹಾನ್ವೇಷಣಂ'' ಎಂಬ ರಾಜನೈತಿಕ ವ್ಯವಹಾರಗಳಿಗೆ ಹೋಲಿಸುವ ಹೊಸ ಮಹಾಕಾವ್ಯದ ಬಗ್ಗೆ ಒಂದು ಚಿಂತನೆ. ರಾಜಕಾರಣವನ್ನು ಮಹಾಕಾವ್ಯದೊಡಲಿಂದ ಇಂದಿನ ಯುಗಧರ್ಮಕ್ಕೆ ಪರಿವರ್ತಿಸಿದಾಗ ಅಲ್ಲಿನ ಮಹಾಪಾತ್ರಗಳು ಕೆಲವು ಸಾಮ್ಯತೆಗಳನ್ನು ಮೊಯಿಲಿ ಕೃತಿಯಲ್ಲಿ ಉಳಿಸಿಕೊಂಡಿವೆ. ಅರಮನೆಯಲ್ಲಿ ದಾಸಿಯರ ಕಾರಸ್ಥಾನ, ಚಕ್ರವರ್ತಿಯ ಸಡಿಲತನ, ಮೇರೆ ಮೀರಿದ ಭ್ರಾತೃಪ್ರೇಮ, ಕಡೆಗೆ ಶ್ರೀರಾಮ ಕಳೆದುಕೊಂಡ ಸ್ತ್ರೀ ರೂಪದ ಪ್ರಜ್ಞೆ ಇವೆಲ್ಲ ಮಹಾನ್ವೇಷಣೆಗೆ ತಕ್ಕ ಪ್ರಸಂಗಗಳಾಗಿವೆ.

**ಪುಷ್ಪೌಷಧಿ**



ಡಾ|| ವಸುಂಧರಾ ಭೂಪತಿ

**ಪುಟ : ೧೧೬** ಬೆಲೆ : ರೂ. ೬೦

**ಡಾ|| ಪಿ .ಎಸ್. ಶಂಕರ ಪ್ರತಿಷ್ಠಾನ**, ೪೨೫, ತಿಲಕನಗರ, ಕುಸನೂರ ರಸ್ತೆ, ಗುಲಬರ್ಗಾ - ೫೮೫ ೧೦೫

ಹೂವು ಕೇವಲ ಚೆಲುವು ಮತ್ತು ಸುಗಂಧಗಳಿಗೆ ಮಾತ್ರ ಸೀಮಿತವಾಗಿರದೆ ತನ್ನಲ್ಲಿರುವ ಅಪೂರ್ವ ಔಷಧೀಯ ಗುಣಗಳಿಗೂ ಹೆಸರಾಗಿದೆ. ಒಂದು ಕ್ಷಣ ಹೆಚ್ಚೆಂದರೆ ಒಂದು ದಿನದ ತಮ್ಮ ಜೀವಿತಾವಧಿಯಲ್ಲಿ ಅವು ಗಳಿಸಿರುವ ಜನಪ್ರಿಯತೆ ಕಡಿಮೆಯದೇನೂ ಅಲ್ಲ. ಆಯುರ್ವೇದ ಔಷಧಿಗಳಲ್ಲಿ ಹೂವಿನ ಉಪಯೋಗದ ಪ್ರಸ್ತಾಪವಿದ್ದು ದೈಹಿಕ - ಮಾನಸಿಕ ಆರೋಗ್ಯವರ್ಧನೆಗೆ ಅವುಗಳ ಅಪಾರ ಕೊಡುಗೆಯನ್ನು ತಿಳಿಸಲಾಗಿದೆ. ಆರೋಗ್ಯಕ್ಕೂ ಹೂವುಗಳಿಗೂ ಇರುವ ನಿಕಟ ಸಂಬಂಧವನ್ನು ಕೃತಿಯ ಮೂಲಕ ಆಯುರ್ವೇದ ವೈದ್ಯೆ ವಸುಂಧರಾ ಭೂಪತಿ ತಿಳಿಸಿದ್ದಾರೆ.




**ಒಂದು ಬೊಗಸೆ ಧ್ಯಾನ**

ಸಂಕುಲಜೀವ

**ಪುಟ : ೧೪೮** ಬೆಲೆ : ರೂ. ೫೦

**ಆತ್ಮದೀಪ**, ಧಾರವಾಡ - ೫೮೦ ೦೦೭

ಧ್ಯಾನದಿಂದ ದೊರಕುವ ಸಂತೃಪ್ತಿ ವಿಸ್ಮಯಗಳನ್ನು ಸ್ವಾನುಭವದಿಂದ ನಿರೂಪಿಸುವ ಲೇಖಕರು ನಮ್ಮಲ್ಲೇ ಇರುವ ಅದ್ಭುತ ಚೈತನ್ಯವನ್ನು ವಿಕಸನಗೊಳಿಸುವ ಮಾರ್ಗವೇ ಧ್ಯಾನ ಎಂಬುದನ್ನು ಸರಳ ಮಾತುಗಳಲ್ಲಿ ಹೇಳಿದ್ದಾರೆ. ಧ್ಯಾನದ ಮಾರ್ಗವು ದಟ್ಟಡವಿಯ ದುರ್ಗಮ ಸಂಚಾರವೇನೂ ಅಲ್ಲ; ಅದೊಂದು ಸುಂದರ ವನವಿಹಾರದಂತೆ ಎಂಬುದನ್ನು ನಮಗೆಲ್ಲ ಮನವರಿಕೆ ಮಾಡಿಸಿದ್ದಾರೆ. ಚುಟುಕುಗಳು ಚಿಕ್ಕದಾಗಿ ಕಂಡರೂ ಹಿರಿದರ್ಥವನ್ನು ಸ್ಫುರಿಸುತ್ತವೆ. ಮನಸ್ಸಿನ ಏಕಾಗ್ರತೆ ತನ್ಮೂಲಕ ವ್ಯಕ್ತಿತ್ವ ವಿಕಾಸ ಇವು ಧ್ಯಾನದ ಕೊಡುಗೆಗಳೆಂದು ಅರ್ಥೈಸಲು ಈ ಪುಸ್ತಕ ಸಹಕಾರಿ.

— ಇಂದಿರಾ ಕುಮಾರಿ

**ಬಿಜೆಪಿ ಇರಲಿ, ಕಾಂಗ್ರೆಸ್ ಇರಲಿ ಪಕ್ಷಗಳ ಪರವಾಗಿರುವುದು ಅಥವಾ ವಿರೋಧವಾಗಿರುವುದು ರಾಜಕಾರಣದ ಸಂಗತಿಗಳು. ಎಲ್ಲಾ ಪ್ರಜೆಗಳನ್ನು ರಕ್ಷಿಸಬೇಕಾದ ಆಡಳಿತ ಒಂದು ಕೋಮಿನ ದೇವರ ಉತ್ಸವವನ್ನಾಗಲಿ ಮನೆಗಳನ್ನಾಗಲಿ, ರಕ್ಷಿಸಬೇಕಾದ್ದು ಕರ್ತವ್ಯ. ವಿವೇಕವನ್ನು ಕಳೆದುಕೊಂಡ ಕೆಲವೇ ಜನರಿಂದ ಇಡೀ ಊರಿನ ಅಮಾಯಕರು ತೊಂದರೆಗೆ ಒಳಗಾಗಬೇಕಾಗಿರುವುದು ನಮ್ಮ ಸಂದರ್ಭದ ದುರಂತ.**

ಎಲ್ಲವನ್ನೂ ಕುಟ್ಟಿ ಒಡೆದಿದ್ದಾರೆ. ಹಾಸಿಗೆಗಳಿಗೆ ಬೆಂಕಿ ಹಚ್ಚಿದ್ದಾರೆ. ನಾನು ಹೋದಾಗ ಮನೆಯ ಹೆಂಗಸರು ಸುಟ್ಟು ಹೋಗಿದ್ದ ಹಾಸಿಗೆಗಳಿಂದ ಬಿಳಿ ಹತ್ತಿಯನ್ನು ಆಯುತ್ತಿದ್ದರು. ಹುಡುಗರು ಯಾರದ್ದೋ ಮನೆಗಳಿಂದ ಅನ್ನ ತರುತ್ತಿದ್ದರು. ಗಂಡಸರು ತಲೆ ಮೇಲೆ ಕೈಹೊತ್ತು ಕುಳಿತಿದ್ದರು. ಹೆಂಗಸರ ಮುಖ ನೋಡುವುದು ಅಸಾಧ್ಯವಾಗಿತ್ತು.

೨೦೦೨ರ ಜುಲೈ ೧೩ರಂದು ಬೆಂಗಳೂರಿನಲ್ಲಿ ಗುಜರಾತಿನ ಬಂದೂಕುವಾಲ ಭೇಟಿಯಾಗಿದ್ದರು. ಅವರು ಹೇಳಿದರು – ಅಹಮದಾಬಾದಿನಲ್ಲಿ ಸರ್ಕಾರಿ ಭದ್ರತೆಯುಳ್ಳ ಮುಸ್ಲಿಮರು ನೌಕರಿ ತೊರೆಯುವಂತೆ ಒತ್ತಡ ತರಲಾಗುತ್ತಿದೆಯಂತೆ. ಪೊಲೀಸರು ಒಂದು ಕೋಮಿನ ಪರ ನಿಂತು ಹಿಂಸಾಕೃತ್ಯಕ್ಕೆ ಸಹಕರಿಸುತ್ತಿದ್ದಾರಂತೆ. ಅಲ್ಲಿನ ಪ್ರಸಿದ್ಧ ಲೇಖಕರಾದ ಚಂದ್ರಕಾಂತ ಭಕ್ಷಿ, ಗುಣವಂತ ಷಾ ಮುಂತಾದವರು ಕೋಮುವಾದಿಗಳ ಪರ ಬರೆಯುತ್ತಿದ್ದಾರೆ. ಸಂತ್ರಸ್ತರುಗಳಿಗೆ ಸರ್ಕಾರದ ಬೆಂಬಲವಿಲ್ಲ, ರಾಜ್ಯಪಾಲರು ಪ್ರಾಮಾಣಿಕ ವರದಿ ಕಳಿಸಿಲ್ಲ, ಪ್ರಧಾನ ಮಂತ್ರಿಗಳು ರಾಷ್ಟ್ರಾಧ್ಯಕ್ಷರೂ ಕೂಡ ಒಂದು ಮಾತೂ ಆಡಿಲ್ಲ, ನಮಗೆ ದಿಕ್ಕು ತೋರುವವರು ಇಲ್ಲ, ನಮ್ಮನ್ನು ಭಾರತೀಯರು ಎಂದು ಯಾಕೆ ಗಣಿಸುತ್ತಿಲ್ಲ ಎಂದು ಅಲ್ಲಿನ ಮುಸ್ಲೀಮರು ವ್ಯಥೆಪಡುತ್ತಿದ್ದಾರೆ.

ಹೋಗುವುದಿಲ್ಲವೇ ಎಂದು ಕೆಲವರು ಕೇಳಿದರಂತೆ. ನನ್ನ ದೈವ ಆದಿವಾಸಿಗಳು, ಇವರನ್ನು ಭೇಟಿ ಮಾಡಿ ಮಾತಾಡಿದ್ದೇನೆ. ಇದರಿಂದಲೇ ನನಗೆ ಸಮಾಧಾನವಾಗಿದೆ ಎಂದು ಹೇಳಿ ಮೇಧಾ ಹೊರಟರಂತೆ. ಅವರ ಈ ಮಾತಿನಿಂದ ಭಜರಂಗದಳದವರು ಕುಪಿತರಾದರು ಹಾಗೂ ಪರಿಸರ ಪರವಾದ ಈ ಚಳುವಳಿಯನ್ನು ಪ್ರತಿಭಟಿಸಲು ಸಂಚು ಹೂಡಿದರಂತೆ.

ಮೇಧಾ ಪಾಟ್ಕರ್ ಶೃಂಗೇರಿಯಿಂದ ಹೋದ ನಂತರ ಅಲ್ಲಿನ ಪರಿಸರ ಕಾರ್ಯಕರ್ತರು ಮುಂದಿನ ಕಾರ್ಯತಂತ್ರಗಳನ್ನು ರೂಪಿಸಲು ನಿಗದಿತ ಸ್ಥಳಗಳಲ್ಲಿ ಸಭೆ ಸೇರಿಸಿದರು. ಸಭೆ ನಡೆಯುತ್ತಿದ್ದಾಗ ಪೊಲೀಸರು ಅಲ್ಲಿಗೆ ಬಂದು ಹೊರಗೆ ಗಲಾಟೆ ಆಗುವ ಲಕ್ಷಣಗಳಿವೆ. ಬಸ್ ನಿಲ್ದಾಣಕ್ಕೆ ಯಾರೂ ಹೋಗ್ಬೇಡಿ. ಈ ಸಭಾಂಗಣದ ಪಕ್ಕದಲ್ಲಿರುವ ಓಣಿಯಲ್ಲಿ ಸಾಗಿ ಮುಖ್ಯ ರಸ್ತೆ ಸೇರಿಕೊಳ್ಳಿ, ಅಲ್ಲಿ ಬಸ್ ನಿಲ್ಲುವ ವ್ಯವಸ್ಥೆ ಮಾಡುತ್ತೇವೆ. ದಯಮಾಡಿ ಸಭೆಯನ್ನು ಇಲ್ಲಿಗೆ ನಿಲ್ಲಿಸಿ, ನಿಮ್ಮ ಊರು ಸೇರಿಕೊಳ್ಳಿ ಎಂದರು. ಬಸ್ ನಿಲ್ದಾಣದಲ್ಲಿ ಗಲಾಟೆ ಮಾಡುವವರ ವಿರುದ್ಧ ಕಾರ್ಯಾಚರಣೆ ಮಾಡಿ ನಾಗರಿಕರಿಗೆ ತೊಂದರೆಯಾಗದಂತೆ ನೋಡಿಕೊಳ್ಳಿ ಎಂದು ಪ್ರಜ್ಞಾವಂತರು ಹೇಳಿದರೆ ಅದೆಲ್ಲಾ ನಿಮಗೇಕೆ ?

# ದನದೊಂದಿಗೆ ಮಾತುಕತೆ

ನಮ್ಮೂರಿನ ಗಣಪತಿ ಸಾಗರದಿಂದ ಬಂದವನೇ ಘಟನೆಯೊಂದನ್ನು ವಿವರಿಸಿದ. ಸಾಗರದ ಹೊಳೆಬಾಗಿಲ ಬಸ್ ನಿಲ್ದಾಣದಲ್ಲಿ ದನವೊಂದು ಮಲಗಿತ್ತಂತೆ. ಕಂಠ ಮಟ್ಟ ಕುಡಿದು ಅಲ್ಲಿಗೆ ಬಂದ ವಿದ್ಯಾವಂತ ಯುವಕನೊಬ್ಬ ದನದೊಂದಿಗೆ ಮಾತನಾಡಲು ಶುರುಮಾಡಿದನಂತೆ.

'ಹಸಿರು ಬೆಟ್ಟದಲ್ಲಿ ಮೆಂದು ಹಾಯಾಗಿ ಓಡಾಡಿಕೊಂಡಿರಬೇಕಾದ ನೀನು ಇಲ್ಲಿ ಈ ಬಸ್‌ಸ್ಟ್ಯಾಂಡ್ ಪಕ್ಕ ಮಲಗಬೇಕಾದ ಸ್ಥಿತಿ ಬಂತೇ? ನಿನ್ನನ್ನು ಕಡಿದು ತಿನ್ನುತ್ತಿದ್ದಾರಮ್ಮಾ! ನಾನು ಹೋಟೆಲಿಗೆ ಹೋದರೂ ನಿನ್ನ ಮಾಂಸವನ್ನೇ ಕೊಡುತ್ತಾರೆ. ಮೊನ್ನೆ ಶ್ರೀಧರ ನಗರದಲ್ಲಿ ಕೋಮುಗಲಭೆಯ ಬೆಂಕಿ ಹತ್ತಿಕೊಂಡು ಉರಿಯಿತು. ನಿನ್ನಂಥವಳನ್ನು ಕಡಿದು ತಿಂದರೆ ಬೆಂಕಿಹತ್ತದೆ ಇರುತ್ತದೆಯೇ? ನಿನಗೆ ಇಂತಹ ದುರ್ಗತಿ ಬಾರಬಾರದಿತ್ತು' ಎಂದು ಅತ್ತನಂತೆ.

ಗಣಪತಿ ನಗುತ್ತಾ ಈ ಘಟನೆಯನ್ನು ವಿವರಿಸಿದರೂ ಈ ಅಳಲಲ್ಲಿ ಧರ್ಮಸೂಕ್ಷ್ಮಗಳಿವೆ.

ಸ್ನೇಹಿತನೊಬ್ಬ ವಿವರಿಸಿದ. ಸೀಮೆಎಣ್ಣೆ ಕ್ಯಾನುಗಳನ್ನು ಹಿಡಿದು ಬರುತ್ತಿದ್ದರು. ಮನೆ ಮಾಡು ಇತ್ಯಾದಿಗಳಿಗೆ ಸೋಂಕಿಸಿ ಬೆಂಕಿ ಹಚ್ಚಿದ್ದನ್ನು ಕಣ್ಣಾರೆ ನೋಡಿದ. ಗುಡಿಸಲೊಂದಕ್ಕೆ ಒಬ್ಬ ನುಗ್ಗಿದ. ಆ ಮನೆಯವರು ಅದೆಷ್ಟು ಕಷ್ಟಪಟ್ಟು ದುಡಿದು ಹಣ ಉಳಿಸಿ ಪುಟ್ಟ ಟಿ.ವಿ.ಯೊಂದನ್ನು ತಂದಿದ್ದರೋ ಏನೋ. ಅದನ್ನೆತ್ತಿಕೊಂಡು ಹೊರಬಂದು ರಸ್ತೆಗೆ ಒಗೆದ. ಅದು ಒಡೆದು ಚೂರಾಯಿತು. ಕೈಯಲ್ಲೇ ಹಿಡಿದ ದಪ್ಪ ಕೋಲಿನಿಂದ ಕುಟ್ಟಿಕುಟ್ಟಿ ಇನ್ನೂ ಪುಡಿ ಪುಡಿ ಮಾಡಿದ. ನೋಡು ನೋಡುತ್ತಿದ್ದಂತೆ ಶ್ರೀಧರನಗರದ ತುಂಬಾ ಹೊಗೆ ತುಂಬಿ ಬೆಂಕಿ ಆಡತೊಡಗಿತು.

ಸ್ವತಃ ಕೆಲವರ ಮನೆಗೆ ಹೋಗಿದ್ದೆ. ಮೀಟರ್ ಬೋರ್ಡ್‌ಗಳು, ಬಲ್ಬ್‌ಗಳು, ಮೇಜು, ಮಂಚಗಳು

ಖೊಮೇನಿ, ಲಾಡೆನ್‌ನಂಥವರಿಂದ ಮುಸ್ಲಿಂ ಸಮುದಾಯ ಪ್ರಪಂಚದಲ್ಲೇ ಬಹಳ ನರಳಿದೆ. ಇಂದು ಭಾರತದಲ್ಲಿ ಮುಸ್ಲೀಮರು ಎಲ್ಲಾ ಜನರೊಂದಿಗೆ ಸೇರಿ ಹೋಗಿದ್ದಾರೆ. ಅವರನ್ನು ಬೇರ್ಪಡಿಸುವುದು ಸಾಧ್ಯವೇ ? ಚುನಾವಣೆಗೆ ಮೊದಲು ಬಿಜೆಪಿಯೊಂದಿಗೆ ಕೈಜೋಡಿಸಲ್ಲ ಎಂದ ಮಾಯಾವತಿ ಗೆದ್ದ ನಂತರ ಮಾಡಿದ್ದೇನು ?

ಮುಸ್ಲಿಂ ವಾಯ್ಸ್ ಬೆಂಗಳೂರಿನಿಂದ ಪ್ರಕಟವಾಗುವ, ಕೋಮುವಾದವನ್ನು ಪ್ರಚೋದಿಸುವ ಪತ್ರಿಕೆ. ಏಕಿಂಥ ಪತ್ರಿಕೆಗಳು ಪ್ರಕಟವಾಗುತ್ತವೆ? ಮುಸ್ಲಿಂ ಸಮುದಾಯದಲ್ಲೂ ಅನಕ್ಷರಸ್ಥರು, ಮೂಲಭೂತವಾದಿಗಳು, ಬಡವರು ಇದ್ದಾರೆ. ಈ ಸಮುದಾಯವನ್ನು ಹೇಗೆ ಮೇಲೆತ್ತಲಿ ? – ಎಂದು ಹೇಳುತ್ತ ಬಂದೂಕುವಾಲ ದುಃಖಿಸಿದರು. ರಾಮ ಮಂದಿರ ನಿರ್ಮಾಣಕ್ಕಾಗಿ ಅಯೋಧ್ಯೆಗೆ ಹೋಗಿದ್ದ ಪರಿಚಿತರೊಬ್ಬರು ಹೇಳಿದರು. ಡಿಸೆಂಬರ್ ೬ರ ಹಿಂದಿನ ದಿನಗಳವು. ಅವರು ಸ್ನಾನಕ್ಕಾಗಿ ಸರಯೂ ನದಿ ದಡಕ್ಕೆ ನಿತ್ಯ ಹೋಗುತ್ತಿದ್ದರು. ಅಲ್ಲಿ ಕಾವಲಿದ್ದ ಸೇನೆಯವರೊಬ್ಬರು ಹೇಳಿದರಂತೆ, ಇದು ನಿಮಗೆ ಕೊನೆಯ ಅವಕಾಶ. ಈ ಬಾರಿ ನೀವು ಮಸೀದಿ ಧ್ವಂಸ ಮಾಡದಿದ್ದರೆ ಇನ್ನೆಂದೂ ನಿಮಗೆ ಇಂಥ ಅವಕಾಶ ಸಿಗುವುದಿಲ್ಲ. ಈ ಎಲ್ಲ ಮಾತುಗಳನ್ನು ಗಮನಿಸಿದರೆ ಬಹುಪಾಲು ಜನರ ಒಲವು ಕೋಮುವಾದಿಗಳ ಪರ ಇರುವುದು ತಿಳಿಯುತ್ತದೆ.

ಶೃಂಗೇರಿಗೆ ಮೇಧಾ ಪಾಟ್ಕರ್ ಬಂದಾಗ ಮಠಕ್ಕೆ

**ಬಂದಗದ್ದೆ ರಾಧಾಕೃಷ್ಣ**

ವಾತಾವರಣ ಉದ್ರೇಕಗೊಂಡಿದೆ. ಮೊದಲು ಪ್ರಾಣ ಉಳಿಸಿಕೊಳ್ಳಿ, ನಂತರ ಮುಂದಿನ ವಿಚಾರ – ಮುಂತಾಗಿ ಪೊಲೀಸರು ಮಾತಾಡಿದರೇ ಹೊರತು ಗಲಾಟೆ ಮಾಡುವ ಮಂದಿಯ ಬಗೆಗೆ ಉಗ್ರ ಕ್ರಮ ಕೈಗೊಳ್ಳುವ ಗೋಜಿಗೆ ಹೋಗಲಿಲ್ಲ.

ಉದ್ರಿಕ್ತ ಜನರೆದುರು ನಮ್ಮ ನಾಗರಿಕ ಪ್ರಜ್ಞೆ ಏನೂ ಕೆಲಸ ಮಾಡದು ಎಂಬ ವಿವೇಕದಿಂದ ಪರಿಸರ ಕಾರ್ಯಕರ್ತರು ಓಣಿಯಲ್ಲಿ ನಡೆದು ಮುಖ್ಯ ರಸ್ತೆ ಹತ್ತಿರ ನಿಂತಾಗ ಅಲ್ಲಿಗೆ ಬಂದ ಪೊಲೀಸರು ನೀವು ಇಲ್ಲಿಂದ ೪ ಕಿ.ಮೀ. ನಡೆದು ಬಸ್ ಹತ್ತಿ, ಇಲ್ಲಿಯೂ ಗಲಾಟೆ ಆಗುವ ಸಂಭವವಿದೆ ಎಂದು ಹೇಳಿದಾಗ ಪರಿಸರಕ್ಕಾಗಿ ಮಾತನಾಡುವ ನಾವು ಇಷ್ಟೊಂದು ಅವಮಾನ ಅನುಭವಿಸಬೇಕೆ ಎಂದು ಅನ್ನಿಸಿದ್ದುಂಟು. ಈ ಘಟನೆ ವಿವರಿಸಿದ ಪ್ರೊ|| ರಾಮದಾಸ್ ಹೇಳಿದರು: ನನ್ನ ಹೋರಾಟದ ಜೀವನದಲ್ಲಿ ಇಷ್ಟೊಂದು ಅವಮಾನವನ್ನು ಅನುಭವಿಸಿರಲಿಲ್ಲ – ಹೌದು ಪ್ರಜಾಪ್ರಭುತ್ವ ಇರುವ ನಾಡಿನಲ್ಲಿ ಇಂಥ ಘಟನೆಗಳು ನಡೆದರೆ ಯಾರಿಗಾದರೂ ಅವಮಾನವೇ.

ಈ ನಾಡಿನ ಪೊಲೀಸರು ಏಕೆ ಕೋಮುವಾದಿಗಳನ್ನು ಬೆಂಬಲಿಸುತ್ತಾರೆ? ಅಯೋಧ್ಯೆಯಿಂದ ಹಿಂದಿರುಗುತ್ತಿದ್ದ ಕರಸೇವಕರನ್ನು ಗೋಧ್ರಾ ರೈಲು ನಿಲ್ದಾಣದಲ್ಲಿ ಬೆಂಕಿ ಇಟ್ಟು ಕೊಲ್ಲಲಾಯಿತು. ಈ ಘಟನೆಯ ಹಿನ್ನೆಲೆಯಲ್ಲಿ ಗುಜರಾತ್ ರಾಜ್ಯಾದ್ಯಂತ ಭೀಕರ ಹಿಂಸಾಕೃತ್ಯ ನಡೆದವು. ಇದೇ ಬೆಂಕಿ ಈಗ ದೇಶದ ಊರು ಊರುಗಳಲ್ಲಿ ಹಬ್ಬುತ್ತಿದೆ.

ಸಾಗರದಲ್ಲೂ ಒಂದು ಕೋಮಿನವರ ಮನೆಗಳನ್ನು ಹುಡುಕಿ, ಬೆಂಕಿ ಹಚ್ಚಿ ಲೂಟಿ ಮಾಡಲಾಗಿದೆ. ಆದರೆ ಇಲ್ಲಿನ ಪೊಲೀಸರು ಬೆಂಕಿ ಹತ್ತಿದ ನಂತರವಾದರೂ

ಪರಿಸ್ಥಿತಿಯನ್ನು ಹತೋಟಿಗೆ ತಂದಿದ್ದಾರೆ. ಕೋಮುವಾದದ ಬೆಂಕಿಯಲ್ಲಿ ರಾಜಕೀಯದವರು ಮೈಕಾಯಿಸಿಕೊಂಡರು. ದರೋಡೆಕೋರರು ನಗನಾಣ್ಯ ಲೂಟಿ ಮಾಡಿದರು. ಕೆಟ್ಟ ದಂಗೆಯೊಂದು ನಮ್ಮ ತಾಲ್ಲೂಕಿನಲ್ಲಿ ಪ್ರಾರಂಭವಾಗಿದೆ.

ಕೋಮು ಗಲಭೆಗಳಿಂದ, ಕೋಮಿನವರು ನೀಡಿದ ಬಹಿಷ್ಕಾರಗಳಿಂದ ರೋಸಿಹೋಗಿರುವ ಕನ್ನಡ ಲೇಖಕಿ ಭಾನು ಮುಷ್ತಾಕ್ ಹೇಳಿದರು: ''ಹಿಂದೂ ಧರ್ಮದಿಂದಲೇ ಸಿಡಿದು ಮತ್ತೊಂದು ಧರ್ಮದಲ್ಲಿ ಆಶ್ರಯ ಪಡೆದವರೇ ಮುಸ್ಲಿಮರು. ಹೀಗಿರುವಾಗ ಮುಖ್ಯ ವಾಹಿನಿ, ಮುಖ್ಯ ವಾಹಿನಿ ಎಂದರೆ ಅರ್ಥವೇನು? ಶಾಲೆಯಲ್ಲಿ ಮುಸ್ಲಿಂ ಹುಡುಗನೊಬ್ಬ ಹೆಸರೇನೆಂದರೆ ಹರ್ಷ ಎನ್ನುತ್ತಿದ್ದನಂತೆ. ಆದರೆ ಅವನ ಹೆಸರು ಹರ್ಷದ್. ತಾನು ಹಿಂದೂ ಎಂದೇ ತಿಳಿದುಕೊಳ್ಳಲಿ ಎಂದು ಹಾಗೆ ಹೇಳುತ್ತಿದ್ದನೇ? ಹೆಸರು ಹೇಳಿಕೊಳ್ಳಲೂ ಧಾರ್ಮಿಕ ಭಯದ ವಾತಾವರಣವೇ? ಹಿಂದೂ ದೇವತೆಗಳನ್ನು ಮುಸ್ಲಿಮರು, ಮುಸ್ಲಿಂ ದೇವತೆಗಳನ್ನು ಹಿಂದೂಗಳು ಪೂಜಿಸುವುದನ್ನು ನೋಡಿದ್ದೇನೆ. ಹೀಗಿದ್ದರೂ ಧರ್ಮದ ಹೆಸರಿನಲ್ಲಿ ಬೆಂಕಿ ಹತ್ತಿ ಉರಿಯಲು ಕಾರಣಗಳು ಅರ್ಥವಾಗುತ್ತಿಲ್ಲ.

''೧೧ ಸೆಪ್ಟೆಂಬರ್ ೨೦೦೨ರಂದು ವಾಷಿಂಗ್‌ಟನ್ ಘಟನೆ ನಂತರ ಜಗತ್ತಿನಲ್ಲಿ ಮುಸ್ಲಿಮರೆಲ್ಲಾ ಗೂಂಡಾಗಳು ಎಂಬ ಭಾವನೆ ಉಂಟಾಗಿದೆ. ಇದು ಸರಿಯೇ? ನಾನು ಹಾಸನದಲ್ಲಿ ವಕೀಲಿ ವೃತ್ತಿ ಮಾಡುವವಳು. ಶಿವಮ್ಮ ಕಾನೂನು ವಿಚಾರದಲ್ಲಿ ನನ್ನನ್ನು ನಂಬಿದ್ದಳು. ಒಮ್ಮೆ ಅವಳ ಮಗನಿಗೆ ಜೈಲಾಯಿತು. ಆರೋಪಿ ಮುಸ್ಲಿಂ. ಬೇಲ್ ಮುಖಾಂತರ ಮಗನನ್ನು ಬಿಡಿಸಲು ಶಿವಮ್ಮ ನನ್ನಲ್ಲಿ ಕೇಳಿಕೊಂಡಳು. ಶನಿವಾರ, ಭಾನುವಾರ ಮುಂತಾಗಿ ಬೇಲ್ ಸಿಗುವುದು ತಡವಾಯಿತು. ಮಗನನ್ನು ನೋಡಲು ಶಿವಮ್ಮ ಜೈಲಿಗೆ ಹೋದಾಗ ವಕೀಲರು ಯಾರೆಂದು ಮಗ ಕೇಳಿದ. ಭಾನು ಮುಷ್ತಾಕ್ ಅಂದಾಗ, ಆರೋಪೀನೂ ಮುಸ್ಲಿಂ, ವಕೀಲರೂ ಮುಸ್ಲಿಂ, ಅವರು ನಿಜವಾಗಿಯೂ ನನ್ನನ್ನು ಬಿಡಸ್ತಾರ ಎಂದು ಮಗ ಕೇಳಿದನಂತೆ. ನನ್ನನ್ನು ಸಂಪೂರ್ಣ ನಂಬಿದ್ದ ಶಿವಮ್ಮ ನನಗಿದನ್ನು ಹೇಳಿದಾಗ ನನಗೆ ನಾನೇ ಕೇಳಿಕೊಂಡೆ, ನಾನು ಯಾರು? ಎಲ್ಲಿದ್ದೇನೆ?

''ನನ್ನ ಜೊತೆ ಕೆಲಸ ಮಾಡುವ ವಕೀಲರೊಬ್ಬರು ಒಮ್ಮೆ ಶುಕ್ರವಾರ ಮಧ್ಯಾಹ್ನ ತಮ್ಮನ್ನು ಮನೆಗೆ ಬಿಟ್ಟುಬರಲು ನನ್ನಲ್ಲಿ ಕೇಳಿಕೊಂಡರು. ಅವರ ಬಳಿಯೂ ಕಾರಿತ್ತು, ನನ್ನ ಬಳಿಯೂ ಕಾರಿತ್ತು. ಕಾರಣ ಕೇಳಿದಾಗ ಅವರು ಹೇಳಿದರು – ಮಸೀದಿ ಬಾಗಿಲಲ್ಲೇ ಹೋಗಬೇಕು. ಅವರು ಧಡಧಡನೆ ಹೊರಬರುವುದನ್ನು ನೋಡಿದಾಗ ನನಗೇಕೋ ಭಯ. ಜೊತೆಗೆ ನೀವು ಇರಿ. – ಈ ದೇಶದಲ್ಲಿ ಇಂತಹ ಪರಿಸ್ಥಿತಿ ಇರಬೇಕಾ?

''ಇವೆಲ್ಲಾ ಸುಳ್ಳೆನಿಸುವ ಘಟನೆಗಳೂ ಇವೆ. ಹಾಸನದ ಹತ್ತಿರದ ಹಳ್ಳಿಯ ರಸ್ತೆಯಲ್ಲಿ ಕಾರು ಓಡಿಸುತ್ತಿದ್ದಾಗ ದನದ ಕರು ಚಂಗನೆ ಹಾರಿ ರಸ್ತೆಗೆ ಬಂತು. ಕಾರಿಗೆ ತಾಗಿತು. ಸ್ವಲ್ಪ ಪೆಟ್ಟಾಯಿತು. ಊರಿನ ಜನ ಮಚ್ಚು ಹಿಡಿದು ಕಾರಿನತ್ತ ಧಾವಿಸಿದರು. ನಾನು ನನ್ನ ಮಗಳು ಇಬ್ಬರೇ ಕಾರಿನಲ್ಲಿದ್ದೆವು. ನನ್ನ ಆತಂಕ ಹೇಳತೀರದಾಗಿತ್ತು. ಅಷ್ಟರಲ್ಲಿ ಹಿಂದಿನಿಂದ ಕೆ.ಎಸ್.ಆರ್.ಟಿ.ಸಿ. ಬಸ್‌ನಲ್ಲಿದ್ದ ಕೆಲವರು ನನ್ನನ್ನು ಗುರುತಿಸಿದರು. ಎಲ್ಲರಿಗೂ ತಿಳಿ ಹೇಳಿದರು. ವಾತಾವರಣ ತಿಳಿಯಾಯಿತು. ಆ ಜನರು ಯಾವ ಧರ್ಮದವರೋ, ಯಾರ ಊರಿನವರೋ? ಆದರೆ ನನ್ನವರು. ಆ ಜನರ ಪ್ರೀತಿಯನ್ನು ಹೇಗೆ ಮರೆಯಲಿ?''

ಈ ಮಾತುಗಳಿಂದ ಮನಸ್ಸು ಭಾರವಾದರೂ ಒಳಗೆಲ್ಲಾ ಅಂತರ್ಜಲದ ಒರತೆ ಕಂಡಂತಾಗುತ್ತಿತ್ತು. ರಂಜಾನ್ ದರ್ಗಾ ಹೇಳಿದ್ದು ನೆನಪಾಗುತ್ತದೆ. ಆಗಸದ ಕೆಳಗೆ ಇಲ್ಲೇ ಕುಳಿತು ನಾವು ನಮಾಜು ಮಾಡಬಹುದು. ನಿರಾಕಾರನಾದ, ನಿರ್ಗುಣನಾದ ದೇವರಿಗೆ ನಾನೂ ಇಲ್ಲೇ ನಿಂತು ಕೈಮುಗಿಯಬಹುದು. ಹೀಗಿರುವಾಗ ಮಂದಿರಕ್ಕಾಗಿ ಜಗಳವೇಕೆ? ಹಿಂಸಾಚಾರವೇಕೆ? ಈ ಪ್ರಶ್ನೆ ಇತರರಿಗಲ್ಲ, ನಮಗೆ ನಾವೇ ಕೇಳಿಕೊಳ್ಳ ಬೇಕಾದ ಪ್ರಶ್ನೆ.

ಆಗ ಅವರು ಧ್ವಂಸ ಮಾಡಿದರು. ಈಗ ನಾವು ಮಾಡಿದ್ದು ತಪ್ಪಾ? ಅವರು ಅಲ್ಲಿ ಹಾಗೆ ಮಾಡಿದರು, ಹೀಗೆ ಮಾಡಿದರು, ಈಗ ಅನುಭವಿಸಬೇಕಾಗಿದೆ. ಆಗಿದ್ದು ಸರಿಯಾಗೆ ಇದೆ ಮುಂತಾಗಿ ಅನೇಕ ವಾದಗಳಿವೆ. ಈ ವಾದಗಳು ಈಗ ಉಪಯೋಗಕ್ಕೆ ಬರುತ್ತವೆಯೇ?

**ಬಂದಗದ್ದೆ ರಾಧಾಕೃಷ್ಣ**
ಪುಸ್ತಕ ಹೊಂಬಾಳೆ
ಕೆಳದಿ - ೫೭೭ ೪೦೧

# ಅಂಬೇಡ್ಕರ್ ಮಾತಾಡಿದರು

೧

**ಒಂ**ದು ರಾತ್ರಿ ಕನಸಿನಲ್ಲಿ ಅಂಬೇಡ್ಕರ್ ಬಂದು
ಮೈದಡವಿ ಮೆಲ್ಲನೆ ಮಾತಾಡಿದರು,
ಪಂಚಲೋಹ ಪುತ್ಥಳಿಯಲ್ಲಿ ಕಂಡಂಥ ಮುಖ
ಅದೇ ಸೂಟು, ಬೂಟು, ಟೈ, ಟೀಕುಟಾಕು.

೨

''ಪ್ರತಿವರುಷ ನನ್ನ ಜಯಂತಿ ದಿನ ಬಂದಾಗ
ಏನಯ್ಯ ಈ ಜನಗಳ ಆರ್ಭಟ,
ಊರ ದಾರಿ ದಾರಿಗೆ ಭಾವ ಚಿತ್ರವ ಹಿಡಿದು
ಮಾಡಿದರೆ ಸಾಕೆ ಬರಿ ಮೆರವಣಿಗೆ

ಸ್ವಾಭಿಮಾನವಿರದ ಪ್ರತಿ ಮನುಷ್ಯನ ಪಾಡು
ಬರಿ ಶೂನ್ಯವೆಂದು ಜಗಕೆ ಸಾರಿದೆ,
ಸಾದ್ಯಂತ ಬದುಕಿಗಾಗಿ ಜ್ಞಾನದ ಹಕ್ಕಿರಲೆಂದು
ಆಕಾಶದೆತ್ತರ ನಿಂತು ಗುಡುಗಿದೆ.

ಮಾನವರೊಳಿತಿನ ಧರ್ಮ, ಸಮತೆಯ ಮರ್ಮವನು
ಧೈರ್ಯದಿ ಕೈಬೆರಳು ಮಾಡಿ ತೋರಿದೆ,
ನೀತಿಹೀನ ತತ್ವ; ಮತಿ ಹೀನ ಸತ್ವ ತೊರೆದು
ನವದಿಗಂತದಿ ಬುದ್ಧನಿಗೆ ಶರಣಾದೆ.



ಸಂಘರ್ಷದ ಹಾದಿಯಲಿ ಸಾಗಿ ಬಂದರಿವರು
ಅರಿವಿನಾಳಕೆ ಇಳಿಯಲಿಲ್ಲವೇಕೆ?
ಕೊಂಪೆ-ಕೊತ್ತಲ ಕಹಿ; ಸ್ವಾತಂತ್ರ್ಯ ಸಿಹಿ ಇವರ
ಕರಳು ಸರವ ಬಾಧಿಸಲಿಲ್ಲವೇಕೆ?

ಎಲ್ಲ ಜಾತಿಯ ಬಡವರೇ ಒಂದಾಗಿ ಎಂದು
ಹಗಲಿರುಳು ಹಂಬಲಿಸಿ ಕೂಗಾಡಿದೆ,
ಒಂದೆ ಹೂವ ಎಸಳು ಹರಿ-ಹರಿದು ಹಲವು ಜಾತಿ
ಮಾಡಿ ವಿಸ್ಮೃತಿಯ ಜಾಡನು ಹಿಡಿದರು.''

೩

ಗಂಭೀರ ವದನದಿ ಹೊಮ್ಮಿದ ಸಿಂಹವಾಣಿಗೆ
ಪಕ್ಕನೆ ಎಚ್ಚರಾಗಿ ಎದ್ದು ಕುಳಿತೆ
ಗೋಡೆಗೆ ಹಾಕಿದ ಸಾಹೇಬರ ಭಾವಚಿತ್ರದಿ
ಕಾಣಿಸಿತು ಉರಿದಂತೆ ದಿವ್ಯ ಹಣತೆ.

**ಲಕ್ಷ್ಮಣ ಗಂಟೆ**
ನಟರಾಜ ಬಡಾವಣೆ, ಹರಪನಹಳ್ಳಿ
ಜಿಲ್ಲೆ: ದಾವಣಗೆರೆ

# ಕರ್ನಾಟಕದಲ್ಲಿ ಸಾರ್ವಜನಿಕ ಗ್ರಂಥಾಲಯ ಚಳುವಳಿ ಸಾಗಿದ ದಾರಿ

ಹೆಚ್. ಆರ್. ನಾರಾಯಣಮೂರ್ತಿ

ಸಾರ್ವಜನಿಕ ಗ್ರಂಥಾಲಯವೆಂದರೆ, ಇಲ್ಲಿ ಎಲ್ಲರಿಗೂ ಮುಕ್ತ ಪ್ರವೇಶವಿರುತ್ತದೆ. ಯಾವುದೇ ತರವಾದ ಭೇದವಾಗಲಿ, ನಿರ್ಬಂಧವಾಗಲಿ ಇರುವುದಿಲ್ಲ. ಹಾಗೆಯೇ ಎಲ್ಲರೂ ಗ್ರಂಥಾಲಯವನ್ನು ಉಚಿತವಾಗಿ ಉಪಯೋಗಿಸಬಹುದಾಗಿದೆ. ಈ ಯೋಜನೆ ಅಥವಾ ಕಲ್ಪನೆಯನ್ನು ನಾವು ಮೊಟ್ಟ ಮೊದಲು ಕಾಣುವುದು ಗ್ರೀಕ್ ಮತ್ತು ರೋಮ್‌ನಲ್ಲೆಂದು ಇತಿಹಾಸವೇ ಹೇಳುತ್ತದೆ.

ಪ್ರಾಚೀನ ಯುಗದಲ್ಲಿ ಭಾರತದಲ್ಲಿಯೂ ಗ್ರಂಥಾಲಯಗಳು ಇದ್ದವೆಂಬುದಕ್ಕೆ ಸ್ಪಷ್ಟ ಮಾಹಿತಿಗಳಿವೆ. ಅವೇ ತಕ್ಷಶಿಲಾ, ಉಜ್ಜಯಿನಿ ಮತ್ತು ನಳಂದಾ ವಿಶ್ವವಿದ್ಯಾಲಯ ಗ್ರಂಥಾಲಯಗಳು. ಆದರೆ ಇವು ಸಾರ್ವಜನಿಕ ಗ್ರಂಥಾಲಯಗಳಾಗಿರಲಿಲ್ಲ. ಕರ್ನಾಟಕದಲ್ಲಿ ಗ್ರಂಥಾಲಯಗಳು ಅರಸು ಮನೆತನಗಳಲ್ಲಿ ಗುರುಕುಲದಲ್ಲಿ ಇದ್ದವು. ಆದರೆ ಇಲ್ಲಿಗೆ ಸಾಮಾನ್ಯ ಜನರ ಪ್ರವೇಶವಿರಲಿಲ್ಲ. ಇದಕ್ಕೆ ಅಂದಿದ್ದ ವರ್ಣಾಶ್ರಮ ಧರ್ಮ ಕಾರಣವಿರಬಹುದೇ ? ಆದರೆ ಸಾಮಾನ್ಯ ಜನರಿಗಾಗಿ ಸಾರ್ವಜನಿಕ ಗ್ರಂಥಾಲಯ ತೆರೆಯಲ್ಪಟ್ಟಿದ್ದು ಪ್ರಜಾಪ್ರಭುತ್ವದ ಬೀಜಗಳನ್ನು ಬಿತ್ತಿದ ಬಸವಣ್ಣನವರು ಹಾಗೂ ಅನುಯಾಯಿಗಳಾದ ಶರಣರು ಕ್ರಾಂತಿಗೈದ ಕಾಲವಾದ ಹನ್ನೆರಡನೇ ಶತಮಾನದಲ್ಲಿ ಎಂದು ಊಹಿಸಲವಕಾಶವಿದೆ.

೧೨ನೇ ಶತಮಾನದಲ್ಲಿ ಸಾರ್ವಜನಿಕ ಗ್ರಂಥಾಲಯವನ್ನು ತೆರೆಯಲಾಯಿತಾದರೂ ನಂತರ ಈ ಬಗ್ಗೆ ಮಾಹಿತಿ ಲಭ್ಯವಿರುವುದು ಬಹಮನಿ ಅರಸರ ಕಾಲದಲ್ಲಿ. ವಿಜಯನಗರ ಸಾಮ್ರಾಜ್ಯದಲ್ಲಿ ಎಲ್ಲಿಯೂ ಗ್ರಂಥಾಲಯಗಳ ಬಗ್ಗೆ ಕೇಳಿಬರುವುದಿಲ್ಲ.

**ಸ್ವಾತಂತ್ರ್ಯ ಪೂರ್ವದಲ್ಲಿಯ ಸಾರ್ವಜನಿಕ ಗ್ರಂಥಾಲಯಗಳು**

ಬ್ರಿಟಿಷರು ಭಾರತವನ್ನು ಪೂರ್ಣವಾಗಿ ಆಕ್ರಮಿಸಿಕೊಂಡ ಮೇಲೆ ವಿಕ್ಟೋರಿಯಾ ರಾಣಿಯ ೬೦ ವರ್ಷಗಳ ನೆನಪಿಗಾಗಿ ಭಾರತದಲ್ಲಿ ಜ್ಯೂಬಿಲಿ ಗ್ರಂಥಾಲಯಗಳು ಭಾರತದ ಹಲವಾರು ಕಡೆ ಪ್ರಾರಂಭಗೊಂಡವು. ಅಂತೆಯೇ ಕರ್ನಾಟಕದ ಕಾರವಾರ, ಕುಮಟಾ, ಕುಂದಗೋಳದಲ್ಲಿ ಜ್ಯೂಬಿಲಿ ಗ್ರಂಥಾಲಯಗಳನ್ನು ಪ್ರಾರಂಭಿಸಲಾಯ್ತು.

೧೯೧೫-೧೬ರಲ್ಲಿ ಹೋಮ್‌ರೂಲ್ ಚಳುವಳಿ ಭಾರತದ ತುಂಬೆಲ್ಲಾ ಹರಡಿತ್ತು. ನಮ್ಮ ರಾಜ್ಯವೂ ಅದಕ್ಕೆ ಹೊರತಾಗಿರಲಿಲ್ಲ. ಈ ಚಟುವಟಿಕೆಗಳ ಶಕ್ತಿಯಾಗಿ ಅಂದಿನ ಸ್ವಾತಂತ್ರ್ಯ ಹೋರಾಟದ ನಾಯಕರುಗಳಾದ ಕಡಪಾ ರಾಘವೇಂದ್ರರಾಯರು, ಆಲೂರು ವೆಂಕಟರಾಯರು, ಕಾರ್ನಾಡ್ ಸದಾಶಿವರಾಯರು, ಪಂಜೆ ಮಂಗೇಶರಾಯರು, ಬಸವನಾಳರು, ತಮ್ಮ ಖಾಸಗಿ ಗ್ರಂಥಾಲಯಗಳನ್ನು ಸ್ಥಾಪಿಸಿ, ಅವುಗಳಲ್ಲಿ ಸಾರ್ವಜನಿಕರಿಗೆ ಮುಕ್ತ ಪ್ರವೇಶವನ್ನು ಕಲ್ಪಿಸಿದರು. ಇದು ರಾಷ್ಟ್ರೀಯತೆ, ಸಂಸ್ಕೃತಿ ಮತ್ತು ಸಮಾಜೋದ್ಧಾರದ ಪ್ರಚಾರಕ್ಕೆ ಪೂರಕವಾಗಿ ಕೆಲಸ ಮಾಡಿತು. ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಗ್ರಂಥಾಲಯ ಚಳುವಳಿಯು ಮತ್ತೆ ಗರಿಗೆದರಿತು. ಇದರ ಬಿಸಿಯಲ್ಲಿಯೇ ಅಂದು ಮುಂಬೈ ಪ್ರಾಂತ್ಯಕ್ಕೆ ಸೇರಿದ್ದರೂ ಧಾರವಾಡದಲ್ಲಿ ಸ್ಥಾಪಿಸಿದ ಸಾರ್ವಜನಿಕ ಗ್ರಂಥಾಲಯವು ಕರ್ನಾಟಕ ಗ್ರಂಥಾಲಯ ಚಳುವಳಿಯ ಇತಿಹಾಸದಲ್ಲಿ ಪ್ರಮುಖ ಘಟನೆ ಎನ್ನಬಹುದು.

ಧಾರವಾಡ ಪ್ರಾದೇಶಿಕ ಗ್ರಂಥಾಲಯವು 'ಕರ್ನಾಟಕ ವಿದ್ಯಾವರ್ಧಕ ಸಂಘ'ದ ಆಶ್ರಯದಲ್ಲಿ ಜನ್ಮ ತಾಳಿತು. ೧೯೪೮ರಲ್ಲಿ ಶ್ರೀ ಉರವಕೊಂಡ ಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ಪ್ರಾರಂಭೋತ್ಸವ ನೆರವೇರಿತು. ಇದಲ್ಲದೇ ಕರ್ನಾಟಕದಲ್ಲಿ ೨ ಜಿಲ್ಲಾ ಗ್ರಂಥಾಲಯಗಳು, ೩೨ ತಾಲೂಕು ಗ್ರಂಥಾಲಯಗಳು, ೧೦೮೯ ಗ್ರಾಮೀಣ



ಗ್ರಂಥಾಲಯಗಳು ಸರಕಾರದ ಅನುದಾನಕ್ಕೆ ಒಳಗೊಂಡವು.

ಹಳೆಯ ಮೈಸೂರು ಸಂಸ್ಥಾನದಲ್ಲಿ ಆಂದಿನ ದಿವಾನರಾಗಿದ್ದ ದಿವಂಗತ ಡಾ॥ ಎಂ. ವಿಶ್ವೇಶ್ವರಯ್ಯನವರ ಕಾಲದಲ್ಲಿ ೧೯೧೫ರಲ್ಲಿ ಬೆಂಗಳೂರಿನಲ್ಲಿ ಒಂದು ಆರ್ಥಿಕ ಸಮ್ಮೇಳನ ನಡೆಯಿತು. ಆಗ ಸಂಸ್ಥಾನದಲ್ಲಿ ಸಾರ್ವಜನಿಕ ಗ್ರಂಥಾಲಯಗಳ ಸ್ಥಾಪನೆಯ ಬಗ್ಗೆ ಚರ್ಚೆ ನಡೆಯಿತು. ಇದರ ಫಲವಾಗಿ ಮೈಸೂರು ಸಂಸ್ಥಾನದಲ್ಲಿ ಅಲ್ಲಲ್ಲಿ ಗ್ರಂಥಾಲಯಗಳು ಜನ್ಮ ತಾಳಿದವು. ಅವುಗಳಲ್ಲಿ ಬೆಂಗಳೂರು ಮತ್ತು ಮೈಸೂರಿನಲ್ಲಿ ಸ್ಥಾಪನೆಗೊಂಡ ಗ್ರಂಥಾಲಯಗಳು ಪ್ರಮುಖ ಸ್ಥಾನವನ್ನು ಪಡೆದುದಲ್ಲದೆ ಗಟ್ಟಿಯಾಗಿ ಉಳಿದು ಬೆಳೆದವು. ಆ ಗ್ರಂಥಾಲಯಗಳು ರಾಜ್ಯ ಕೇಂದ್ರ ಗ್ರಂಥಾಲಯ ಮತ್ತು ಜಿಲ್ಲಾ ಕೇಂದ್ರ ಗ್ರಂಥಾಲಯಗಳಾಗಿ ಪರಿವರ್ತಿತವಾಗಿವೆ.

**ಸ್ವಾತಂತ್ರ್ಯಾ ನಂತರ ಗ್ರಂಥಾಲಯ ಚಳುವಳಿ**

ರಾಷ್ಟ್ರಮಟ್ಟದಲ್ಲಿ ಸ್ವಾತಂತ್ರ್ಯ ಬಂದ ಸಮಯದಲ್ಲಿ ಶೇ. ೮೦ರಷ್ಟು ಜನ ಅನಕ್ಷರಸ್ಥರಿದ್ದರು. ಶೇ. ೮೮ರಷ್ಟು ಜನರು ಹಳ್ಳಿಯಲ್ಲಿ ವಾಸಿಸುವವರಾಗಿದ್ದರು. ೧೯೫೧ರಲ್ಲಿ ಭಾರತ ಸರಕಾರವು ದೇಶದಲ್ಲಿರುವ ಗ್ರಂಥಾಲಯಗಳ ಸಮೀಕ್ಷೆಯನ್ನು ನಡೆಸಿತು. ಅದರ ಪ್ರಕಾರ ದೇಶದಲ್ಲಿ ಒಟ್ಟು ೧೧೬೬ ಗ್ರಂಥಾಲಯಗಳಿದ್ದು ೨೦೪ನ್ನು ಸಾರ್ವಜನಿಕ ವಾಚನಾಲಯಗಳೆಂದು ಕರೆಯಬಹುದಾಗಿತ್ತು. ೧೯೫೪ರಲ್ಲಿ ಮತ್ತೊಂದು ಸಮೀಕ್ಷೆ ನಡೆಸಿದಾಗ ೩೨,೦೦೦ ಗ್ರಂಥಾಲಯಗಳಿದ್ದುವೆಂದು ಕಂಡುಬಂದಿದೆ.

**ಮಾದರಿ ಗ್ರಂಥಾಲಯ ಮಸೂದೆಗಳು**

ಗ್ರಂಥಾಲಯ ಬೆಳವಣಿಗೆಯಲ್ಲಿ ಆಸಕ್ತಿಯುಳ್ಳ ಜನನಾಯಕರು ದೇಶದಲ್ಲಿ ಗ್ರಂಥಾಲಯಗಳ ಸ್ಥಾಪನೆಗೆ ಸರಕಾರದ ಮೇಲೆ ಬಲವಾದ ಒತ್ತಡ ತಂದರು. ಇದರ ಫಲವಾಗಿ ಸರಕಾರದ ಸೂಚನೆಯಂತೆ ಡಾ॥ ಎಸ್. ಆರ್. ರಂಗನಾಥನ್‌ರವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯು ತನ್ನ ವರದಿಯನ್ನು ೧೯೪೮ರಲ್ಲಿ ಸಲ್ಲಿಸಿತು. ಇದೇ 'ಮಾದರಿ ಗ್ರಂಥಾಲಯ ಮಸೂದೆ ೧೯೪೮.' ಈ ವರದಿಯನ್ನು ಸರಕಾರ ಸ್ವೀಕರಿಸಿದ್ದನ್ನು ಬಿಟ್ಟರೆ ಹೆಚ್ಚಿನ ಪ್ರಗತಿಯೇನೂ ಆಗಲಿಲ್ಲ.

೧೯೫೭ರಲ್ಲಿ ಮತ್ತೆ ಭಾರತ ಸರಕಾರವು ದೇಶದಲ್ಲಿ ಸಾರ್ವಜನಿಕ ಗ್ರಂಥಾಲಯ ಗಳನ್ನು ಅಭಿವೃದ್ಧಿಪಡಿಸಲು, ಬೆಳೆಸಲು ಮತ್ತು ಸುಧಾರಿಸುವ ನಿಟ್ಟಿನಲ್ಲಿ ಶ್ರೀ ಕೆ. ಪಿ. ಸಿನ್ಹಾರವರ ನೇತೃತ್ವದಲ್ಲಿ ಒಂದು ಗ್ರಂಥಾಲಯ ಸಮಿತಿಯನ್ನು ರಚಿಸಿತು. ಅದು ದೇಶದಲ್ಲಿ ಸಂಚರಿಸಿ ಗ್ರಂಥಾಲಯ ಸ್ಥಿತಿ-ಗತಿಗಳನ್ನು ಪರಿಶೀಲಿಸಿ ೧೯೫೯ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಭಾರತ ಸರಕಾರವು ವರದಿಯನ್ನೇನೋ ಸ್ವೀಕರಿಸಿತು. ಆದರೆ ಅದನ್ನು ಕಾರ್ಯರೂಪಕ್ಕೆ ತರದೆ ೧೯೬೦ರಲ್ಲಿ ಇನ್ನೊಂದು ಸಮಿತಿಯನ್ನು ನೇಮಿಸಿ ಮಾದರಿ ಗ್ರಂಥಾಲಯ ಮಸೂದೆಯನ್ನು ರಚಿಸಲು ಸೂಚಿಸಿತು. ಈ ಸಮಿತಿಯು ತನ್ನ ವರದಿಯನ್ನು ೧೯೬೩ರಲ್ಲಿ ಕೇಂದ್ರ ಶಿಕ್ಷಣ ಸಚಿವಾಲಯಕ್ಕೆ ಸಲ್ಲಿಸಿತು. ಇದನ್ನು 'ಮಾದರಿ ಗ್ರಂಥಾಲಯ ಮಸೂದೆ ೧೯೬೩' ಎಂದು ಕರೆಯಲಾಯಿತು.

**ಇದರ ಮುಖ್ಯ ಅಂಶಗಳು**

೧) ರಾಜ್ಯಗಳಲ್ಲಿ ಗ್ರಂಥಾಲಯಗಳ ಸ್ಥಾಪನೆ, ಅಭಿವೃದ್ಧಿ ಮತ್ತು ನಿರ್ವಹಣೆಗಳ ಬಗ್ಗೆ ಸಲಹೆ.
೨) ಪ್ರತಿ ಹಂತದಲ್ಲೂ ಗ್ರಂಥಾಲಯ ಸಮಿತಿ ಇರಬೇಕೆಂಬ ಸಲಹೆ.
೩) ಗ್ರಂಥಾಲಯ ಕರವನ್ನು ವಿಧಿಸುವ ಬಗ್ಗೆ ಸಲಹೆ.
೪) ಖಾಸಗಿ ಗ್ರಂಥಾಲಯಗಳಿಗೆ ಅನುದಾನವನ್ನು ಕೊಡುವುದರ ಮೂಲಕ ಗ್ರಂಥಾಲಯಗಳನ್ನು ಅಭಿವೃದ್ಧಿಪಡಿಸುವ ಬಗ್ಗೆ ಸಲಹೆ.
೫) ಗ್ರಂಥಾಲಯ ಇಲಾಖೆಗೆ ಸ್ವತಂತ್ರ ನಿರ್ದೇಶನಾಲಯವಿರಬೇಕೆಂಬ ಶಿಫಾರಸ್ಸುಗಳು.

ಸಾರ್ವಜನಿಕ ಗ್ರಂಥಾಲಯ ಕಾಯಿದೆಯನ್ನು ಜಾರಿಗೆ ತರಬೇಕೆನ್ನುವುದು ಕೇಂದ್ರ ಸರಕಾರದ ಅಭಿಪ್ರಾಯವಾಗಿದೆ. ಆದರೆ ಕೇಂದ್ರ ಸರಕಾರವು ರಾಜ್ಯಗಳ ಮೇಲೆ ಒತ್ತಡ ತರುವ ಹಾಗಿಲ್ಲ. ಕಾರಣ, ಅದು ರಾಜ್ಯ ಸರಕಾರದ ವ್ಯಾಪ್ತಿಯಲ್ಲಿದ್ದು ಸಂವಿಧಾನದ ಸಮವರ್ತಿ ಪಟ್ಟಿಯಲ್ಲಿಲ್ಲದೆ ಇರುವುದು. ಆದುದರಿಂದ ಕೇಂದ್ರ ಸರಕಾರವು ಗ್ರಂಥಾಲಯ ಕಾಯಿದೆ ಯನ್ನು ಜಾರಿಗೆ ತರುವುದನ್ನು ಆಯಾ ರಾಜ್ಯಗಳಿಗೇ ಬಿಟ್ಟಿತು. ಆದರೆ ಸ್ವಲ್ಪ ಮಟ್ಟಿನ ಆರ್ಥಿಕ ಸಹಾಯವನ್ನು ರಾಜಾ ರಾಮ್‌ಮೋಹನ್ ರಾಯ್ ಗ್ರಂಥಾಲಯ ಪ್ರತಿಷ್ಠಾನದ ಮೂಲಕ ಸಾರ್ವಜನಿಕ ಗ್ರಂಥಾಲಯಗಳಿಗೆ ಒದಗಿಸಲು ತೀರ್ಮಾನಿಸಿತು.

**ಕರ್ನಾಟಕ ರಾಜ್ಯ ಸಾರ್ವಜನಿಕ ಗ್ರಂಥಾಲಯ ಕಾಯಿದೆ ೧೯೬೫**

ಸಾರ್ವಜನಿಕ ಗ್ರಂಥಾಲಯ ಕಾಯಿದೆ ಜಾರಿಗೆ ತರುವುದರಲ್ಲಿ ಕರ್ನಾಟಕ ಮೂರನೆಯದು. ೧೯೫೬ರಲ್ಲಿ ಕರ್ನಾಟಕ ರಾಜ್ಯ ಉದಯವಾಯಿತು. ೧೯೫೮ರಲ್ಲಿ ಅಖಿಲ ಕರ್ನಾಟಕ ಗ್ರಂಥಾಲಯ ಸಮ್ಮೇಳನ ಧಾರವಾಡದಲ್ಲಿ ನಡೆಯಿತು. ಸಮ್ಮೇಳನದಲ್ಲಿ ಕೆಲವು ನಿರ್ಣಯಗಳನ್ನು ಅಂಗೀಕರಿಸಲಾಯಿತು. ಅವುಗಳಲ್ಲಿ ಎರಡು ಹೀಗಿವೆ :

೧) ಕರ್ನಾಟಕದಲ್ಲಿ ಗ್ರಂಥಾಲಯ ಕಾಯಿದೆಯನ್ನು ಅಂಗೀಕರಿಸಿ ಜಾರಿಗೊಳಿಸುವಂತೆ ರಾಜ್ಯ ಸರಕಾರವನ್ನು ಒತ್ತಾಯಿಸುವುದು.

೨) ಕರ್ನಾಟಕ ಗ್ರಂಥಾಲಯ ಸಂಘದ ಘಟಕವನ್ನು ಸಮಸ್ತ ನೂತನ ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಂತೆ ತಿದ್ದಿ ವಿಸ್ತರಿಸುವುದು.

ರಾಜ್ಯದಲ್ಲಿ ಗ್ರಂಥಾಲಯ ಆಡಳಿತ ವ್ಯವಸ್ಥೆಯನ್ನು ಏಕರೂಪದಲ್ಲಿ ತರಲು ''ಮಾದರಿ ಗ್ರಂಥಾಲಯ ಮಸೂದೆ''ಯನ್ನು ರಚಿಸಲು ಡಾ॥ ಎಸ್. ಆರ್. ರಂಗನಾಥನ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ೧೯೬೨ರಲ್ಲಿ ರಚಿಸಿತು. ಈ ಸಮಿತಿಯ ವರದಿಯನ್ನಾಧರಿಸಿ ಕೆಲವು ತಿದ್ದುಪಡಿಗಳೊಂದಿಗೆ ೧೯೬೫ರಲ್ಲಿ ಶಾಸನವೊಂದು ಬಂದಿತು. ಅದಕ್ಕೆ ರಾಷ್ಟ್ರಪತಿಯವರು ೧೯೬೫ರಲ್ಲಿ ತಮ್ಮ ಅಂಕಿತವನ್ನು ಹಾಕಿದರು.

**ಗ್ರಂಥಾಲಯ ಇಲಾಖೆಯ ಸಾಧನೆ**

ಕರ್ನಾಟಕದಲ್ಲಿ ಸಾರ್ವ ಜನಿಕ ಗ್ರಂಥಾಲಯ ಕಾಯಿದೆ ಜಾರಿಗೆ ಬಂದು ೩೮ ವರ್ಷ ಗಳಾದವು. ೨೦೦೧ರ ಜನ ಗಣತಿ ಪ್ರಕಾರ ರಾಜ್ಯದ ಜನಸಂಖ್ಯೆ ೫,೨೭,೩೩,೯೫೮. ಇದರಲ್ಲಿ ೨,೬೮,೫೬,೨೪೩ ಪುರುಷರು ಮತ್ತು ಮಹಿಳೆಯರು ೨,೫೮,೭೭,೬೧೫. ಸಾಕ್ಷರತಾ ಪ್ರಮಾಣ ಶೇ. ೬೭.೦೧. ಇತ್ತೀಚಿನ ಸಮೀಕ್ಷೆಯ ಪ್ರಕಾರ ರಾಜ್ಯದಲ್ಲಿ ಒಂದು ರಾಜ್ಯ ಕೇಂದ್ರ ಗ್ರಂಥಾಲಯ, ಒಂದು ಸಾರ್ವಜನಿಕ ತಾಂತ್ರಿಕ ಗ್ರಂಥಾಲಯ, ೨೦ ಜಿಲ್ಲಾ ಗ್ರಂಥಾಲಯ, ೧೫ ನಗರ ಕೇಂದ್ರ, ೩೩೪ ಶಾಖಾ, ೩೦೦೦ ಗ್ರಾಮೀಣ ಗ್ರಂಥಾಲಯ, ೧೯೨೨ ರಾಜಾರಾಮ್ ಮೋಹನ್ ರಾಯ್ ಪ್ರತಿಷ್ಠಾನ ಕೇಂದ್ರ, ೧೫೦ ಸೇವಾ ಕೇಂದ್ರಗಳು, ೧೧ ಸಂಚಾರಿ, ೪೦ ಅನುದಾನಿತ, ೪೦ ಆಸ್ಪತ್ರೆ ಮತ್ತು ಕಾರಾಗೃಹ ಗ್ರಂಥಾಲಯಗಳು ಮತ್ತು ಒಂದು ಮಕ್ಕಳ ಗ್ರಂಥಾಲಯ, ೨೪ ಇತರೆ ಗ್ರಂಥಾಲಯಗಳು ಕಾರ್ಯ ನಿರ್ವಹಿಸುತ್ತಿವೆ.

ರಾಜ್ಯದಲ್ಲಿ ಗ್ರಂಥಾಲಯ ಕಾಯಿದೆ ಜಾರಿಗೆ ಬಂದ ಮೇಲೆ ಆಗಲೇ ಅಸ್ತಿತ್ವದಲ್ಲಿದ್ದ ಎರಡು ಪ್ರಮುಖ ಗ್ರಂಥಾಲಯಗಳನ್ನು ಕರ್ನಾಟಕ ಸರಕಾರ ಗ್ರಂಥಾಲಯ ಕಾಯಿದೆಯಡಿಯಲ್ಲಿ ತನ್ನ ವಶಕ್ಕೆ ತೆಗೆದುಕೊಂಡಿತು. ಬೆಂಗಳೂರಿನ ಗ್ರಂಥಾಲಯವನ್ನು ರಾಜ್ಯ ಕೇಂದ್ರ ಗ್ರಂಥಾಲಯ ವೆಂತಲೂ, ಮೈಸೂರಿನ ಗ್ರಂಥಾಲಯವನ್ನು ಜಿಲ್ಲಾ ಕೇಂದ್ರ ಗ್ರಂಥಾಲಯವೆಂತಲೂ ಘೋಷಿಸ ಲಾಯಿತು. ಬೆಂಗಳೂರಿನ ರಾಜ್ಯ ಕೇಂದ್ರ ಗ್ರಂಥಾಲಯವು ೧೯೮೬ರವರೆಗೆ ಎಲ್ಲಾ ಗ್ರಂಥಾಲಯ ಗಳಂತೆ ಸೇವೆಯನ್ನು ಒದಗಿಸುತ್ತಿತ್ತು. ೧೯೮೬ರ ನಂತರ ಪರಾಮರ್ಶನ ಗ್ರಂಥಾಲಯವಾಗಿ ಪರಿವರ್ತಿಸಲಾಯಿತು. ಹಾಗಾಗಿ ಇಲ್ಲಿ ಪುಸ್ತಕಗಳನ್ನು ಎರವಲು ಪಡೆಯುವ ಹಾಗಿಲ್ಲ.

ಇನ್ನು ರಾಜ್ಯದಲ್ಲಿ ಸಾರ್ವಜನಿಕ ಗ್ರಂಥಾಲಯಕ್ಕೆ ಸರಕಾರದ ವೆಚ್ಚವನ್ನು ನೋಡೋಣ. ೨೦೦೦-೨೦೦೧ ರಲ್ಲಿ ೧೫.೦೪ ಕೋಟಿ ರೂ. ವೆಚ್ಚ ಮಾಡಲಾಗಿದ್ದು, ಇದರಲ್ಲಿ ಸಿಬ್ಬಂದಿ ಗಳ ವೇತನ, ಕಛೇರಿ ವೆಚ್ಚ ಇತರೆ ಖರ್ಚುಗಳಿಗೆ ೧೧.೨೮ ಕೋಟಿ. ಉಳಿದ ೩.೮೨ ಕೋಟಿ ಪುಸ್ತಕಗಳನ್ನು ಕೊಳ್ಳಲು ವ್ಯಯಿಸಲಾಯಿತು.

ಜಿಲ್ಲಾ ಗ್ರಂಥಾಲಯ, ರಾಜ್ಯ ಗ್ರಂಥಾಲಯ, ರಾಜಾರಾಮ್ ಮೋಹನ್‌ರಾಯ್ ಗ್ರಂಥಾಲಯಗಳಿಗೆ ಸಹಾಯ ಧನವೆಂದು ೧೯೯೯-೨೦೦೦ದಲ್ಲಿ ೮೨ ಲಕ್ಷ ರೂ.ಗಳನ್ನು, ೨೦೦೧-೦೨ರಲ್ಲಿ ೭೫ ಲಕ್ಷ ವೆಚ್ಚ ಮಾಡಲಾಗಿದ್ದು, ೨೦೦೧-೦೨ರಲ್ಲಿ ೮೨ ಲಕ್ಷ ರೂ.ಗಳನ್ನು ಕಾಯ್ದಿರಿಸಲಾಗಿತ್ತು.

**ರಾಜ್ಯದಲ್ಲಿರುವ ಗ್ರಂಥಾಲಯಗಳ ಪುಸ್ತಕ ಸಂಗ್ರಹ**

೧೮೧೭ರಲ್ಲಿ ಪ್ರಥಮವಾಗಿ ಅಚ್ಚಾದ ಕನ್ನಡ ಪುಸ್ತಕ ''ಎ ಗ್ರಾಮರ್ ಆಫ್ ದಿ ಕರ್ನಾಟಕ ಲ್ಯಾಂಗ್‌ವೇಜ್.'' ಅಂದಿನಿಂದ ೧೯೯೫ರವರೆಗೆ (೧೭೮ ವರ್ಷ) ಒಟ್ಟು ೮೦ ಸಾವಿರ ಕನ್ನಡ ಪುಸ್ತಕಗಳು ಹೊರಬಂದಿವೆ. ೩೧.೦೩.೯೫ರಷ್ಟು ಹೊತ್ತಿಗೆ ಕರ್ನಾಟಕದ ಎಲ್ಲಾ ಗ್ರಂಥಾಲಯಗಳ ಒಟ್ಟು ಸಂಗ್ರಹ ೯೦ ಲಕ್ಷ. ಸದಸ್ಯರ ಸಂಖ್ಯೆ ೬.೫೪ ಲಕ್ಷ. ಗ್ರಂಥಾಲಯಗಳಿಗೆ ಭೇಟಿ ಕೊಡುವವರ ಸಂಖ್ಯೆ ೮ರಿಂದ ೧೦ ಲಕ್ಷ. ದಿನಂಪ್ರತಿ ೩.೧೫ ಲಕ್ಷ ಪುಸ್ತಕಗಳನ್ನು ಎರವಲು ಕೊಡಲಾಗುತ್ತದೆ. ನಾವು ಮುಂದುವರಿದ ದೇಶ ಅಮೆರಿಕಾದಲ್ಲಿರುವ ನ್ಯೂಯಾರ್ಕ್‌ನ ಕೇಂದ್ರ ಗ್ರಂಥಾಲಯದ ಸಂಗ್ರಹಣೆ ನೋಡಿದರೆ ಆಶ್ಚರ್ಯ ಪಡಬೇಕಾಗುತ್ತದೆ. ೧೯೮೭ರಲ್ಲಿ ಅಲ್ಲಿನ ಗ್ರಂಥಾಲಯದ ಪುಸ್ತಕಗಳ ಸಂಗ್ರಹಣೆ ೧,೧೯,೪೯,೩೩೩. ೧,೪೪,೬೬,೪೭೮ ಹಸ್ತಪ್ರತಿಗಳು ಮತ್ತು ೩,೬೩,೬೭೧ ಭೂಪಟ ಗಳನ್ನು ಹೊಂದಿತ್ತು. ಇನ್ನು ಪುಟ್ಟ ದೇಶವಾದ ಫಿನ್‌ಲ್ಯಾಂಡ್‌ಗೆ ಬರೋಣ. ಅಲ್ಲಿಯ ರಾಷ್ಟ್ರೀಯ ಗ್ರಂಥಾಲಯದ ಪುಸ್ತಕಗಳ ಸಂಗ್ರಹಣೆ ೩೦ ಲಕ್ಷ. ಅಷ್ಟೇ ಪ್ರಮಾಣದ ಹಸ್ತಪ್ರತಿಗಳಿವೆ. ಅಲ್ಲಿನ ಜನಸಂಖ್ಯೆ ೫೦ ಲಕ್ಷ ಮಾತ್ರ.

**ಸಿಬ್ಬಂದಿಗಳ ಮತ್ತು ಗ್ರಂಥಾಲಯಗಳ ಕೊರತೆ**

ರಾಜ್ಯದಲ್ಲಿ ಗ್ರಂಥಾಲಯಗಳ ಮತ್ತು ಸಿಬ್ಬಂದಿಗಳ ಕೊರತೆಯನ್ನು ನಾವು ಗಮನಿಸ ಬಹುದು. ಅಂತರರಾಷ್ಟ್ರೀಯ ಸಂಯುಕ್ತ ಗ್ರಂಥಾಲಯ ಸಂಘದ ಪ್ರಕಾರ ಪ್ರತಿ ಎರಡು ಸಾವಿರ ಪ್ರಜೆಗಳಿಗೆ ಒಬ್ಬ ಕೆಲಸಗಾರನಿರಬೇಕು. ಅದರಂತೆ ೨೨,೫೦೦ಕ್ಕೂ ಹೆಚ್ಚು ಕೆಲಸಗಾರರಿರ ಬೇಕು. ಆದರೆ ಈಗ ಕೆಲಸ ಮಾಡುತ್ತಿರುವವರ ಸಂಖ್ಯೆ ೫,೬೩೦ (ಇದರಲ್ಲಿ ಗ್ರಂಥಾಲಯ ಮೇಲ್ವಿಚಾರಕರೂ ಸೇರಿದ್ದಾರೆ). ಅದೇ ರೀತಿ ರಾಜ್ಯಕ್ಕೆ ಬೇಕಾಗಿರುವ ಗ್ರಂಥಾಲಯಗಳ ಸಂಖ್ಯೆ ೧೫ ಸಾವಿರ, ಆದರೆ ಹಾಲೀ ಇರುವ ಗ್ರಂಥಾಲಯಗಳ ಸಂಖ್ಯೆ ೫,೬೩೦.

ಭಾರತ ದೇಶದ ಗ್ರಂಥಾಲಯ ಚಳುವಳಿಯಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಬಹು

ಪ್ರಮುಖ ಪಾತ್ರವನ್ನು ನಿರ್ವಹಿಸಿವೆ. ಪಶ್ಚಿಮ ಬಂಗಾಳ, ಕೇರಳದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಪಾತ್ರವನ್ನು ನಾವು ಹೆಚ್ಚಾಗಿ ಕಾಣಬಹುದು. ಕರ್ನಾಟಕದಲ್ಲಿ ಕೇರಳದಲ್ಲಿದ್ದಂತೆ ಸ್ವಯಂ ಸೇವಾ ಸಂಸ್ಥೆಗಳು ಪಾತ್ರವಹಿಸದಿದ್ದರೂ ಸ್ವಲ್ಪಮಟ್ಟಿನ ಪಾತ್ರವನ್ನು ಗ್ರಂಥಾಲಯ ಚಳುವಳಿಯಲ್ಲಿ ನಿಭಾಯಿಸಿವೆಯೆಂದು ಹೇಳಬಹುದು.

''ಗ್ರಂಥಗಳು ಎಲ್ಲರಿಗಾಗಿ'' ಸೂತ್ರ ಯಶಸ್ವಿಯಾಗಬೇಕಾದರೆ ಗ್ರಾಮೀಣ ಹಂತದಿಂದಲೇ ಗ್ರಂಥಾಲಯಗಳು ಪ್ರಾರಂಭವಾಗಬೇಕೆಂಬುದು ರಂಗನಾಥನ್‌ರವರ ಬಯಕೆಯಾಗಿತ್ತು. ಆದ್ದರಿಂದ, ''ಪ್ರತಿ ಮೂರು ಸಾವಿರ ಜನಸಂಖ್ಯೆಗೊಂದು ಗ್ರಂಥಾಲಯ ಇರಬೇಕು. ಇದು ರಾಷ್ಟ್ರೀಯ ನೀತಿ ಕೂಡ ಆಗಬೇಕು,'' ಎಂದರು. ಈ ದಿಸೆಯಲ್ಲಿ ನಮ್ಮ ರಾಜ್ಯ ಸರಕಾರವೂ ಗ್ರಾಮೀಣ ಗ್ರಂಥಾಲಯಗಳನ್ನು ಸ್ಥಾಪಿಸುತ್ತಿದೆ. ಆದರೆ ಬೆಳವಣಿಗೆಯು ಬಹಳ ನಿಧಾನವಾಗಿದೆ.

ಡಾ|| ರಂಗನಾಥನ್ ಅವರ ಕನಸು ನಿಜವಾಗಿಸಬೇಕು, ಅಥವಾ ಹಳ್ಳಿಗಳಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಬೇಕು ಎಂಬ ಉದ್ದೇಶದಿಂದ ಒಂದು ಸಂಸ್ಥೆ ಸ್ಥಾಪನೆಗೊಂಡಿದೆ. ಅದೇ ರಾಮಕ್ಕ ಪದ್ಮಕ್ಕ ಸೇವಾ ನಿಧಿ. ಈ ಸೇವಾ ನಿಧಿಯು ಕುಗ್ರಾಮಗಳಲ್ಲಿ ಗ್ರಂಥಾಲಯಗಳನ್ನು ಸ್ಥಾಪಿಸಬೇಕು ಮತ್ತು ಸಾರ್ವಜನಿಕ ಗ್ರಂಥಾಲಯಗಳಿಗೆ ಆರ್ಥಿಕ, ನೈತಿಕ ಮತ್ತು ಮಾನಸಿಕ ಬೆಂಬಲ ಕೊಡಬೇಕೆಂಬ ಹಂಬಲದಿಂದ ಸ್ಥಾಪನೆಗೊಂಡಿದೆ. ಇದರ ರೂವಾರಿ ಡಾ|| ಕೆ. ಎಸ್. ಉಮಾಪತಿಯವರು. ಅಮೆರಿಕಾದ ಫಿಲಡೆಲ್ಫಿಯಾದಲ್ಲಿ ಗ್ರಂಥಾಲಯ ವಿಜ್ಞಾನಿಯಾಗಿ ಸೇವೆ ಸಲ್ಲಿಸಿರುವ ಇವರು ಭಾರತಕ್ಕೆ ಹಿಂದಿರುಗಿದ ಮೇಲೆ ಆಯ್ದುಕೊಂಡ ಪ್ರಥಮ ಕ್ಷೇತ್ರ ಗ್ರಾಮೀಣ ಗ್ರಂಥಾಲಯಗಳ ಬೆಳವಣಿಗೆ.

**ಗ್ರಂಥಾಲಯ ಚಳುವಳಿಯಲ್ಲಿ ಪುಸ್ತಕೋದ್ಯಮದ ಪಾತ್ರ**

ಗ್ರಂಥಾಲಯ ಚಳುವಳಿಯು ಸಾರ್ಥಕವಾಗಬೇಕಾದರೆ ಪುಸ್ತಕೋದ್ಯಮದ ಪಾತ್ರವೂ ಬಹಳ ಮುಖ್ಯ. ಈ ಹಿಂದೆ ಹೇಳಿದಂತೆ ಕನ್ನಡದಲ್ಲಿ ಪ್ರಥಮ ಪುಸ್ತಕ ''ಎ ಗ್ರಾಮರ್ ಆಫ್ ಕರ್ನಾಟಕ ಲ್ಯಾಂಗ್‌ವೇಜ್'' (೧೮೧೭) ಪ್ರಕಟವಾಗಿ ೧೯೯೫ರವರೆಗೆ ೮೦ ಸಾವಿರ ಪುಸ್ತಕಗಳು ಹೊರಬಂದಿವೆ. ಆದರೆ ಕರ್ನಾಟಕದಲ್ಲಿರುವ ಎಲ್ಲಾ ಸಾರ್ವಜನಿಕ ಗ್ರಂಥಾಲಯಗಳ ಒಟ್ಟು ಸಂಗ್ರಹ ೯೦ ಲಕ್ಷ. ಇದರಲ್ಲಿ ಎಲ್ಲ ಭಾಷೆಯ ಪುಸ್ತಕಗಳೂ ಸೇರಿವೆ. ಅದೇ ರೀತಿ ರಾಜ್ಯ ಕೇಂದ್ರ ಗ್ರಂಥಾಲಯದಲ್ಲಿ ಪುಸ್ತಕಗಳ ಒಟ್ಟು ಸಂಗ್ರಹ ೨,೪೭,೦೬೮. ಇದರಲ್ಲಿ ಗ್ರಂಥ ಸ್ವಾಮ್ಯದ ಗ್ರಂಥಗಳು ೧,೦೪,೩೧೨. ಬರೀ ರಾಜಧಾನಿ ಬೆಂಗಳೂರಿನ ಜನಸಂಖ್ಯೆಯನ್ನೇ ಗಣನೆಗೆ ತೆಗೆದುಕೊಂಡರೆ ಕೇಂದ್ರ ಗ್ರಂಥಾಲಯ ಸಂಗ್ರಹ ಬಹಳವೇ ಕಡಿಮೆ ಎನ್ನಬಹುದು. ಕಾರಣ ಕರ್ನಾಟಕದಲ್ಲಿ ಪ್ರಕಟವಾದ ಪುಸ್ತಕಗಳು ಗ್ರಂಥಸ್ವಾಮ್ಯದ ಪ್ರಕಾರ ಕೇಂದ್ರ ಗ್ರಂಥಾಲಯಕ್ಕೆ ಸೇರುತ್ತಿಲ್ಲ. ಇದಕ್ಕೆ ಕೆಲವು ಲೇಖಕರ ಪಾಲೂ ಇರಬಹುದು. ಕೆಲವು ಅಂಕಿಅಂಶಗಳ ಪ್ರಕಾರ ಕನ್ನಡ ಪುಸ್ತಕಗಳ ಪ್ರಕಟಣೆ ದೇಶದ ಒಟ್ಟು ಪುಸ್ತಕ ಪ್ರಕಟಣೆಯಲ್ಲಿ ಶೇ. ೩ರಷ್ಟು ಮಾತ್ರ. ಕನ್ನಡ ಪುಸ್ತಕೋದ್ಯಮಕ್ಕೆ ಸಂಬಂಧಪಟ್ಟಂತೆ ಒಳ್ಳೆಯ ಹೆಸರನ್ನು ಪಡೆದಂತಹವರು ಮನೋಹರ ಗ್ರಂಥಮಾಲೆ, ಸಮಾಜ ಪುಸ್ತಕಾಲಯ, ನವಕರ್ನಾಟಕ ಪಬ್ಲಿಕೇಷನ್ಸ್, ಕಾವ್ಯಾಲಯ ಪ್ರಕಾಶನ, ಗೀತಾ ಬುಕ್ ಹೌಸ್, ಐ.ಬಿ.ಹೆಚ್. ಪ್ರಕಾಶನ, ಅಕ್ಷರ ಪ್ರಕಾಶನ, ಪುಸ್ತಕ ಪ್ರಕಾಶನ ಮತ್ತು ಸಾಹಿತ್ಯ ಭಂಡಾರ.



*ಗ್ರಂಥಾಲಯದಲ್ಲಿ ಅಭ್ಯಾಸನಿರತ*

ರಾಜ್ಯದ ಸ್ವಾಯತ್ತ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ಪ್ರಸಾರಣಾ ವಿಭಾಗಗಳನ್ನು ಹೊಂದಿವೆ. ಕರ್ನಾಟಕದಲ್ಲಿರುವ ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಕನ್ನಡ ಪುಸ್ತಕ ಪ್ರಾಧಿಕಾರ ಪುಸ್ತಕ ಪ್ರಕಟಣಾ ಕೈಂಕರ್ಯವನ್ನು ಕೈಗೊಂಡಿವೆ. ಆದರೆ ಇವುಗಳಿಂದ ಉತ್ತಮ ಪುಸ್ತಕಗಳು ಸುಲಭ ಬೆಲೆಯಲ್ಲಿ ಪ್ರಕಟವಾದರೂ ಹೊಸ ಶೀರ್ಷಿಕೆಗಳು ಯಾವುವು ಎಂದು ತಿಳಿಯುವುದೇ ಪ್ರಯಾಸದ ಕೆಲಸವಾಗುತ್ತದೆ.

ಪುಸ್ತಕೋದ್ಯಮ ಬೆಳೆಯಲು ಗ್ರಂಥಾಲಯಗಳ ಪಾತ್ರವೂ ಬಹಳ ಮುಖ್ಯ. ಇಂದಿಗೂ ಗ್ರಂಥಾಲಯಗಳು ಪುಸ್ತಕ ಪ್ರಕಾಶಕರಿಗೆ ಮತ್ತು ಲೇಖಕರಿಗೆ ಆಶ್ರಯ ನೀಡಬೇಕಾದ ಮುಖ್ಯ ಸಂಸ್ಥೆಗಳು. ಯಾವ ಗ್ರಂಥಾಲಯಗಳಿಗೆ ಯಾವ ರೀತಿಯ ಪುಸ್ತಕಗಳು ಅಗತ್ಯ ಎಂಬುದನ್ನು ಪರಿಗಣಿಸಬೇಕು. ಇದಕ್ಕೆ ಅಲ್ಲಿನ ಓದುಗರನ್ನು ಸಂಪರ್ಕಿಸಿ ಸಲಹೆಗಳನ್ನು ಪಡೆಯಬೇಕು. ಪುಸ್ತಕಗಳನ್ನು ಗ್ರಂಥಾಲಯಗಳು ಕೊಳ್ಳುವಾಗ ಪುಸ್ತಕದ ಗಾತ್ರ, ಅದರಲ್ಲಿ ಉಪಯೋಗಿಸಿದ ಕಾಗದ, ಇಂತಹ ಮುದ್ರಣವಿದ್ದರೆ ಇಷ್ಟು ಬೆಲೆ ಎಂದು ನಿಗದಿಪಡಿಸಿದರೆ ಈಗಿನ ಭ್ರಷ್ಟಾಚಾರವನ್ನು ಆದಷ್ಟು ಕಡಿಮೆ ಮಾಡಬಹುದು.

ರಾಜ್ಯದಲ್ಲಿ ಗ್ರಂಥಾಲಯಗಳಿಗೆ ಪುಸ್ತಕಗಳನ್ನು ಒದಗಿಸಲು ಸಗಟು ಖರೀದಿಯನ್ನು ರಾಜ್ಯ ಕೇಂದ್ರ ಗ್ರಂಥಾಲಯ, ನಗರ ಕೇಂದ್ರ ಗ್ರಂಥಾಲಯ, ಜಿಲ್ಲಾ ಕೇಂದ್ರ ಗ್ರಂಥಾಲಯ, ರಾಜಾ ರಾಮ್‌ಮೋಹನ ರಾಯ್ ಪ್ರತಿಷ್ಠಾನ, ವಯಸ್ಕರ ಶಿಕ್ಷಣ ಯೋಜನೆ, ಕಪ್ಪುಹಲಗೆ ಯೋಜನೆ, ಇತ್ಯಾದಿ ಇದ್ದು ಪುಸ್ತಕಗಳ ಆಯ್ಕೆ ಬೇರೆ ಬೇರೆ ಸಮಿತಿಗಳಿಂದ ನಡೆಯುತ್ತದೆ. ಪ್ರಭಾವ ಬೀರಬಲ್ಲ ಪ್ರಕಾಶಕರು ತಮ್ಮ ಎಲ್ಲಾ ಪುಸ್ತಕಗಳನ್ನು ಎಲ್ಲಾ ಯೋಜನೆಗಳಲ್ಲಿ ತುರುಕಬಲ್ಲರು. ಇನ್ನು ಸಣ್ಣ ಪ್ರಕಾಶಕರು, ಲೇಖಕರ ಪಾಡು ಕೇಳುವವರು ಇರುವುದಿಲ್ಲ. ಇದರ ಜೊತೆಗೆ ಕೃತಿ ಚೌರ್ಯದ ಪುಸ್ತಕ ಪ್ರಕಾಶಕರು ತಮ್ಮ ಪುಸ್ತಕಗಳನ್ನು ಗ್ರಂಥಾಲಯಗಳಿಗೆ ತೂರಿಸುವುದರಲ್ಲಿ ನಿಪುಣರಾಗಿರುತ್ತಾರೆ. ಹಾಗಾಗಿ ಉತ್ತಮ ಪುಸ್ತಕಗಳು ಸಾರ್ವಜನಿಕ ಗ್ರಂಥಾಲಯಗಳಿಗೆ ಸೇರುವುದು ಅಪರೂಪವಾಗುತ್ತದೆ.

ಪುಸ್ತಕೋದ್ಯಮದ ಇನ್ನೊಂದು ಕೊರತೆ ಎಂದರೆ ಬ್ರಿಟನ್, ಅಮೆರಿಕಾ, ಮತ್ತು ಇತರೆ ಮುಂದುವರಿದ ದೇಶಗಳಲ್ಲಿ ಪ್ರಕಟವಾಗುವಂತಹ ಸಮಗ್ರ ಗ್ರಂಥಸೂಚಿ ಪತ್ರಿಕೆಗಳು ಕನ್ನಡದಲ್ಲಿ ಬರುತ್ತಿಲ್ಲ. ಹಿಂದೆ 'ಗ್ರಂಥಲೋಕ' ಎಂಬ ಪತ್ರಿಕೆ ಬರುತ್ತಿದ್ದು, ಆರ್ಥಿಕ ಸಂಕಷ್ಟದಿಂದ ನಿಂತುಹೋಯಿತು. ಈಗ ಕನ್ನಡ ವಿಶ್ವವಿದ್ಯಾಲಯ ಪ್ರಸಾರಾಂಗವು 'ಪುಸ್ತಕ ಮಾಹಿತಿ' ಎಂಬ ಮಾಸಿಕ ಪತ್ರಿಕೆಯನ್ನು ಪ್ರಕಟಿಸುತ್ತಿದೆ. ಆದರೆ ಇದರಲ್ಲಿ ಪ್ರಕಟವಾದ ಎಲ್ಲಾ ಪುಸ್ತಕಗಳ ಮಾಹಿತಿ ಇರುವುದಿಲ್ಲ.

**ಗ್ರಂಥಾಲಯ ಚಳುವಳಿಯಲ್ಲಿ ಕಟ್ಟಡ ಮತ್ತು ಗ್ರಂಥಾಲಯ ಸಿಬ್ಬಂದಿಗಳು**

ಯಾವುದೇ ಒಂದು ಗ್ರಂಥಾಲಯಕ್ಕೆ ಓದುಗರನ್ನು ಆಕರ್ಷಿಸಬೇಕಾದರೆ ಕಟ್ಟಡದ ಪರಿಸರ ಮತ್ತು ಕಟ್ಟಡವೂ ಬಹಳ ಮುಖ್ಯ. ಅದರ ಜೊತೆಯಲ್ಲಿ ಅಲ್ಲಿನ ಸಿಬ್ಬಂದಿಗಳ ಕಾರ್ಯತತ್ಪರತೆಯೂ ಮುಖ್ಯ ಅಂಶವಾಗುತ್ತದೆ. ಗ್ರಂಥಾಲಯ ಸಿಬ್ಬಂದಿಗಳು ಪುಸ್ತಕ ಮತ್ತು ಓದುಗರ ನಡುವೆ ಸೇತುಬಂಧ ವಿದ್ದಂತೆ. ಈ ಸೇತುಬಂಧ ಚೆನ್ನಾಗಿ ಕೆಲಸ ಮಾಡಬೇಕಾದರೆ ಅವರಿಗೆ ಒಳ್ಳೆಯ ವೇತನ ಸೌಲಭ್ಯ ಮತ್ತು ಒಳ್ಳೆಯ ವಾತಾವರಣ ವಿರಬೇಕು. ಗ್ರಂಥಾಲಯಕ್ಕೆ ಓದುಗರು ಬರಬೇಕಾದರೆ ಗ್ರಂಥಾಲಯವು ಒಳ್ಳೆಯ ಪರಿಸರದಲ್ಲಿರಬೇಕು. ನಮ್ಮ ದೇಶದ ಕೆಲವು ಸಾರ್ವಜನಿಕ ಗ್ರಂಥಾಲಯಗಳು ಇರುವ ಸ್ಥಳವನ್ನು ನೋಡಿದರೆ, ಅಲ್ಲಿ ಸೋರುವ ಮೇಲ್ಛಾವಣಿ, ಧೂಳು ಹಿಡಿದ ಪುಸ್ತಕಗಳು, ಕಟ್ಟಡದ ಸುತ್ತಲಿರುವ ಕಸ ಇದು ಸಾಮಾನ್ಯವಾಗಿ ಕಾಣುವ ದೃಶ್ಯ. ಅಲ್ಲದೆ, ಗ್ರಂಥಾಲಯದ ಒಳ ಆವರಣದಲ್ಲಿ ಸುಣ್ಣ ಬಣ್ಣವಿಲ್ಲದ ಗೋಡೆಗಳು ಓದುಗರನ್ನು ಆಕರ್ಷಿಸುವ ಬದಲು, ಅಲ್ಲಿಂದ ಯಾವಾಗ ಹೊರಹೋಗುತ್ತೇವೆಯೋ ಎನಿಸುವುದಕ್ಕೆ ಕಾರಣವಾಗುತ್ತಿವೆ.

ಗ್ರಂಥಾಲಯ ಸಿಬ್ಬಂದಿಯವರು ತಮ್ಮ ಕರ್ತವ್ಯವನ್ನು ಸರಿಯಾದ ರೀತಿಯಲ್ಲಿ ನಿಭಾಯಿಸಬೇಕಾಗುತ್ತದೆ. ವೇತನ ಬೇಡಿಕೆ, ಪದೋನ್ನತಿಗಳ ಬೇಡಿಕೆ, ಸೌಲಭ್ಯಗಳು ಮಾತ್ರ ಮುಖ್ಯವಲ್ಲ. ಓದುಗರನ್ನು ಆಕರ್ಷಿಸಲು ಅವರ ನಡೆವಳಿಕೆ ಬಹಳ ಮುಖ್ಯ.

ಜನಸಾಮಾನ್ಯರಾಗಿ ನಾವು ಯೋಚಿಸಿದರೆ ಕರ್ನಾಟಕದಲ್ಲಿ ಗ್ರಂಥಾಲಯ ಚಳುವಳಿಯಲ್ಲಿ ಇನ್ನೂ ಬಹಳಷ್ಟು ಸಾಧಿಸಬೇಕಾಗಿದೆ. ಇದರಲ್ಲಿ ಎಲ್ಲರ ಪಾಲೂ ಬಹಳ ಮುಖ್ಯ. ಸಾಮಾನ್ಯ ಜನರು ಎಲ್ಲಿಯವರೆಗೆ ಮಾಹಿತಿಯನ್ನು ಪಡೆಯುವುದು ನಮ್ಮ ಹಕ್ಕು, ಅದಕ್ಕಾಗಿ ಗ್ರಂಥಾಲಯಗಳು ಸ್ಥಾಪನೆಯಾಗಬೇಕು ಮತ್ತು ವ್ಯವಸ್ಥಿತವಾಗಿ ನಡೆಯಬೇಕೆಂದು ಗಂಭೀರವಾಗಿ ಯೋಚಿಸುವುದಿಲ್ಲವೋ ಅಲ್ಲಿಯವರೆಗೆ ಗ್ರಂಥಾಲಯ ಬೆಳವಣಿಗೆ ಸಾಧ್ಯವಾಗುವುದಿಲ್ಲ.

ಇತ್ತೀಚೆಗೆ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರು ಮಾತನಾಡುತ್ತಾ ವಿಶ್ವವಿದ್ಯಾಲಯ, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಕಟಣೆಗಳನ್ನು ಖರೀದಿಸಿ ಅವುಗಳನ್ನು ರಿಯಾಯಿತಿ ದರದಲ್ಲಿ ಜಿಲ್ಲೆಗಳಿಗೆ ಹಂಚುವ ಯೋಜನೆಯನ್ನು ಹಾಕಿಕೊಳ್ಳಲಾಗಿದೆ, ಎಂದು ತಿಳಿಸಿದ್ದಾರೆ. ಈ ಯೋಜನೆಯನ್ನು ಹಳ್ಳಿಯ ಗ್ರಂಥಾಲಯಗಳು ಮತ್ತು ಸಾರ್ವಜನಿಕ ಗ್ರಂಥಾಲಯಗಳಿಗೂ ವಿಸ್ತರಿಸಿದರೆ ಹೆಚ್ಚು ಪ್ರಯೋಜನಕರವಾಗುತ್ತದೆ.

**ಹೆಚ್. ಆರ್. ನಾರಾಯಣಮೂರ್ತಿ**
ಆಯ್ಕೆ ಶ್ರೇಣಿ ಗ್ರಂಥಪಾಲಕರು, ತುಂಗಾ ಮಹಾವಿದ್ಯಾಲಯ, ತೀರ್ಥಹಳ್ಳಿ - ೫೭೭ ೪೩೨

# ವಾಸ್ತವ ಮತ್ತು ಆದರ್ಶ



ವಾಸ್ತವ ಮತ್ತು ಆದರ್ಶದ ಬಗೆಗಿನ ಚರ್ಚೆಗಳು ಎಂದೂ ಸರಳವಾಗಿಯಾಗಲಿ, ತಾತ್ಕಾಲಿಕವಾಗಿಯಾಗಲಿ ಮುಗಿಯುವಂಥವಲ್ಲ. ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾದ ಅರ್ಥಛಾಯೆಗಳನ್ನು ಪಡೆಯುತ್ತಾ ಬೆಳೆಯುವ ವಾಸ್ತವ ಮತ್ತು ಆದರ್ಶದ ಪರಿಕಲ್ಪನೆಗಳು ತನ್ನ ಗರ್ಭದಲ್ಲೇ ತನ್ನದೇ ಆದ ಕೆಲವಾದರೂ ನಿರ್ದಿಷ್ಟ ಸ್ವರೂಪವನ್ನು ಪಡೆದುಕೊಂಡಿರುತ್ತದೆ.

ವಾಸ್ತವದ ಕತ್ತಲೆಯಲ್ಲಿ ಆದರ್ಶದ ಬೆಳಕನ್ನು ಅರಸುವವರು ಕೆಲವರಿದ್ದರೆ, ಆದರ್ಶದ ಕನಸಲ್ಲಿ ವಾಸ್ತವದ ಬದುಕ ಮರೆಯುವವರು ಅನೇಕ ಮಂದಿ. ಆದರ್ಶ ಎನ್ನುವುದು ಬಯಕೆ, ಆಶಯ, ಗುರಿ ; ಆದರೆ ವಾಸ್ತವವೆಂಬುದು ಉಸಿರು, ದಿನದ ಬವಣೆ, ಹೊಟ್ಟೆ ಹಸಿವಿದ್ದಂತೆ. ಬದುಕುವುದು ವಾಸ್ತವ, ಬದುಕಿಗಾಗಿ ಕನಸ ಕಟ್ಟುವುದು ಆದರ್ಶ. ಮೊದಲು ಬದುಕೆಂದರೂ ಬದುಕಿಗೊಂದು ಅಥವಾ ಹಲವು ಆದರ್ಶ. ಹೀಗೆ ಒಂದು ಇನ್ನೊಂದರ ಪ್ರತಿಫಲನ.

ವಾಸ್ತವ ಮತ್ತು ಆದರ್ಶ - ಈ ಪರಿಕಲ್ಪನೆಗಳನ್ನು ಸಮಾಜದ ವಿವಿಧ ಸಾಂಸ್ಕೃತಿಕ ನೆಲೆಗಳಲ್ಲಿ ನೋಡಿದಾಗ, ಅವೆರಡೂ ಸಮಾಜದ ಅವಿಭಾಜ್ಯ ಅಂಗಗಳು ಎನಿಸುತ್ತದೆ. ಸಮಾಜಕ್ಕೆ ಅನೇಕ ವಾಸ್ತವವಿದೆ. ಅದರಂತೆಯೇ ಹಲವು ಆದರ್ಶಗಳಿರುತ್ತವೆ. ಸಮಾಜದ ಸರ್ವಾಂಗೀಣ ಸರ್ವೋದಯಕ್ಕೆ, ಕಲ್ಯಾಣಕ್ಕೆ ಪೂರಕವಾಗುವ ಎಲ್ಲ ಆದರ್ಶಗಳು ಮಾನ್ಯವಾದವು. ಅದರಂತೆ ಸಮಾಜವನ್ನು ಹಿಡಿದುನಿಂತಿರುವ ವಾಸ್ತವ ತನ್ನ ಸ್ಪಷ್ಟ ಸ್ವರೂಪದಲ್ಲಿ ಕಾಣಿಸಿಕೊಂಡಾಗ ಅದು ಎಷ್ಟೇ ವಿಕೃತವಾಗಿದ್ದರೂ ಅಷ್ಟೇ ಸತ್ಯವೂ ಹೌದು.

ವ್ಯಕ್ತಿಗತ ನೆಲೆಯಲ್ಲಿ ವಾಸ್ತವ ಮತ್ತು ಆದರ್ಶದ ಪರಿಕಲ್ಪನೆಗಳು ಕೇವಲ ಪದಗಳಾಗಿ ಇರದೇ ಅವರವರ ವ್ಯಕ್ತಿತ್ವವನ್ನು ರೂಪಿಸುವ ಅತ್ಯಂತ ಪ್ರಮುಖ ಅಂಶಗಳಲ್ಲಿ ಮುಖ್ಯವಾದವು. ಪ್ರತಿಯೊಬ್ಬರೂ ತಮ್ಮ ತಮ್ಮ ಸ್ಥಿತಿ-ಗತಿಯ ವಾಸ್ತವವನ್ನು, ತಮ್ಮ ತಮ್ಮ ಅಂತರಂಗದ ವಾಸ್ತವವನ್ನು, ತಮ್ಮ ತಮ್ಮ ಇತಿ-ಮಿತಿಯನ್ನು ಅರಿತುಕೊಂಡಾಗ ಬದುಕುವ ಕಲೆಯನ್ನು ರೂಢಿಸಿಕೊಳ್ಳಬಹುದು ಮತ್ತು ಅದಕ್ಕೆ ಪೂರಕವಾಗಿ ಆದರ್ಶವನ್ನು ಇಟ್ಟುಕೊಂಡು ಬಾಳ್ವೆ ನಡೆಸಬಹುದು.

ಸಾಮಾನ್ಯವಾಗಿ ವಾಸ್ತವದ ಅರಿವಿರುವವರಿಗೆ ಕನಸುಗಳು ಹೆಚ್ಚಾಗಿ ಬೀಳುವುದಿಲ್ಲ. ಆದರ್ಶದ ಅಮಲಿನಲ್ಲಿ ಇರುವವರಿಗೆ ವಾಸ್ತವದ ಸಂಪೂರ್ಣ ಸ್ವರೂಪ ತಿಳಿದಿರುವುದಿಲ್ಲ. ವಾಸ್ತವ ಮತ್ತು ಆದರ್ಶ ಪರಸ್ಪರ ವಿರೋಧವೇನಲ್ಲ. ವಾಸ್ತವದಲ್ಲಿ ಬದುಕುತ್ತಾ ಮುಂದಿನ ದಿನಗಳಲ್ಲಿ ಹಾಗಿರಬೇಕು, ಹೀಗಿರಬೇಕೆಂದುಕೊಳ್ಳುವುದು ತಪ್ಪೇನಲ್ಲ. ಆದರೆ, ಕಟುವಾಸ್ತವದ ಮಧ್ಯದಲ್ಲಿದ್ದು ಏರಲಾರದ ಆದರ್ಶವನ್ನು ಕಣ್ಮುಂದೆ ಇಟ್ಟುಕೊಂಡು, ವಾಸ್ತವವನ್ನು ಮರೆಯುವುದು ಅಥವಾ ನಿರ್ಲಕ್ಷಿಸುವುದು ಸರಿಯೇ ?

ಬದುಕಿಗೆ ಆಸೆಯ ಆಸರೆ ಬೇಕು. ಬೆಚ್ಚನೆಯ ಕನಸುಗಳು ಜೊತೆಗಾರನಾಗಿ ಬರಬೇಕು, ಬಯಕೆಗಳೆಲ್ಲಾ ಹೂವಾಗಿ ಅರಳಿ ಘಮಘಮಿಸಬೇಕು – ಎಂದೆಲ್ಲಾ ಮನಸ್ಸು ಚಡಪಡಿಸುತ್ತಿರುವಾಗ, ಆ ದಿನದ ಬದುಕೇ ಕಡುಕಷ್ಟವಾಗಿ, ನಿರುದ್ಯೋಗಿಯಾಗಿದ್ದು, ಊಟವಿಲ್ಲದೆ ಅಲೆದಾಡುವಂತಾದರೆ ಕನಸುಗಳಿಗಿಂತ ವಾಸ್ತವದ ಬಗ್ಗೆ ಎಚ್ಚರವಿರಬೇಕು ಅನ್ನುವುದು ತುಂಬಾ ಮುಖ್ಯ.

ಸಾಮಾನ್ಯವಾಗಿ ನಾವೆಲ್ಲ ಆದರ್ಶದ ಮಾತುಗಳನ್ನಾಡುತ್ತಾ ಕೈಲಾಗದವರಂತೆ ಮಾತಿನಲಿ ಮನೆಕಟ್ಟಿ, ವಾಸ್ತವದಲಿ ಸುಡು ಬಿಸಿಲಿನಲ್ಲಿ ನಿಂತಿರುತ್ತೇವೆ. ನಮಗೆ ವಾಸ್ತವವನ್ನು ಕಣ್ಣೆದುರಿಗಿಟ್ಟುಕೊಂಡು ಕೂಲಂಕಷವಾಗಿ ನೋಡಲು ಆಗುವುದಿಲ್ಲ. ಕಾರಣ, ವಾಸ್ತವವೆಂಬ ಕನ್ನಡಿಯನ್ನು ನೋಡಲು, ಸ್ಪರ್ಶಿಸಲು, ಅದರ ಆಳ-ಅಗಲ ತಿಳಿಯಲು ಮತ್ತು ಅದರ ಗರ್ಭದಲ್ಲಿರುವ ಸವಾಲುಗಳಿಗೆ ಸ್ಪಂದಿಸಲು ನಾವು ಹೆದರುತ್ತೇವೆ.

ಇಂದಿನ ಬಗ್ಗೆ ನಿರ್ಲಕ್ಷ್ಯ, ಮುಂದೆಂದೋ ಏನನ್ನೋ ಸಾಧಿಸುವೆನೆಂಬ ಕನಸು ಹೇಗೆ ತಾನೆ ನಿಜವಾದೀತು ? ಇಂದು ನಾವೇನನ್ನು ಮಾಡುತ್ತೇವೆಯೋ, ಯೋಚಿಸುತ್ತೇವೆಯೋ ಅದರ ಫಲವನ್ನೇ ನಾವು ಮುಂದೆಯೂ ಪಡೆಯುವುದು. ಬದುಕನ್ನು ಹಸನುಗೊಳಿಸುವ ಆದರ್ಶ ಜೀವನಕ್ಕೆ ಬೇಕೇಬೇಕು. ಆದರೆ, ಆದರ್ಶದ ಹೆಸರಿನಲ್ಲಿ ಬರಿ ಮಾತಾಗಲಿ, ತೋರಿಕೆಯ ನಡವಳಿಯಾಗಲಿ ಅದರಿಂದೇನೂ ಉಪಯೋಗವಿಲ್ಲ. ಇಂದಿನ ಸಾಮಾಜಿಕ ಸನ್ನಿವೇಶದಲ್ಲಿ ವಾಸ್ತವಕ್ಕೆ ಧಕ್ಕೆ ಬರದಂತೆ ಸಮುದಾಯದ ಹಿತಚಿಂತನೆಯಿಂದ ಕೂಡಿದ ನಡವಳಿಕೆ ಯಾವತ್ತೂ ಮಾನ್ಯವಾದದ್ದು. ಕನಸುಗಳ ಕನವರಿಕೆಯಲಿ ಕರಗಿಹೋಗದೆ, ಕನಸುಗಳ ಕೈಹಿಡಿದು ವಾಸ್ತವದ ಅರಿವಿನೊಂದಿಗೆ ಆ ಕ್ಷಣದಲ್ಲಿ ಹೆಜ್ಜೆ ಹಾಕುವುದು ಉತ್ತಮ ಮನಃಸ್ಥಿತಿ. ಆದರ್ಶದ ಮೋಡಿಗೆ ಒಳಗಾಗುವುದರಿಂದ ವಾಸ್ತವದ ಅರ್ಥವಂತಿಕೆ ಕಳೆದುಹೋಗಬಾರದು. ಆದರ್ಶವು ವಸ್ತುಸ್ಥಿತಿಗೆ ಹತ್ತಿರವಿದ್ದಾಗ ಮಾತ್ರ ವಾಸ್ತವ ಅದರ ಧಾರಣ ಸಾಮರ್ಥ್ಯವನ್ನು ಹೊಂದಿರುತ್ತದೆ. ವಾಸ್ತವ ಮತ್ತು ಆದರ್ಶ ಲೀನವಾಗುವ ಪ್ರಬುದ್ಧ ಘಳಿಗೆಯಲ್ಲಿ ಜೀವನ ತನ್ನ ಚಲನಶೀಲತೆಯನ್ನು ಉಳಿಸಿಕೊಂಡಾಗ ಬದುಕು ಅದ್ಭುತವಾಗುತ್ತದೆ.

ವಸ್ತುಸ್ಥಿತಿಯನ್ನು ಕಾಣಲಾರದ ಗೈರುಹಾಜರಿಯೇ ಆದರ್ಶವನ್ನು ಹೆಣೆಯುತ್ತಿರುವ ಹಗಲುಗನಸುಗಳ ಮನಸ್ಸು. ಮುಂದೇನು ಮಾಡಬೇಕೆಂದು ಯೋಚಿಸುವುದು ಆರೋಗ್ಯಕರ. ಹಾಗೆಯೇ ಮುಂದೆ ನಾವೇನು ಮಾಡಬೇಕೆಂದು ಪ್ಲಾನ್ ಮಾಡುವುದೂ ಅಷ್ಟೇ ಸರಿ. ಆದರೆ, ನಾವಂದುಕೊಂಡ ಹಾಗೆ ಆಗಬೇಕಾದರೆ ನಾವು ಆ ದಿಕ್ಕಿನೆಡೆಗೆ ಸಾಗಬೇಕಾಗುತ್ತದೆ. ಅದಕ್ಕಾಗಿ ಅನೇಕ ವಿಷಯಗಳ ಕಡೆ ದಿವ್ಯ ನಿರ್ಲಕ್ಷ್ಯ ವಹಿಸಬೇಕಾಗುತ್ತದೆ. ಗುರಿಯೊಂದನ್ನು ಮುಂದಿಟ್ಟುಕೊಂಡು ಅದನ್ನು ಮುಟ್ಟುವ ಪ್ರಯತ್ನ ತುಂಬ ಶ್ಲಾಘನೀಯ. ಬದಲಿಗೆ ಹಾಗೆ ಮಾಡಬೇಕು, ಹೀಗೆ ಮಾಡಬೇಕು, ಹಾಗಾಗಬೇಕು ಎಂದು ಬೇರೆಯವರನ್ನು ನಂಬಿಸುತ್ತಾ, ತನ್ನನ್ನೂ ತಾನು ನಂಬಿಸಲು ಪ್ರಯತ್ನಿಸುತ್ತಾ ಮತ್ತೇನೋ ಮಾಡುತ್ತಾ ಕಾಲ ಕಳೆಯುವವರಿಗೆ ವಾಸ್ತವ ಅನ್ನುವುದು ನರಕ. ಆದರ್ಶದ ಅಮಲಿನಿಂದ ಹಗಲುಗನಸಿನೊಂದಿಗೆ ತೂರಾಡುತ್ತಾ ಬದುಕುವುದೇ ಅವರ ದಿನದ ಪಾಡು.

ಸಮಾಜದ ಹಿರಿಯರೆಲ್ಲಾ ತಮ್ಮ ತಮ್ಮ ಆದರ್ಶಗಳ ಭಾರವನ್ನು ಕಿರಿಯರ ತಲೆಯ ಮೇಲೆ ಹೇರುತ್ತಿರುತ್ತಾರೆ. ಇದು ಎಷ್ಟು ಸರಿ ? ಯಾರದೋ ಅಪೇಕ್ಷೆಗೆ, ಇನ್ಯಾರದೋ ಒತ್ತಾಯಕ್ಕೆ, ಮತ್ಯಾರದೋ ಆಗ್ರಹಕ್ಕೆ ನಾವು ಇತರರು ಹೊರಿಸುವ ಆದರ್ಶವನ್ನು ಹೊರುವುದು ಸಮಂಜಸವಲ್ಲ.

ನಮಗೆಲ್ಲಾ ಮಹತ್ವಾಕಾಂಕ್ಷೆಗಳು ಇದ್ದದ್ದೇ. ಆದರೆ, ಅವು ನಮ್ಮ ಇತಿ-ಮಿತಿಗಳ ಚೌಕಟ್ಟಿನಲ್ಲಿರುವುದು ಉತ್ತಮ. ಆಸೆ ಪಡಬೇಕು, ದುರಾಸೆ ಸಲ್ಲದು. ಅವರವರ ಶಕ್ತಿ ಸಾಮರ್ಥ್ಯಗಳಿಗನುಸಾರವಾಗಿ ಸಾಧಿಸಬಹುದಾದ ಗುರಿಗಳನ್ನಿಟ್ಟುಕೊಂಡು, ಆದರ್ಶವನ್ನು ಇಟ್ಟುಕೊಂಡು ಮುನ್ನಡೆಯಬೇಕು. ಅದಕ್ಕಾಗಿ ಪ್ರಾಮಾಣಿಕ ಪ್ರಯತ್ನ ನಡೆಸಬೇಕು. ಹಾಗಿಲ್ಲದಿದ್ದರೆ, ಅಂದುಕೊಂಡದ್ದು ಕೈಗೂಡದೆ ವ್ಯಕ್ತಿ ಅತೀವನೋವು ಅನುಭವಿಸುತ್ತಾ ವಿಲವಿಲನೆ ಒದ್ದಾಡುತ್ತಾನೆ. ಅದರಿಂದ ಮನಸ್ಸಿನ ನೆಮ್ಮದಿ ಹಾಳಾಗುತ್ತದೆ. ಬಯಸಿದ್ದು ಪಡೆಯಲೇಬೇಕೆಂಬ ಹಠದಿಂದ ವ್ಯಕ್ತಿ ಆಕ್ರಮಣಕಾರೀ ಪ್ರವೃತ್ತಿ ಬೆಳೆಸಿಕೊಂಡು, ಅಡ್ಡದಾರಿ ಹಿಡಿದು, ಅನ್ಯಾಯ, ಅಧರ್ಮದಲ್ಲಿ ತೊಡಗುತ್ತಾನೆ. ಮತ್ತೆ ಕೆಲವರು ಕೀಳರಿಮೆಯಿಂದ ಬಳಲುತ್ತಾ ಆತ್ಮವಿಶ್ವಾಸವನ್ನು ಕಳೆದುಕೊಂಡು ನಿರಾಸೆಯಿಂದ ಪರಾವಲಂಬಿಯಾಗಿ ಬದುಕಬೇಕಾಗುತ್ತದೆ. ಆದ್ದರಿಂದ ನಾವು ನಮ್ಮ ಮನಸ್ಸನ್ನು ವಿವೇಚನೆ ಮಾಡುವ ಅಭ್ಯಾಸಕ್ಕೆ ಒಗ್ಗಿಸಿ, ಪ್ರತಿಯೊಂದನ್ನೂ ವಸ್ತುನಿಷ್ಠವಾಗಿ ಅತ್ಯಂತ ಪ್ರಾಮಾಣಿಕವಾಗಿ ನೋಡುವುದನ್ನು ಕಲಿಯಬೇಕು.

ದಿನದ ಎಷ್ಟೋ ವ್ಯಕ್ತಿಗತ ಸಮಸ್ಯೆಗಳಿಗೆ ಕಾರಣ ನಾವು ನಮ್ಮ ವಾಸ್ತವವನ್ನು ವಸ್ತುನಿಷ್ಠವಾಗಿ ನೋಡದೇ ಇರುವುದು. ನಮ್ಮ ಮನೆ, ಮನ, ಸುತ್ತಮುತ್ತಲಿನ ಪರಿಸರವನ್ನು ಭವ್ಯವಾಗಿ ಕಲ್ಪಿಸಿಕೊಂಡು ಬಾಳುವುದಕ್ಕಿಂತ, ಇಲ್ಲದೇ ಇರುವ ಆತ್ಮೀಯತೆ, ಪ್ರೀತಿ, ಸ್ನೇಹಕ್ಕೆ ಕನವರಿಸುವುದಕ್ಕಿಂತ, ಇರುವುದನ್ನು ಒಪ್ಪಿಕೊಳ್ಳುವುದು ಮಾತಿನಲ್ಲಿ ಹೇಳುವಷ್ಟು ಸರಳ ಸುಲಭವಲ್ಲದಿದ್ದರೂ ಅಸಾಧ್ಯವಾದದ್ದೇನಲ್ಲ.

ಬದುಕೆಂಬುದು ಹೇಗೋ ನಡೆದುಹೋಗುತ್ತದೆ. ಆದರ್ಶ, ವಾಸ್ತವ ಇತ್ಯಾದಿ ಯಾವುದರ ಪರಿವೆಯೇ ಇಲ್ಲದೆ, ಹೇಗೋ ಬದುಕುತ್ತಿರುವ ಬದುಕು ನಡೆಸಿಕೊಂಡು ಹೋದಕಡೆ ನಡೆಯುವವರೇ ಹೆಚ್ಚು ಮಂದಿ. ಅಂತೆಯೇ ವಿದ್ಯಾವಂತರು, ತಿಳುವಳಿಕೆಯುಳ್ಳವರು, ಆಲೋಚನಪರವಾದವರು, ಎಲ್ಲವನ್ನೂ ಚಿಂತಿಸಿ ತಾವು ತಮ್ಮ ಬದುಕ ಕೈಹಿಡಿದು ನಡೆಸುವವರಿದ್ದಾರೆ. ಇಂಥವರು ವಾಸ್ತವ ಮತ್ತು ಆದರ್ಶದ ನಡುವೆ ಕಂದರವನ್ನು ಉಂಟುಮಾಡಿಕೊಳ್ಳದೆ ಸದಾ ಕ್ರಿಯಾಶೀಲರಾಗಿ, ಯಶಸ್ವಿಯಾಗಿ ಬಾಳುತ್ತಿದ್ದಾರೆ.

ನಮಗೆ ಆದರ್ಶಗಳು, ಕನಸುಗಳು ಬೇಕು. ಹಾಗೆಯೇ ವಾಸ್ತವದ ಸ್ಪಷ್ಟತೆ ಇರಬೇಕು. ವಾಸ್ತವದ ಬದುಕು ಹಸನಾಗುವುದು, ಆಹ್ಲಾದಕರವಾಗಿ ಶಾಂತಿ, ನೆಮ್ಮದಿಯಿಂದ ಮುನ್ನಡೆಯುವುದೂ ಬೇಕು. ಅದಕ್ಕಾಗಿ ಆದರ್ಶದ ನಿಶೆಯಿಂದ ಕೆಳಗಿಳಿದು, ವಾಸ್ತವದ ಅಂಗಳದಲ್ಲಿ ಬಿದ್ದಿರುವ ಕೊಳಕು, ಅಶಾಂತಿ, ಗಡಿಬಿಡಿ, ದ್ವೇಷ, ಆತಂಕ ಇತ್ಯಾದಿ ಹಾನಿಕಾರಕಗಳನ್ನು ದಿನವೂ ಗುಡಿಸಿ ಬಿಸಾಡುತ್ತಾ, ಶಾಂತಿ, ನೆಮ್ಮದಿ, ಸಹಕಾರ, ಪ್ರೀತಿ-ವಿಶ್ವಾಸಗಳನ್ನು ದಿನವೂ ವಾಸ್ತವಕ್ಕಿಳಿಸುವ ಕಾಯಕ ಮಾಡುತ್ತಾ ಜಂಗಮರಾಗಿ ಬದುಕೋಣ.

**ಸುಜಾತ**
ನಂ. ೧೭೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೧೯

**HOSATHU** Kannada Monthly / April 2004 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14

# ಉತ್ತಮ ಗುಣಮಟ್ಟದ ಶರ್ಟ್‌ಗಳು
# ಕೈಗೆಟಕುವ ಬೆಲೆಗಳಲ್ಲಿ

ಬೆಲೆ
ರೂ. 179 - ರೂ. 199*

## ಸೋಹಮ್
ಶರ್ಟ್‌ಗಳು






## ಪ್ರಿಯದರ್ಶಿನಿ
ಕೈಮಗ್ಗದ ತವರು

ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿಯಮಿತ

ನೊಂದಾಯಿತ ಕಛೇರಿ : ನಂ. ೨, ೨ನೇ ಮಹಡಿ, ಎನ್. ಕೆ. ಸಂಕೀರ್ಣ, ಕೇಶ್ವಾಪುರ, ಹುಬ್ಬಳ್ಳಿ-೫೮೦ ೦೨೩
ನಂ. ೧, ಟ್ಯಾಂಕ್ ರಸ್ತೆ, ವಾಣಿಜ್ಯ ಸಂಕೀರ್ಣ, ಬೆಂಗಳೂರು-೫೬೦ ೦೪೨ E-mail : khdc@vsnl.net

ಎಲ್ಲಾ ಪ್ರಿಯದರ್ಶಿನಿ ಹ್ಯಾಂಡ್‌ಲೂಮ್ಸ್‌ಗಳಲ್ಲಿ ಲಭ್ಯ : **ಬೆಂಗಳೂರು :** • "ಶರ್ಟ್ ಶಾಪ್", ನಂ ೧, ಟ್ಯಾಂಕ್ ರಸ್ತೆ, ಅಲಸೂರು, ಫೋನ್ : ೨೫೫೮೫೪೨೪ • ನಂ. ೨೨, ಕಮರ್ಷಿಯಲ್ ಸ್ಟ್ರೀಟ್, ಫೋನ್ : ೨೫೫೩.೨೧೧೦೮ • ನಂ. ೨೪, ೫ನೇ ಮುಖ್ಯರಸ್ತೆ, ಜಯಮಹಲ್ ಎಕ್ಸ್‌ಟೆನ್‌ಶನ್, ಫೋನ್ : ೨೩೫೩೫೭೪೭ • ಬಿಡಿಎ ಶಾಪಿಂಗ್ ಕಾಂಪ್ಲೆಕ್ಸ್, ಕೋರಮಂಗಲ, ಫೋನ್ : ೨೫೬೩೧೭೫೮ • ೧೧ನೇ ಕ್ರಾಸ್, ಮಲ್ಲೇಶ್ವರಂ, ಫೋನ್ : ೨೩೪೬೪೪೨೪ • ಕೆಎಚ್‌ಡಿಸಿ. ಶಾಪಿಂಗ್ ಕಾಂಪ್ಲೆಕ್ಸ್, ಎಮ್.ಜಿ ರಸ್ತೆ, ಫೋನ್ : ೨೫೫೩.೨೧೧೭೨ • ಸಫೀನಾ ಪ್ಲಾಝಾ, ಇನ್‌ಫೆಂಟ್ರಿ ರಸ್ತೆ, ಫೋನ್ : ೨೫೫೩.೨೧೫೪೩ • ಕಾರ್ಪೊರೇಶನ್ ಶಾಪಿಂಗ್ ಕಾಂಪ್ಲೆಕ್ಸ್, ಸುಭಾಷ್ ನಗರ, ಫೋನ್ : ೨೨೨೬೯೪೭೬ • ಜಯನಗರ ಶಾಪಿಂಗ್ ಕಾಂಪ್ಲೆಕ್ಸ್, ೪ನೇ ಬ್ಲಾಕ್, ಫೋನ್ : ೨೬೫೫೨೯೦೫ • ಮಹಾವೀರ ಶಾಪಿಂಗ್ ಕಾಂಪ್ಲೆಕ್ಸ್, ಕೆ. ಜಿ. ರಸ್ತೆ, ಫೋನ್ : ೨೨೨೬೨೮೩೬ • ರಲ್ಲಾರಾಮ್ ಬಿಲ್ಡಿಂಗ್, ಪಿ. ಕಾಳಿಂಗರಾವ್ ರಸ್ತೆ, ಫೋನ್ : ೨೨೨೩೯೧೨೯ • ಇಎಸ್‌ಆಯ್ ಹಾಸ್ಪಿಟಲ್ ಹತ್ತಿರ, ರಾಜಾಜಿನಗರ, ಫೋನ್ : ೨೩೪೦೦೦೦೧೦ **ಬೆಳಗಾವಿ :** • ಶಾನಬಾಗ್ ಚೇಂಬರ್ಸ್, ಕಿರ್ಲೋಸ್ಕರ್ ರಸ್ತೆ, ಫೋನ್ : ೯೫೮೩೧ ೨೪೬೪೧೨೬ **ಹುಬ್ಬಳ್ಳಿ** • ಎಚ್‌ಡಿಎಮ್‌ಸಿ ಕಾಂಪ್ಲೆಕ್ಸ್, ಇಂದಿರಾ ಗ್ಲಾಸ್ ಹೌಸ್ ಎದುರಿಗೆ, ಬಸ್ ನಿಲ್ದಾಣದ ಹತ್ತಿರ, ಫೋನ್ : ೯೫೮೩೬೨ ೩೫೨೨೪ • ನ್ಯೂಕಾಟನ್ ಮಾರ್ಕೆಟ್, ಫೋನ್ : ೯೫೮೩೬೨ ೩೫೨೦೬೦ **ಮಂಗಳೂರು :** • ಕಾರ್ನಾಡ್ ಸದಾಶಿವ ರಾವ್ ರಸ್ತೆ, ಫೋನ್ : ೯೫೮೨೪೨ ೪೪೧೧೮೩ **ಮೈಸೂರು :** • ಮುನಸಿಪಲ್ ಶಾಪಿಂಗ್ ಕಾಂಪ್ಲೆಕ್ಸ್, ಧನ್ವಂತ್ರಿ ರಸ್ತೆ, ಫೋನ್ : ೯೫೮೨೧೨ ೪೨೩೪೧೩ **ತುಮಕೂರು :** • ಬಿಹೆಚ್ ರಸ್ತೆ, ಫೋನ್ : ೯೫೮೧೬೨ ೨೭೩೧೧

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna